# ಸಂಡೂರು ತಾಲೂಕಿನ ಪ್ರವಾಸಿ ತಾಣಗಳು

(೨೦೧೮-೧೯ ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪ್ರೌಢಪ್ರಬಂಧ)

ಸಂಶೋಧಕರು
ನೋಂದಣಿ ಸಂಖ್ಯೆ : ೧೮೦೧೦೮೦೩೦೦೦೭





ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬
೨೦೧೯

# ಸಂಡೂರು ತಾಲೂಕಿನ ಪ್ರವಾಸಿ ತಾಣಗಳು

(೨೦೧೮-೧೯ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರೌಢ ಪ್ರಬಂಧ)

ಸಂಶೋಧಕರು

ನೋಂದಣಿ ಸಂಖ್ಯೆ : ೧೮೦೧೦೮೦೩೦೦೦೭




ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಿದ್ಯಾರಣ್ಯ-೫೮೩೨೭೬

೨೦೧೯

# ಪರಿವಿಡಿ

## ಅಧ್ಯಾಯ-೧ ಪ್ರಸ್ತಾವನೆ

೧.೧ ಅಧ್ಯಯನದ ಸಮೀಕ್ಷೆ

೧.೨ ಅಧ್ಯಯನದ ವ್ಯಾಪ್ತಿ

೧.೩ ಅಧ್ಯಯನದ ಉದ್ದೇಶ

೧.೪ ಅಧ್ಯಯನದ ವಿಧಾನ

೧.೫ ಅಧ್ಯಯನದ ಸ್ವರೂಪ

## ಅಧ್ಯಾಯ-೧

### ೧. ಪ್ರಸ್ತಾವನೆ

ಪ್ರವಾಸವೆಂದರೆ ಕಿರಿಯರಿಂದ ಹಿರಿಯರವರೆಗೆ ಎಲ್ಲರಿಗೂ ಇಷ್ಟ. ಎಲ್ಲವನ್ನೂ ತ್ಯಜಿಸಿದ ಸನ್ಯಾಸಿಗಳೂ ಕೂಡ ಪ್ರವಾಸ ಪ್ರಿಯರಾಗಿ ಊರೂರು ಸಂಚರಿಸುವುದನ್ನು ಕಾಣುತ್ತೇವೆ. ಬದಲಾವಣೆಯನ್ನು ಬಯಸುವುದು ಮಾನವನ ಪ್ರವೃತ್ತಿ. ಒಂದೇ ಸ್ಥಳದಲ್ಲಿ ಒಂದೇ ಕಛೇರಿಯಲ್ಲಿ ಒಂದೇ ರೀತಿಯ ಕೆಲಸವನ್ನು ಮಾಡಿ ಮಾಡಿ ಬೇಸರಗೊಂಡವರಿಗೆ ದೈನಂದಿನ ಜಂಜಾಟಗಳಿಂದ ದೂರವಾಗಿ ಕೆಲವು ದಿನಗಳು ಬಿಡುವು ಮಾಡಿಕೊಂಡು ಎಲ್ಲಾದರೂ ಹೊರಗೆ ಹೋಗಿ ಬರಬೇಕೆನಿಸುವುದು ಸಹಜ. ಕುಟುಂಬದ ಸದಸ್ಯರು ಅಥವಾ ಗೆಳೆಯರೊಂದಿಗೆ ಕೈಗೊಳ್ಳುವ ಈ ಪ್ರವಾಸ ನಮ್ಮನ್ನು ಜೀವನದ ಏಕತಾನತೆಯಿಂದ ಪಾರು ಮಾಡುತ್ತದೆ. ಮನಸ್ಸಿಗೆ ಹೊಸ ಚೈತನ್ಯವನ್ನು ತಂದುಕೊಡುತ್ತದೆ.

ಪ್ರವಾಸದಿಂದ ನಮಗಾಗುವ ಪ್ರಯೋಜನಗಳು ಹತ್ತು ಹಲವು. 'ದೇಶ ಸುತ್ತು, ಕೋಶ ಓದು' ಎಂದು ನುಡಿದಿದ್ದಾರೆ. ಹಿರಿಯರು ಪ್ರವಾಸದಿಂದ ನಮ್ಮ ಜ್ಞಾನ ವಿಕಾಸವಾಗುತ್ತದೆ. ಅನುಭವ ಆಳವಾಗುತ್ತದೆ. ನಾಡಿನ ಸಂಸ್ಕೃತಿ-ಆಚಾರ ವಿಚಾರಗಳ ಅರಿವು ಮೂಡಿಸುತ್ತದೆ. ಓದಿ ಕಲಿಯುವುದಕ್ಕಿಂತ ನೋಡಿ ಕಲಿಯುವುದು ಲೇಸು. ವಿಜಯನಗರ ವೈಭವ ಕುರಿತು ವಿದ್ಯಾರ್ಥಿಗಳು ತರಗತಿಯಲ್ಲಿ ಕೇಳಿದಕ್ಕಿಂತ ಹಂಪೆಗೆ ಖುದ್ದಾಗಿ ಭೇಟಿ ನೀಡಿದಾಗ ಹೆಚ್ಚು ಗ್ರಹಿಸಿಕೊಳ್ಳಬಹುದು. ಇದೇ ಕಾರಣಕ್ಕಾಗಿ ಶೈಕ್ಷಣಿಕ ವಲಯದಲ್ಲಿ ಅಧ್ಯಯನ ಪ್ರವಾಸಗಳನ್ನು ಏರ್ಪಡಿಸಲಾಗುತ್ತದೆ. ಕನ್ನಡ ನಾಡು ಪ್ರವಾಸಿಗರ ಸ್ವರ್ಗ, ಗುಡಿ-ಗೋಪುರ, ಕೋಟೆ-ಕೊತ್ತಳ, ಕಾಡು-ಕಡಲು, ನದಿ-ಜಲಪಾತ, ಅರಮನೆ-ಉದ್ಯಾನ, ಮೃಗಾಲಯ ಇಲ್ಲಿ ಇಂಥದು ಇಲ್ಲ ಅನ್ನುವ ಹಾಗಿಲ್ಲ. ಇಲ್ಲಿ ಕಲ್ಲು-ಕಲ್ಲುಗಳೂ ಕಥೆ ಹೇಳುತ್ತವೆ. ದೇವಾಲಯದ ಕಂಬಗಳೂ ನಾದ ಹೊಮ್ಮಿಸುತ್ತವೆ. ಕದಂಬರು, ಚಾಲುಕ್ಯರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರು ಮತ್ತು ಪಾಳೆಗಾರರು ಮೊದಲಾದ ರಾಜವಂಶಗಳು ಆಳಿದ ವೈಭವೋಪೇರಿತ ನಾಡು ನಮ್ಮದು.

ವೈವಿಧ್ಯಮಯ ಪ್ರವಾಸಿ ತಾಣಗಳನ್ನು ಹೊಂದಿರುವ ರಾಜ್ಯ ಕರ್ನಾಟಕ. ಕೋಟೆ, ಅರಮನೆ, ಪ್ರಾಚೀನ ಗುಡಿಗಳು ಮುಂತಾದವು ನಾಡಿನ ಗತವೈಭವವನ್ನು ಸಾರುತ್ತದೆ. ಗಿರಿಧಾಮಗಳು, ಜಲಪಾತಗಳು, ಉದ್ಯಾನವನಗಳು ಪ್ರಕೃತಿ ವೈಭವಕ್ಕೆ ಸಾಕ್ಷಿ ನುಡಿಯುತ್ತವೆ.

ಕಡಲು ಕಿನಾರೆಗಳನ್ನು ಒಳಗೊಂಡ ಕರಾವಳಿ ಪ್ರದೇಶ ಸೃಷ್ಟಿ ವೈಶಿಷ್ಟ್ಯಗಳಿಗೆ ಕನ್ನಡಿ ಹಿಡಿಯುತ್ತದೆ. ಆಚಾರ ವಿಚಾರ, ಆಹಾರ ಪದ್ಧತಿ, ಉಡುಗೆ ತೊಡುಗೆ, ಸಂಸ್ಕೃತಿ ಸಂಪ್ರದಾಯಗಳೂ ಇಲ್ಲಿ ಪ್ರದೇಶದಿಂದ ಪ್ರದೇಶಕ್ಕೆ ಮಾರ್ಪಾಡಾಗುತ್ತವೆ. ಕರ್ನಾಟಕ ಚರಿತ್ರೆಯಲ್ಲಿ ಸಂಡೂರು ತಾಲ್ಲೂಕಿಗೇ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಇಲ್ಲಿ ಮುಖ್ಯವಾಗಿ ಪ್ರವಾಸಿ ತಾಣಗಳ ಬಗ್ಗೆ ಹೆಚ್ಚು ಒತ್ತು ಕೊಡುವ ನಿಟ್ಟಿನಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಯಿತು. ಈ ಪ್ರದೇಶವು ಕಬ್ಬಿಣ ಗಣಿಗಾರಿಕೆಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಖ್ಯಾತಿ ಪಡೆದಿದೆ. ಸಂಡೂರು ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕು ಮತ್ತು ತಾಲ್ಲೂಕಿನ ಆಡಳಿತ ಕೇಂದ್ರ. ಸಂಡೂರು ಪಟ್ಟಣವು ಬಳ್ಳಾರಿ ಜಿಲ್ಲೆಯ ಒಂದು ಪ್ರವಾಸಿ ತಾಣ. ಇದು ಬಳ್ಳಾರಿಯಿಂದ ನೈರುತ್ಯದಲ್ಲಿ ೪೮ಕಿ.ಮೀ ಹಾಗೂ ಬೆಂಗಳೂರಿನಿಂದ ವಾಯವ್ಯ ದಿಕ್ಕಿನಲ್ಲಿ ೩೫೪ಕಿ.ಮೀ ದೂರದಲ್ಲಿದೆ. ಕೆಲವೇ ವರ್ಷಗಳ ಹಿಂದೆ ಸಂಡೂರು ೨೦ ಹಳ್ಳಿಗಳ ೧೧೦೦೦ ಸಾವಿರ ಜನ ಸಂಖ್ಯೆಯ ೧೬೦ ಚದುರ ಕಿ.ಮೀ ಭೂವಿಸ್ತಾರದ ಒಂದು ಸ್ವತಂತ್ರ್ಯ ಪುಟ್ಟ ರಾಜ್ಯವಾಗಿತ್ತು. ಆದರೆ ಈಗ ೮೮ ಹಳ್ಳಿಗಳನ್ನು ಒಳಗೊಂಡ ವಿಸ್ತಾರವಾದ ತಾಲ್ಲೂಕು ಆಗಿದೆ. ಕ್ರಿ.ಶ.೧೭೨೮ ರಿಂದ ೧೯೫೬ ರವರೆಗೆ ಘೋರ್ಪಡೆ ವಂಶದವರು ಸಂಡೂರು ರಾಜ್ಯವನ್ನು ಆಳಿದರು.

ಕರ್ನಾಟಕ ಏಕೀಕರಣದ ಕಾಲಕ್ಕೆ ೧೯೫೬ರಲ್ಲಿ ಸಂಡೂರು ಮೈಸೂರು ರಾಜ್ಯಕ್ಕೆ ಸೇರಿ, ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿ ರೂಪುಗೊಂಡಿತು. ಇತಿಹಾಸ ಪೂರ್ವಕಾಲ ಹಾಗೂ ಪುರಾಣಗಳ ಕಾಲದಿಂದ ಸಂಡೂರು ತನ್ನದೇ ಆದ ಸಾಂಸ್ಕೃತಿಕ ಇತಿಹಾಸ ಪರಂಪರೆಯನ್ನು ಹೊಂದಿದೆ. ಅಲ್ಲದೇ ವಿಶೇಷ ಭೌಗೋಳಿಕ ಖನಿಜ ಸಂಪತ್ತು, ಪ್ರಾಕೃತಿಕ ಸೌಂದರ್ಯ ಸಂಪತ್ತು ಹಿತಕರ ಹವಾಗುಣವನ್ನು ಹೊಂದಿ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ.

ಸಂಡೂರಿನ ಉತ್ತರದಲ್ಲಿ ಹೊಸಪೇಟೆ ತಾಲ್ಲೂಕು, ಪೂರ್ವದಲ್ಲಿ ಬಳ್ಳಾರಿ ತಾಲ್ಲೂಕು ಮತ್ತು ಆಂಧ್ರಪ್ರದೇಶ, ಆಗ್ನೇಯದಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು, ನೈಋತ್ಯ ಮತ್ತು ದಕ್ಷಿಣದಲ್ಲಿ ಕೂಡ್ಲಿಗಿ, ಪಶ್ಚಿಮದಲ್ಲಿ ಹೊಸಪೇಟೆ ತಾಲ್ಲೂಕು ಸುತ್ತುವರಿದಿವೆ. ತೋರಣಗಲ್ಲು, ಸಂಡೂರು, ಚೋರನೂರು, ಇವು ಹೋಬಳಿಗಳು. ಈ ತಾಲ್ಲೂಕಿನ ಸಂಡೂರು ಬೆಟ್ಟಗಳು ಅವುಗಳ ವನಸಿರಿಯಿಂದ ಕೂಡಿದ ಬೇತೋಹಾರಿ ನಿಸರ್ಗ ಸೌಂದರ್ಯದಿಂದ ಹಾಗೂ ಖನಿಜ ಸಂಪತ್ತಿನಿಂದ ಪ್ರಸಿದ್ದವಾಗಿವೆ. ಸಂಡೂರು ಹಾಗೂ ಅಕ್ಕ-ಪಕ್ಕದ ಊರುಗಳು ಕೆಲವೊಮ್ಮೆ ಮಲೆನಾಡನ್ನು ಹೋಲುತ್ತವೆ.

ಸಂಡೂರು ಶೀತಲ ಹವೆಗೆ ಪ್ರಸಿದ್ಧವಾಗಿದೆ. ಸಂಡೂರು ತಾಲ್ಲೂಕನ್ನು ನೀವು ಸೆಪ್ಟೆಂಬರ್ ತಿಂಗಳಲ್ಲಿ ನೋಡಿದರೆ ಇದು "ಉತ್ತರ ಕರ್ನಾಟಕದ ತಾಲ್ಲೂಕು" ಅಲ್ಲವೆಂದು ನಂಬುತ್ತೀರಿ ಸುಂದರ ಬೆಟ್ಟಗಳಿಂದ ಕೂಡಿದ ಸುಂದರ ನಾಡು ಈ "ಸಂಡೂರು" ಇಲ್ಲಿನ ಬೆಟ್ಟಗಳು ಮಲೆನಾಡಿನ ಬೆಟ್ಟಗಳಿಗೆ ಹೋಲುತ್ತವೆ. ಇಲ್ಲಿ ನೋಟ ಮತ್ತು ಪರಿಸರ ಅದ್ಭುತವಾಗಿತ್ತು. ಆದರೆ ಈಗ ಕಬ್ಬಿಣದ ಅದಿರು ಹೇರಳವಾಗಿ ದೊರೆಯುವುದರಿಂದ ಇದು ಅದಿರು ತೆಗೆಯಲು ಪರಿಸರ ನಾಶ ಮಾಡಿದ್ದಾರೆ. ಹಾಗೂ ಇನ್ನು ಮಾಡುತ್ತಿದ್ದಾರೆ. ಇದರಲ್ಲಿ 'ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳ ಕೈವಾಡವು' ತುಂಬ ಹೇರಳವಾಗಿದೆ.

**೧.೧ ಅಧ್ಯಯನದ ಸಮೀಕ್ಷೆ**

ಈ ಅಧ್ಯಯನದ ಬಗ್ಗೆ ಹೇಳುವುದಾದರೆ ಸಂಡೂರು ತಾಲ್ಲೂಕಿನ ಪೂರ್ವೇತಿಹಾಸ, ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಕೆಲವು ಕೃತಿಗಳು ಮತ್ತು ಲೇಖನಗಳು ಈಗಾಗಲೇ ಪ್ರಕಟವಾಗಿವೆ. ಆದರೆ ಅವು ಒಂದು ವಿಷಯವನ್ನು ಅಥವಾ ಒಂದು ಸ್ಥಳವನ್ನು ಕುರಿತು ಚರ್ಚಿಸಿವೆ. ಇಡೀ ಸಂಡೂರು ತಾಲ್ಲೂಕನ್ನು ಗಮನದಲ್ಲಿಟ್ಟುಕೊಂಡು ಸಂಡೂರು ತಾಲ್ಲೂಕಿನ ಒಂದು ಚಾರಿತ್ರಿಕ ಅಧ್ಯಯನ ಎಂಬ ಕೃತಿಯನ್ನು ಡಾ.ಗಿರಿಜಾ ಅವರು ಹೊರತಂದಿದ್ದಾರೆ. ಆದರೆ ಇಡೀ ಸಂಡೂರು ತಾಲ್ಲೂಕಿನ ಪ್ರವಾಸಿ ತಾಣಗಳ ಬಗ್ಗೆ ಅಧ್ಯಯನ ನಡೆದಿಲ್ಲ ಆದ ಕಾರಣ ಈ ಅಧ್ಯಯನವನ್ನು ಕೈಗೆತ್ತಿಕೊಂಡಿದ್ದೇನೆ.

'ಕೆ.ಬಿ.ಶಿವತಾರಕ್ ರವರು', "ಕರ್ನಾಟಕದ ಪುರಾತತ್ವ ನೆಲೆಗಳು" ಎಂಬ ಗ್ರಂಥದಲ್ಲಿ ಈ ತಾಲ್ಲೂಕಿನಲ್ಲಿ ಕಂಡುಬರುವ ಪುರಾತತ್ವ ನೆಲೆಗಳ ಬಗ್ಗೆ ಮಾಹಿತಿ ನೀಡಿದ್ದಾರೆ. 'ಗಿರಿಜಾ', "ಸಂಡೂರು ಪರಿಸರದ ಶಾಸನಗಳು ಮತ್ತು ಉಲ್ಲೇಖಿತ ದೇವಾಲಯಗಳು" ಎಂಬ ಕೃತಿಯಲ್ಲಿ ಸಂಡೂರಿನ ಶಾಸನಗಳು ಮತ್ತು ದೇವಾಲಯಗಳ ವಿವರಗಳನ್ನು ತಿಳಿಸಿದ್ದಾರೆ. ಆರ್.ಪಿ.ನಾರಾಯಣ ರವರು ಕರ್ನಾಟಕದ ಜಿಲ್ಲೆಗಳು ಎಂಬ ಗ್ರಂಥದಲ್ಲಿ ಸಂಡೂರು ಪರಿಸರದ ಬಗ್ಗೆ ಮಾಹಿತಿ ನೀಡಿದ್ದಾರೆ. 'ಐ.ಸೇಸುನಾಥನ್', "ಕರ್ನಾಟಕದ ಪ್ರವಾಸಿ ತಾಣಗಳು" ಎಂಬ ಗ್ರಂಥದಲ್ಲಿ ಸಂಡೂರು ತಾಲ್ಲೂಕಿನ ಕೆಲ ಪ್ರವಾಸಿ ತಾಣಗಳ ಬಗ್ಗೆ ವಿವರಿಸಿದ್ದಾರೆ. 'ಎಂ.ಕೋಟ್ರೇಶ್' ರವರು "ಕೋಟೆ-ಕೋತ್ತಳಗಳು ಒಂದು ಅಧ್ಯಯನ ಬಳ್ಳಾರಿ ಜಿಲ್ಲೆ" ಇದರಲ್ಲಿ ಸಂಡೂರು ತಾಲ್ಲೂಕಿನ ಕೋಟೆಗಳ ಬಗ್ಗೆ ಮಾಹಿತಿ ನೀಡಿದ್ದಾರೆ. 'ಸವಿತಾ' ರವರು "ಸಂಡೂರು ಪರಿಸರದ ಗ್ರಾಮದೈವಗಳು" ಗ್ರಂಥದಲ್ಲಿ ದೇವಾಲಯಗಳ ಉಲ್ಲೇಖ ನೀಡಿದ್ದಾರೆ. ಅರುಣ್

ಜೋಳದ ಕೂಡ್ಲಿಗಿರವರು ಸೊಂಡೂರು ಭೂ ಹೋರಾಟದ ಬಗ್ಗೆ ಪುಸ್ತಕ ಬರೆದಿದ್ದಾರೆ. ಶ್ರೀ ವೀರೇಶಿ, ಪ್ರೊ ಮಲ್ಲೇಪುರಂ, ಜಿ.ವೆಂಕಟೇಶ ಬಳ್ಳಾರಿ ತಾಲ್ಲೂಕಿನ ಸ್ಥಳನಾಮಗಳು (ಸಾಮಾಜೋ–ಸಾಂಸ್ಕೃತಿಕ ಅಧ್ಯಯನ) ಗ್ರಂಥದಲ್ಲಿ ಸಂಡೂರು ತಾಲ್ಲೂಕಿನ ಸ್ಥಳನಾಮಗಳ ಬಗ್ಗೆ ವಿವರಣೆ ನೀಡಿದ್ದಾರೆ. (ಡಾ.ಕೆ.ರವೀಂದ್ರನಾಥ) ಬಳ್ಳಾರಿ ಜಿಲ್ಲೆಯ ಐತಿಹ್ಯಗಳು ಕರಿಬಸಪ್ಪ ಎ.ರವರು ಸಂಡೂರಿನ ಸ್ಥಳನಾಮಗಳ ಬಗ್ಗೆ ವಿವರಿಸಿದ್ದಾರೆ. ನಾಗಭೂಷಣ ಎನ್.ಎಂ. ಸಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ ಎಂಬ ಲೇಖನವನ್ನು ಇತಿಹಾಸ ದರ್ಶನದಲ್ಲಿ ಹೊರತಂದಿದ್ದಾರೆ. ಪುರುಷೋತ್ತಮ ರೆಡ್ಡಿ ಆರ್. ಸಂಡೂರು ಪ್ರದೇಶದ ಕಬ್ಬಿಣ ತಯಾರಿಕೆ ಒಂದು ಐತಿಹಾಸಿಕ ನೋಟ ಇತಿಹಾಸ ದರ್ಶನದಿಂದ ಇದನ್ನು ಹೊರತಂದಿದ್ದಾರೆ. ಕುಂಬಾಸ ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನದಲ್ಲಿ ಸಂಡೂರಿನ ಬಗ್ಗೆ ವಿವರಿಸಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಒಂದು ದೇಶದ ಇತಿಹಾಸದಲ್ಲಿ ವ್ಯಾಪ್ತಿಯ ಬಗ್ಗೆ ಸಮಗ್ರ ಅಧ್ಯಯನ ಮಾಡುವುದು ಕಷ್ಟ. ಆದರೆ ಸಂಸ್ಕೃತಿಯನ್ನು ಬಿಡಿಬಿಡಿಯಾಗಿ ತೋರಿಸುವ ಸಲುವಾಗಿ ಇತಿಹಾಸವನ್ನು ವಿವಿಧ ಆಯಾಮಗಳಾಗಿ ವಿಶ್ಲೇಷಣೆ ಮಾಡಲಾಗುತ್ತದೆ. ಅದೇ ರೀತಿ ಈ ಅಧ್ಯಯನ ತನ್ನ ವ್ಯಾಪ್ತಿಯನ್ನು ಸಂಡೂರು ತಾಲ್ಲೂಕಿಗೆ ಮಾತ್ರ ಸೀಮಿತಗೊಳಿಸಲಾಗಿದೆ. ಪ್ರಸ್ತುತ ಈ ವಿಷಯಕ್ಕೆ ಸಂಬಂಧಿಸಿದಂತೆ ಇಲ್ಲಿಯವರೆಗೆ ಸಂಡೂರು ತಾಲ್ಲೂಕಿನ ಪ್ರವಾಸಿ ತಾಣಗಳ ಬಗ್ಗೆ ಯಾವುದೇ ಅಧ್ಯಯನ ನಡೆದಿಲ್ಲ ಆದ ಕಾರಣ ಈ ಒಂದು ಅಧ್ಯಯನ ಶೀರ್ಷಿಕೆಯನ್ನು ಆಯ್ದುಕೊಳ್ಳಲಾಗಿದೆ. ಸಂಡೂರು ತಾಲ್ಲೂಕಿನ ಬಗ್ಗೆ ತಿಳಿಸುವುದು ಈ ನನ್ನ ಅಧ್ಯಯನದ ಚೌಕಟ್ಟಾಗಿದೆ. ಸಂಡೂರು ತಾಲ್ಲೂಕಿನ ನಕ್ಷೆಯನ್ನು ಆಧರಿಸಿ ಸಂಡೂರಿನ ವ್ಯಾಪ್ತಿಯನ್ನು ಇಟ್ಟುಕೊಂಡು ಇಲ್ಲಿನ ವಿಶ್ಲೇಷಣೆಯನ್ನು ಮಾಡಲಾಗಿದೆ. ಮುಖ್ಯವಾಗಿ ಈ ತಾಲ್ಲೂಕಿನಲ್ಲಿ ಕಂಡುಬರುವ ಶಿಲಾ–ಶಾಸನಗಳು, ಕೋಟೆ–ಕೊತ್ತಲಗಳು, ದೇವಾಲಯಗಳು ಇನ್ನಿತರ ಐತಿಹಾಸಿಕ ಸ್ಮಾರಕ ಅವಶೇಷಗಳನ್ನು ವಿಶೇಷವಾಗಿ ಗಮನಹರಿಸಿ ಚರ್ಚಿಸಲಾಗಿದೆ.

## ೧.೩ ಅಧ್ಯಯನದ ಉದ್ದೇಶ

ಸಂಡೂರು ತಾಲ್ಲೂಕಿನ ಪ್ರವಾಸಿ ತಾಣಗಳ ಅಧ್ಯಯನವನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶವಾಗಿದೆ. ಸಂಡೂರು ಸಮೃದ್ಧವಾದ ಅರಣ್ಯ

ಸಂಪತ್ತನ್ನು ಹೊಂದಿದ್ದು, ಬೆಟ್ಟ ಗುಡ್ಡಗಳಿಂದ, ಖನಿಜ ಸಂಪತ್ತಿನಿಂದ ಕೂಡಿದ ಪ್ರದೇಶವಾಗಿದೆ. ಈ ಪ್ರದೇಶದ ಬಗ್ಗೆ ತಿಳಿಸಬೇಕೆಂಬುವುದು ನನ್ನ ಉದ್ದೇಶವಾಗಿದೆ.

- ಸಂಡೂರಿನ ಸ್ಥಳನಾಮವನ್ನು ಕುರಿತು ದಾಖಲಿಸುವುದು.
- ಸಂಡೂರಿನ ಭೌಗೋಳಿಕ ಹಿನ್ನಲೆ ಮತ್ತು ಚಾರಿತ್ರಿಕ ಹಿನ್ನಲೆಯನ್ನು ಕುರಿತು ದಾಖಲಿಸುವುದು.
- ಸಂಡೂರಿನ ಪ್ರವಾಸಿ ತಾಣಗಳ ಬಗ್ಗೆ ಕುರಿತು ದಾಖಲಿಸುವುದು.
- ಸಂಡೂರಿನ ಸ್ಥಳೀಯ ಸೌಲಭ್ಯಗಳನ್ನು ಕುರಿತು ದಾಖಲಿಸುವುದು.

**೧.೪ ಅಧ್ಯಯನದ ವಿಧಾನ**

ಇಲ್ಲಿಯವರೆಗೆ ಚರಿತ್ರೆಯ ಸಂಶೋಧಕರು ಅಳವಡಿಸಿಕೊಂಡ ವಿಧಿ-ವಿಧಾನಗಳನ್ನು ಈ ಪ್ರಸ್ತುಕ ಅಧ್ಯಯನದಲ್ಲೂ ಅಳವಡಿಸಿಕೊಳ್ಳಲಾಗಿದೆ. ಮೊದಲಿಗೆ ಲಭ್ಯ ಪ್ರಕಟಿತ ಮಾಹಿತಿ ಅನುಸರಿಸಿ ಕ್ಷೇತ್ರ ಕಾರ್ಯಕೈಗೊಳ್ಳಲಾಯಿತು. ಇಲ್ಲಿ ಮುಖ್ಯವಾಗಿ ಸಂದರ್ಶನ, ಪ್ರಶ್ನಾವಳಿಯಿಂದ ವಿಧಾನಗಳನ್ನು ಅನುಸರಿಸಲಾಗಿದೆ. ಸಂಡೂರು ಪರಿಸರಕ್ಕೆ ಸಂಬಂಧಿಸಿದಂತೆ ಈಗಾಗಲೇ ಪ್ರಕಟವಾಗಿರುವ ಕೃತಿಗಳು, ಗೆಜೇಟಿಯರ್ ಗಳು, ಶಾಸನ ಸಂಪುಟಗಳು ಹಾಗೂ ವಿಶ್ವಕೋಶಗಳು ಇತರೆ ಹಳೆಯ ದಾಖಲೆಗಳನ್ನು ಸಂಗ್ರಹಿಸಿದ್ದು ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಸಾಹಿತ್ಯಿಕ ಆಕಾರಗಳನ್ನು ಅಧ್ಯಯನ ಮಾಡುವುದರ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಅಲ್ಲದೇ ಕ್ಷೇತ್ರಕಾರ್ಯದಲ್ಲಿ ಸಂಶೋಧನಾ ವಿದ್ವಾಂಸರ ಭೇಟಿ ಹಾಗೂ ಸ್ಥಳೀಯರ ಅಭಿಪ್ರಾಯಗಳನ್ನು ಪರಮಾರ್ಶಿಸಲು ಪ್ರಯತ್ನಿಸಲಾಗಿದೆ. ವಿವಿಧ ಗ್ರಂಥಾಲಯ ಕಾರ್ಯದ ಮೂಲಕ ವಿಷಯಕ್ಕೆ ಸಂಬಂಧಿಸಿದ ಸಾಹಿತ್ಯಿಕ ಆಕಾರಗಳನ್ನು ಅಧ್ಯಯನ ಮಾಡುವುದು ಮತ್ತು ಕ್ಷೇತ್ರಕಾರ್ಯದಲ್ಲಿ ಕಂಡುಬರುವ ದೇವಾಲಯಗಳು, ಪ್ರಾಕೃತಿಕ ತಾಣಗಳು, ಔದ್ಯೋಗಿಕ ಸ್ಥಳಗಳು ಮತ್ತು ಅರಮನೆ, ಕೋಟೆ ಹಾಗೂ ತೀರ್ಥಗಳಿಗೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಸ್ಥಳದಲ್ಲಿಯೇ ಸಂಗ್ರಹಿಸಿದ್ದು ಅವುಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಈ ರೀತಿ ಸಂಗ್ರಹಿಸಿದ ಮಾಹಿತಿಯ ವಿವರವನ್ನು ಈ ಪ್ರಬಂಧದಲ್ಲಿ ವಿವರಿಸಲಾಗಿದೆ.

## ೧.೫ ಅಧ್ಯಯನದ ಸ್ವರೂಪ

ಅಧ್ಯಯನದ ಅನುಕೂಲದ ದೃಷ್ಟಿಯಿಂದ ಆರು ಅಧ್ಯಾಯಗಳನ್ನಾಗಿ ಮತ್ತು ಅಧ್ಯಾಯಗಳ ಅಡಿಯಲ್ಲಿ ಅನೇಕ ಉಪ ಅಧ್ಯಾಯಗಳನ್ನು ವಿಂಗಡಿಸಿಕೊಳ್ಳಲಾಗಿದೆ. ಅದರ ವಿವರ ಈ ಕೆಳಗಿನಂತಿದೆ.

- ಅಧ್ಯಾಯ ಒಂದರಲ್ಲಿ ಪ್ರಸ್ತಾವನೆ, ಮೂಲ, ಅಧ್ಯಯನದ ಉದ್ದೇಶ, ಅಧ್ಯಯನದ ವ್ಯಾಪ್ತಿ, ಅಧ್ಯಯನದ ಸಮೀಕ್ಷೆ, ಮತ್ತು ಅಧ್ಯಯನದ ಸ್ವರೂಪವನ್ನು ವಿವರಿಸಲಾಗಿದೆ.
- ಅಧ್ಯಾಯ ಎರಡರಲ್ಲಿ ಭೌಗೋಳಿಕ ಹಿನ್ನಲೆ ಮತ್ತು ಚಾರಿತ್ರಿಕ ಹಿನ್ನಲೆ ಮತ್ತು ಸ್ಥಳ ಪುರಾಣದ ಬಗ್ಗೆ ತಿಳಿಸಲಾಗಿದೆ.
- ಅಧ್ಯಾಯ ಮೂರರಲ್ಲಿ ಸಂಡೂರು ತಾಲ್ಲೂಕಿನ ಪ್ರವಾಸಿ ತಾಣಗಳ ಬಗ್ಗೆ ಅಲ್ಲಿನ ಪ್ರಾಕೃತಿಕ ತಾಣಗಳು, ಧಾರ್ಮಿಕ ತೀರ್ಥಗಳು, ದೇವಾಲಯಗಳು, ಔದ್ಯೋಗಿಕ ಸ್ಥಳಗಳು, ಅರಮನೆ, ಕೋಟೆ, ಮತ್ತು ಕೆರೆಗಳ ಬಗ್ಗೆ ತಿಳಿಸಲಾಗಿದೆ.
- ಅಧ್ಯಾಯ ನಾಲ್ಕರಲ್ಲಿ ಸಂಡೂರಿಗೆ ಬರುವ ಪ್ರವಾಸಿಗರು ಮತ್ತು ಸ್ಥಳೀಯ ಸೌಲಭ್ಯಗಳ ಬಗ್ಗೆ ತಿಳಿಸಲಾಗಿದೆ.
- ಅಧ್ಯಾಯ ಐದರಲ್ಲಿ ಪ್ರವಾಸಿ ತಾಣಗಳ ಸಮಸ್ಯೆ ಮತ್ತು ಸವಾಲುಗಳ ಬಗ್ಗೆ ಹೇಳಲಾಗಿದೆ.
- ಅಧ್ಯಾಯ ಆರರಲ್ಲಿ ಉಪಸಂಹಾರ, ಆಧಾರ ಗ್ರಂಥಗಳು, ಛಾಯಚಿತ್ರಗಳು ಮತ್ತು ನಕ್ಷೆಗಳನ್ನು ಹಾಕಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಕರ್ನಾಟಕದ ಪುರಾತತ್ವ ನೆಲೆಗಳು, ಶಿವತಾರಕ್ ಕೆ. ಬಿ. ೨೦೦೧

೨. ಹೊಸಪೇಟೆ ತಾಲ್ಲೂಕು ದರ್ಶನ, ಸಿ.ಮಹದೇವ, ಸುಬ್ಬಣ್ಣ ರೈ ಮತ್ತು ಮಾಧವ ಕೆ.ಕೆ, ೨೦೦೨

೩. ಕರ್ನಾಟಕದ ಪ್ರಾಗಿತಿಹಾಸ ಕಾಲದ ನೆಲೆ, ಅ.ಸುಂದರ, ೧೯೯೪

೪. ಸೊಂಡೂರಿನ ಶ್ರೀಕುಮಾರಸ್ವಾಮಿ, ವೃಷಬೇಂದ್ರಾಚಾರ್, ಪ್ರಭು ಪ್ರಕಾಶನ ನೆನಪಿನ ಸಂಚಿಕೆ, ೧೯೯೪

೫. ಕರ್ನಾಟಕ ಇತಿಹಾಸ ದರ್ಶನ ಸಂಪುಟ-೧೦, ನಾಗಯ್ಯ ಜೆ. ಎಮ್, ವಡ್ಡಾರಾಧನೆ ಸೂಚಿಸುವ ಬಸದಿ ಮತ್ತು ಸಂಡೂರು, ೧೯೯೫

೬. ಕರ್ನಾಟಕ ಇತಿಹಾಸ ದರ್ಶನ ಸಂಪುಟ-೧೦, ಸುಂದರ.ಅ, ಶ್ರೀ ಮದ್ರಾಮಾಯಣದ ಕಾರ್ತಿಕೇಯನವು ಸೊಂಡೂರಿನ ಕುಮಾರಸ್ವಾಮಿ ಬೆಟ್ಟವೆ, ೧೯೯೫

೭. ಕರ್ನಾಟಕ ಇತಿಹಾಸ ದರ್ಶನ ಸಂಪುಟ-೧೦, ನಾಗಭೂಷಣ ಎನ್.ಎಂ, ಸೊಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ, ೧೯೯೫

೮. ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ, ವಾಸುದೇವ ಬಡಿಗೇರ, ೧೯೯೭

# ಅಧ್ಯಾಯ-೨

## ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನಲೆ

### ೨.೧ ಭೌಗೋಳಿಕ ಪರಿಸರ

ಸಂಡೂರು ಪರಿಸರವು ಬಳ್ಳಾರಿ ಜಿಲ್ಲೆಯ ಕಾಶ್ಮೀರವೆಂದು ಕರೆಸಿಕೊಂಡ ಸುಂದರ ಪ್ರಕೃತಿಯ ಪರಿಸರವಾಗಿದೆ. ಬಳ್ಳಾರಿ ಜಿಲ್ಲೆಯ ಮಧ್ಯ ಭಾಗದಲ್ಲಿರುವ ಈ ತಾಲ್ಲೂಕು ಅಪರೂಪದ ಬೆಟ್ಟಗುಡ್ಡ, ಅರಣ್ಯವನ್ನು ಹೊಂದಿದೆ. ಸಂಡೂರಿನ ಸುತ್ತಲೂ ಸುತ್ತುವರಿದ ರಾಮನಮಲೈ, ದೋಣಿಮಲೈ, ಶೇಷಗಿರಿ ಬೆಟ್ಟ, ತಿಮ್ಮಪ್ಪನ ಬೆಟ್ಟ, ದೇವಗಿರಿ ಬೆಟ್ಟ ಮೊದಲಾದ ಬಹಳ ಎತ್ತರವಾದ ಬೆಟ್ಟಗಳು ಕೋಟೆಯಂತೆ ರಕ್ಷಣೆ ನೀಡಿದೆ. ಈ ಬೆಟ್ಟಗಳ ಸಂದುಗೊಂದಿನಲ್ಲಿ ಈ ಪಟ್ಟಣವು ನೆಲೆಸಿರುವ ಕಾರಣ ಈ ಪ್ರದೇಶವನ್ನು "ಸಂದೂರು" ಎಂದು ಕರೆಯುತ್ತಿದ್ದರು. ಕಾಲಕ್ರಮೇಣ ಇದೇ ಸಂಡೂರು ಆಗಿದೆ. ಸಂಡೂರು ಒಂದು ಕಣಿವೆ ಪ್ರದೇಶವಾಗಿದ್ದು, ಅಪಾರವಾದ ಖನಿಜ ಸಂಪತ್ತನ್ನು, ಪ್ರಾಕೃತಿಕ ಸೌಂದರ್ಯವನ್ನು ಮತ್ತು ಈ ಜಿಲ್ಲೆಯಲ್ಲಿಯೇ ಅಪರೂಪವಾದ ಹಿತಕರ ಹವಾಗುಣವನ್ನು ಹೊಂದಿದೆ. ಈ ಪ್ರದೇಶದ ಸುತ್ತಲೂ ದೊಡ್ಡ ದೊಡ್ಡ ಬೆಟ್ಟಗಳು, ಸಣ್ಣ ಸಣ್ಣ ಝರಿಗಳು ಹಳ್ಳಕೊಳ್ಳಗಳಿಂದ ಕೂಡಿದ ಅನೇಕ ನೀರಿನ ಸೆಲೆಗಳು ಹಾಗೂ ಅಪರೂಪದ ಹಲವು ವಿಧದ ಅದಿರಿನ ನಿಕ್ಷೇಪಗಳಿವೆ.

೮೨ ಗ್ರಾಮಗಳನ್ನು ಒಳಗೊಂಡ ಈ ತಾಲ್ಲೂಕು ಬಳ್ಳಾರಿ ಜಿಲ್ಲೆಯಲ್ಲಿಯೇ ವಿಶಿಷ್ಟವಾದುದಾಗಿದೆ. ವಿವಿಧ ಬುಡಕಟ್ಟುಗಳ ಮತ್ತು ಜನಾಂಗಗಳಿಗೆ ಸೇರಿದ ಇಲ್ಲಿನ ಒಟ್ಟು ಜನಸಂಖ್ಯೆ ೧೯೯೧-೧೯೯೨ರ ಜನಗಣತಿಯ ಪ್ರಕಾರ ೧,೫೬,೪೮೯ರಷ್ಟಿದೆ. ಭೌಗೋಳಿಕವಾಗಿ ೬೪.೩೫೬ ಹೆಕ್ಟೇರ್ ಗಳಷ್ಟು ವಿಸ್ತಾರವಾಗಿದ್ದು, ಇದರಲ್ಲಿ ೧೯೪೨೬ ಹೆ.ಗಳಷ್ಟು ಅರಣ್ಯ ಪ್ರದೇಶವನ್ನು ಹೊಂದಿದೆ. ಈ ತಾಲ್ಲೂಕಿನ ವ್ಯವಸಾಯ ಯೋಗ್ಯ ಪ್ರದೇಶ ಕೇವಲ ೩೯೦೦೦ ಹೆ.ಗಳಷ್ಟಿದೆ ಎಂದು ವ್ಯವಸಾಯ ಇಲಾಖೆಯ ಅಂಕಿ-ಅಂಶಗಳಿಂದ ತಿಳಿದುಬಂದಿದೆ.

### ಪ್ರಮುಖ ಬೆಳೆಗಳು

ಪ್ರಾಕೃತಿಕವಾಗಿ ಇಲ್ಲಿಯ ನೆಲ ಕೆಂಪು ಬಣ್ಣದ ಮರಳು ಮಿಶ್ರಿತ ಫಲವತ್ತಾದ ಭೂಪ್ರದೇಶವಾಗಿದೆ. ಜೋಳ, ಸಜ್ಜೆ, ನವಣೆ, ರಾಗಿ, ಭತ್ತ ಮುಂತಾದವುಗಳು ಎರೆ ಮತ್ತು ಮರಳು ಮಿಶ್ರಿತ ಮಣ್ಣಿನಲ್ಲಿ ಹೆಚ್ಚಾಗಿ ಬೆಳೆಯುವ ಮುಖ್ಯ ಆಹಾರ ಬೆಳೆಗಳಾಗಿವೆ. ಇವುಗಳಲ್ಲದೆ

ಹೆಸರು, ಉದ್ದು, ತೊಗರಿ ಮುಂತಾದ ಕಾಳುಗಳನ್ನು ಬೆಳೆಯಲಾಗುತ್ತಿದೆ. ಕೆಂಪು ಮತ್ತು ಎರೆ ಮಣ್ಣಿನಲ್ಲಿ ಈರುಳ್ಳಿ, ಶೇಂಗಾ, ಸೂರ್ಯಕಾಂತಿ ಮತ್ತಿತರ ವಾಣಿಜ್ಯ ಬೆಳೆಗಳನ್ನು ಹಾಗೂ ತರಕಾರಿಗಳನ್ನು ಬೆಳೆಯಲಾಗುತ್ತಿದೆ.

**ಜಲ ಸಂಪತ್ತು**

ಈ ಪ್ರದೇಶವು ಬಳ್ಳಾರಿ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಮಳೆ ಬೀಳುವ ಪ್ರದೇಶವಾಗಿದ್ದು ಉತ್ತಮ ನೆಲ-ಜಲ ಪಡೆದುಕೊಂಡಿದೆ. ಮಳೆಯಿಂದಾಗಿ ಈ ಪ್ರದೇಶದ ವಿವಿಧ ಕಡೆಗಳಲ್ಲಿ ಸಣ್ಣ-ಪುಟ್ಟ ಕೆರೆಗಳು ತುಂಬುತ್ತವೆ. ಈ ಭಾಗದ ಕೆರೆಗಳಲ್ಲಿ ನಾರಿಹಳ್ಳಕ್ಕೆ ಅಡ್ಡಲಾಗಿ ಕಟ್ಟಲಾಗಿರುವ ದರೋಜಿ ಕೆರೆ ಪ್ರಮುಖವಾದುದು. ಈ ಕೆರೆ ಕರ್ನಾಟಕದ ದೊಡ್ಡ ಕೆರೆಗಳಲ್ಲಿ ಒಂದಾಗಿದೆ. ಈ ಕೆರೆಯಲ್ಲಿ ಶೇಖರಣೆಯಾದ ನೀರು ಕಾಲುವೆಗಳ ಮೂಲಕ ೧೫೨೧ ಹೆ.ನಷ್ಟು ಕೃಷಿ ಚಟುವಟಿಕೆಗೆ ಮತ್ತು ಜನ ಜಾನು ವಾರುಗಳಿಗೆ ದೈನಂದಿನ ಉಪಯೋಗಕ್ಕೆ ಯೋಗ್ಯವಾಗಿದೆ. ಇನ್ನುಳಿದಂತೆ ಸುತ್ತಲೂ ದೊಡ್ಡ ದೊಡ್ಡ ಬೆಟ್ಟ-ಗುಡ್ಡಗಳು ಇರುವುದರಿಂದ ಮತ್ತು ಸಣ್ಣ ಸಣ್ಣ ಝರಿಗಳಿಂದ ಕೂಡಿದ ಹಳ್ಳಗಳು ಒಂದು ಕಡೆ ಕೂಡಿ ತಾಲ್ಲೂಕಿನ ಪ್ರಮುಖ ಜಲ ಮೂಲವಾದ ನಾರಿಹಳ್ಳದಲ್ಲಿ ವಿಲೀನವಾಗುತ್ತವೆ. ೧೮೮೪ರಲ್ಲಿ ಈ ನಾರಿಹಳ್ಳವನ್ನು ಕಂಡ ಬ್ರಿಟಿಷ್ ಅಧಿಕಾರಿ ಬ್ರೂಸ್ ಪೂಟ್ ಸಂಡೂರನ್ನು ಈ ರೀತಿ ವರ್ಣಿಸಿದ್ದಾರೆ. "ಅಗಲ ಕಿರಿದಾದ ಅತಿ ಉದ್ದವಿರುವ ಕಣಿವೆಯಲ್ಲಿ ಎತ್ತರದ ಬೆಟ್ಟಗಳು ವಾಯುವ್ಯದಿಂದ ಆಗ್ನೇಯ ದಿಕ್ಕಿನವರೆಗೆ ಸಮಾನಾಂತರವಾಗಿವೆ. ಅವುಗಳಲ್ಲಿ ಲಂಬವಾಗಿ ಒಂದು ಸಣ್ಣ ನದಿ (ನಾರಿಹಳ್ಳ) ಮಧ್ಯದಲ್ಲಿ ಒಂದು ಊರು" ಎಂದು ಅಂದಿನ ಸಂಡೂರನ್ನು ಪರಿಚಯಿಸುತ್ತ, ನಾರಿಹಳ್ಳವನ್ನು ಒಂದು ಸಣ್ಣ ನದಿಗೆ ಹೋಲಿಸಿದ್ದಾರೆ.

ದೋಣಿಮಲೈ ಕಬ್ಬಿಣದ ಅದಿರಿನ ನಿಗಮ ಸ್ಥಾಪನೆಯ ಉದ್ದೇಶದಿಂದಲೇ ನಾರಿಹಳ್ಳಕ್ಕೆ ಅಣೆಕಟ್ಟು ಕಟ್ಟಲಾಯಿತು. ಆ ಕಂಪನಿಯ, ಗಣಿ ಕಾರ್ಮಿಕರ ನಿತ್ಯ ಉಪಯೋಗಕ್ಕೆ ಈ ನಾರಿಹಳ್ಳದ ನೀರನ್ನೇ ಉಪಯೋಗಿಸಲಾಗುತ್ತಿದೆ. ಅಷ್ಟೇ ಅಲ್ಲದೆ ಸಂಡೂರು, ತಾರಾನಗರ, ಗೌರೀಪುರ, ಗಂಗಲಾಪುರ, ನಾಗಲಾಪುರ, ತಾಳೂರು, ಬನ್ನಿಹಟ್ಟಿ ಹಳ್ಳಿಗಳಿಗೆ ಕುಡಿಯುವ ನೀರು ನೀಡುವ ಈ ಡ್ಯಾಂ ೨೫೫.೦೮ ಹೆಕ್ಟೇರ್ ಜಲಾವೃತ ಪ್ರದೇಶವನ್ನು ಹೊಂದಿದೆ. ಈ ಅಣೆಕಟ್ಟು ಸು.೪೫ಮೀ. ಉದ್ದ, ೩೦.೯೨ಮೀ. ಇದೆ. ೮೦೦ ಹೆ.ಗಳಷ್ಟು ಕಾಲುವೆಗಳ ಮೂಲಕ ಕೃಷಿಗೂ ಉಪಯೋಗಿಸಲಾಗುತ್ತಿದೆ. ಈ ನೀರಿನ ಶೇಖರಣೆಯಿಂದಾಗಿ ಸುತ್ತಮುತ್ತಲಿನ ಭೂಮಿ ಮತ್ತು ಕೊಳವೆ ಬಾವಿಗಳಲ್ಲಿ ನೀರಿನ ಅಂತರ ನೆಲೆಯ ಪ್ರಮಾಣ ಹೆಚ್ಚಿದೆ. ಇವುಗಳಿಂದ ಸ್ಥಳೀಯ ಕೃಷಿಗೆ

ಅನುಕೂಲಕರವೂ ಆಗಿದೆ. ಒಟ್ಟಿನಲ್ಲಿ ಜನರಿಗೂ, ಪ್ರಾಣಿ-ಪಕ್ಷಿಗಳಿಗೂ, ಉದ್ದಿಮೆಗಳಿಗೂ ಇಲ್ಲಿಯ ಜಲಸಂಪತ್ತು ವರದಾನವಾಗಿದೆ. ಕೃಷಿ ಇಲಾಖೆಯವರ ಮಳೆ ಮಾಪನ ಕೇಂದ್ರದ ಮಾಹಿತಿಯ ಪ್ರಕಾರ ವರ್ಷದಿಂದ ವರ್ಷಕ್ಕೆ ಮಳೆ ಪ್ರಮಾಣ ಇಲ್ಲಿ ಕಡಿಮೆಯಾಗುತ್ತಾ ಬಂದಿರುವುದನ್ನು ಕಾಣಬಹುದು. ಇದಕ್ಕೆ ಇಲ್ಲಿನ ಪರಿಸರ ನಾಶವೇ ಕಾರಣವೆನ್ನಬಹುದು.

**ಬೆಟ್ಟ-ಗುಡ್ಡಗಳು**

ಬಳ್ಳಾರಿ ಜಿಲ್ಲೆಯಲ್ಲಿ ಸಂಡೂರು ತಾಲ್ಲೂಕಿನ ಬೆಟ್ಟ-ಗುಡ್ಡಗಳ ಅರಣ್ಯವನ್ನು ಬಿಟ್ಟರೆ ಉಳಿದೆಡೆ ಗಿಡ ಮರಗಳು ಕಡಿಮೆ. ಇದನ್ನು ಹುಲ್ಲುಗಾವಲು ಪ್ರದೇಶ ಎಲೆ ಉದುರುವ ಕಾಡು ಎಂದು ಗುರುತಿಸಲಾಗಿದೆ. ಈ ಗುಡ್ಡಗಾಡು ಪ್ರದೇಶವು ಇತಿಹಾಸ ಕಾಲದಿಂದಲೂ ಅನೇಕ ರಾಜಕೀಯ ಶಕ್ತಿಗಳಿಗೆ ಆಶ್ರಯ ನೀಡಿದೆ. ನಿಡಿದಾದ ಗುಡ್ಡಗಳು, ವಿವಿಧ ಜಾತಿಯ ಮರಗಳು ಸು.೨೦೦೦ಕ್ಕೂ ಹೆಚ್ಚು ಹೂ ಸಸ್ಯಗಳು ಹಾಗೂ ೨೦,೦೦೦. ಸಾವಿರದಷ್ಟು ಔಷಧೀಯ ಗಿಡಗಳು ಮತ್ತು ನಾನಾ ತರದ ಬಳುಕುವ ತರುಲತೆಗಳೂ ಇಲ್ಲಿವೆ. ಈ ತಾಲ್ಲೂಕಿನ ಯಶವಂತನಗರದ ಹತ್ತಿರ ಔಷಧಿ ಸಸ್ಯಗಳ ಸಂರಕ್ಷಣಾ ಕೇಂದ್ರವನ್ನು ತೆರೆಯಲಾಗಿದೆ. ಸಾಮಾನ್ಯವಾಗಿ ಈ ಕಾಡಿನಲ್ಲಿ ದಿಂಡಿನ, ಹುಣಸೆ, ಬೇವು, ಶ್ರೀಗಂಧ, ಈಚಲು, ಬಿಳಿಜಾಲಿ, ಬೀಟೆ, ಬಾಗೆ, ಮೊಸಬಾಳೆ, ತರೇದ, ತಂಡರಿಸೆ, ತೇಗ, ಕತ್ತಾಳೆ ಮುಂತಾದ ಮರಗಳು ಹೆಚ್ಚಾಗಿ ಕಂಡುಬರುತ್ತವೆ.

**ಪ್ರಾಣಿಪಕ್ಷಿಗಳು**

ಸಂಡೂರು ವಿಸ್ತಾರದಿಂದ ಕೂಡಿದ ದೊಡ್ಡ ಕಾಡು. ತಗ್ಗು-ತಗ್ಗುಗಳಲ್ಲಿ ನಿಲ್ಲುವ ನೀರಿನ ಅನುಕೂಲ ಮತ್ತು ಗೆಡ್ಡೆ ಗೆಣಸುಗಳಿಂದ ಯಥೇಚ್ಛವಾದ ಆಹಾರ ದೊರೆಯುವುದರಿಂದ ಹಾಗೂ ಒಳ್ಳೆಯ ಹವಾಮಾನ ಇರುವುದರಿಂದ ಈ ಪ್ರದೇಶವು ಜೀವ ಸಂಕುಲಕ್ಕೆ ಅಪೂರ್ವ ತಾಣವಾಗಿದೆ. ಈ ಪ್ರದೇಶದ ಅರಣ್ಯ ಮತ್ತು ಬೆಟ್ಟಗುಡ್ಡಗಳಲ್ಲಿ ಚಿರತೆ, ಕರಡಿ, ನರಿ, ಮೊಲ, ಕಾಡುಹಂದಿ, ಮಂಗ ಮುಂತಾದ ಪ್ರಾಣಿಗಳು, ಎತ್ತು, ಎಮ್ಮೆ, ಹಸು ಮುಂತಾದ ಸಾಕು ಪ್ರಾಣಿಗಳು, ಕೋಗಿಲೆ, ಕೌಜುಕ, ಗೂಬೆ, ಗುಬ್ಬಿ, ಬಾವಲಿ, ಬೆಳವ, ರತ್ನಪಕ್ಷಿ, ಪಾರಿವಾಳ, ನವಿಲು ಮುಂತಾದ ನೂರಾರು ಜಾತಿಯ ಪಕ್ಷಿಗಳು ಮತ್ತು ಅದೆಷ್ಟೋ ನಮ್ಮ ಕಣ್ಣಿಗೆ ಗೋಚರಿಸದ ಜೀವ ವೈವಿಧ್ಯಗಳು ಇಲ್ಲಿವೆ. ನಮ್ಮ ರಾಷ್ಟ್ರ ಪಕ್ಷಿಯಾದ ನವಿಲು ಅತಿ ಹೆಚ್ಚಾಗಿ ಕಂಡುಬರುವುದು ಇಲ್ಲಿನ ಜೀವ ವೈವಿಧ್ಯದ ವಿಶೇಷಗಳಲ್ಲಿ ಒಂದಾಗಿದೆ.

ಆದರೆ ಇತ್ತೀಚಿನ ದಿನಗಳಲ್ಲಿ ಈ ಪ್ರದೇಶದಲ್ಲಿ ಹೆಚ್ಚುತ್ತಿರುವ ಗಣಿಗಾರಿಕೆ ಮತ್ತು ವೇಗವಾಗಿ ಬೆಳೆಯುತ್ತಿರುವ ಉದ್ಯಮಗಳು ಹಾಗೂ ಸರಕು ಸಾಗಾಣಿಕೆಗಾಗಿ ಉತ್ತಮ ಸಾರಿಗೆ ವ್ಯವಸ್ಥೆಯ ನಿರ್ಮಾಣದ ಕಾರಣದಿಂದಾಗಿ, ರಸ್ತೆಯ ಅಗಲೀಕರಣದ ಹೆಸರಿನಲ್ಲಿ ಇಲ್ಲಿನ ಪರಿಸರವನ್ನು ನಾಶ ಮಾಡಲಾಗುತ್ತಿದೆ. ಕರ್ನಾಟಕದ ಪ್ರಸ್ಥಭೂಮಿಯಲ್ಲಿ ಸಂಡೂರು ಗುಡ್ಡಗಳ ಈಶಾನ್ಯಕ್ಕೆ ಇರುವ ಬಯಲು ನಾಡು ೩೦೦ ರಿಂದ ೪೫೦ ಮೀಟರ್ ಔನ್ನತ್ಯದ ತುಲನಾತ್ಮಕವಾಗಿ ಕಡಿಮೆ ಎತ್ತರದ ಪ್ರದೇಶವಾಗಿದೆ. ಈ ಸಂಡೂರು ವಲಯಗಳ ಶಿಲೆಗಳು ಬಾಬಾಬುಡನ್ ವರ್ಗಕ್ಕೆ ಸೇರಿದವುಗಳು. ಸಂಡೂರು ಬೆಟ್ಟಗಳ ಮೇಲೆ ಜಂಬಿಟ್ಟಿಗೆಯು ಕಬ್ಬಿಣದ ರಚನೆಯ ಮೇಲ್ಪದರಾಗಿ ಕಂಡುಬಂದು ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರುಗಳ ಸಮೃದ್ಧ ಗಣಿಗಳಿಗೆ ಅವಕಾಶ ಮಾಡಿಕೊಟ್ಟಿದೆ.

**ಶಿಲೆಗಳು**

ಈ ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪುಮಣ್ಣು ಮತ್ತು ಫಲವತ್ತಾದ ಜೇಡಿಮಣ್ಣು ಹರಡಿದ್ದು, ಗ್ರೆನಾಯಿಟ್, ಸಿಸ್ಟ್, ಸ್ಯಾಂಡ್‌ಸ್ಟೋನ್, ಜಾಸ್ಪರ್ ಮುಂತಾದ ಶಿಲೆಗಳು ಹಾಗೂ ಬೆಟ್ಟಗಳಲ್ಲಿ ಕಬ್ಬಿಣ, ಬಂಗಾರ ಮತ್ತು ತಾಮ್ರದ ಅದಿರಿನಿಂದ ಕೂಡಿದ ಶಿಲೆಗಳಿವೆ. ಸಂಡೂರು, ಕೂಡ್ಲಿಗಿ ಪ್ರದೇಶದಲ್ಲಿ ಅರಣ್ಯ ಹೆಚ್ಚಾಗಿದ್ದು ಉಳಿದ ಭಾಗಗಳಲ್ಲಿ ಅಲ್ಲಲ್ಲಿ ವಿರಳವಾಗಿ ಕಂಡುಬರುತ್ತದೆ. ಇದರ ಒಟ್ಟು ವಿಸ್ತೀರ್ಣ ೬೦೭.೪೪ ಚ.ಕಿ.ಮೀ. ಇದೆ.

ಸಂಡೂರು, ತಾರಾನಗರ, ದೇವಗಿರಿ ಪ್ರದೇಶಗಳು ಗಿರಿ ಕಂದರಗಳಿಂದ ಕೂಡಿದ್ದು ಸಮುದ್ರದ ಪಾತಳಿಯಿಂದ ಸು.೩೫೦೦ ಪೂಟು ಎತ್ತರದಲ್ಲಿವೆ. ಭೂ ವೈಜ್ಞಾನಿಕವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಸಿಗುವ ಶಿಲೆಗಳನ್ನು ಮುಖ್ಯವಾಗಿ ಸಿಸ್ಟೋಸ್ ಮತ್ತು ಗ್ರೆನೈಟಿಕ್ ಗಳೆಂದು ವಿಂಗಡಿಸಲಾಗಿದೆ. ಪ್ರಮುಖವಾಗಿ ಈಗ ಹೆಚ್ಚಿನ ಪ್ರಮಾಣದಲ್ಲಿ ಸಿಗುವ ಕಬ್ಬಿಣ ಹಾಗೂ ಮ್ಯಾಂಗನೀಸ್ ನಿಕ್ಷೇಪಗಳು ಶಿಲೆಗಳಲ್ಲಿ ದೊರೆತರೆ ಉಳಿದವು ಗ್ರಾನೈಟಿಕ್ ಶಿಲೆಗಳಲ್ಲಿ ದೊರೆಯುತ್ತವೆ.

ಸಂಡೂರು ಸುತ್ತಮುತ್ತ ಹಾಗೂ ನಂದಿಹಳ್ಳಿಯಿಂದ ಹೊಸಪೇಟೆಯವರೆಗೆ ಸು.೪೦ಕಿ.ಮೀ. ಉದ್ದ ಹಾಗೂ ೧೫–೨೦ ಕಿ.ಮೀ ಅಗಲವುಳ್ಳ ಹಾಗೂ ಎತ್ತರವಾದ ಪರ್ವತಗಳಲ್ಲಿ ದೊರೆಯುವ ಐರನ್ ಪಾರ್ಮೇಶನ್ ಎಂಬ ಕಲ್ಲಿನಲ್ಲಿ ಕಬ್ಬಿಣದ ನಿಕ್ಷೇಪಗಳು ದೊರೆಯುತ್ತವೆ. ಇಲ್ಲಿ ದೊರೆಯುವ ಅದಿರು ಹೆಮಟೈಟು ರೂಪದಲ್ಲಿದ್ದು ಉತ್ತಮ ದರ್ಜೆಗೆ ಸೇರಿದ ಅದಿರಾಗಿದೆ.

ಮ್ಯಾಂಗನೀಸ್ ಅದಿರಿನ ನಿಕ್ಷೇಪಗಳು ಮ್ಯಾಂಗನೀಸ್ ಫೇರಸ್ ಫಿಲೈಟ್ ಎಂಬ ಕಲ್ಲುಗಳಲ್ಲಿ ದೊರೆಯುತ್ತವೆ. ಈ ನಿಕ್ಷೇಪಗಳು ದೇವಗಿರಿ, ಸುಬ್ರಾಯನಹಳ್ಳಿ ಮತ್ತು ರಾಮಘಡ ವ್ಯಾಪ್ತಿಗೆ ಸೇರಿರುತ್ತದೆ. ಈ ಅದಿರಿನ ವಿಶೇಷ ಗುಣ ಎಂದರೆ ನಿಗದಿತ ಅಂಶಕ್ಕಿಂತ ಕಡಿಮೆ ಪ್ರಮಾಣದಲ್ಲಿ ರಂಜಕ ಹಾಗೂ ಗಂಧಕಗಳನ್ನು ಹೊಂದಿರುವುದು. ಈ ಗುಣಕ್ಕಾಗಿಯೇ ಜಗತ್ತಿನ ಮ್ಯಾಂಗನೀಸ್ ಅದಿರಿನ ಮಾರುಕಟ್ಟೆಯಲ್ಲಿ ಸಂಡೂರಿನ ಮ್ಯಾಂಗನೀಸ್ ಅದಿರಿಗೆ ವಿಶೇಷ ಬೇಡಿಕೆ ಇದೆ. ಮುಖ್ಯವಾಗಿ ಸಂಡೂರಿನ ಬೆಟ್ಟಗಳು ಶ್ರೀಮಂತ ಸಂಪನ್ಮೂಲ ಕೇಂದ್ರಗಳು. ಕಣಿವೆ, ಕಂದರಗಳ ಮಧ್ಯೆಯೂ ಈ ನಗರ ತನ್ನ ಸುತ್ತಮುತ್ತಲೂ ಕಪ್ಪು ಬಂಗಾರದ ನಿಕ್ಷೇಪವನ್ನೇ ಹೊಂದಿದೆ. ೩,೨೦೦ ರಿಂದ ೩,೬೦೦ ಅಡಿಗಳ ಎತ್ತರದವರೆಗಿನ ಈ ನಿಧಿಗರ್ಭದ ಬೆಟ್ಟಗಳು ಸಂಡೂರನ್ನು ಆವರಿಸಿಕೊಂಡಿವೆ. ಪ್ರಮುಖವಾಗಿ ೩,೪೨೧ (ಸಮುದ್ರ ಮಟ್ಟದಿಂದ) ಅಡಿ ಎತ್ತರದ ದೋಣಿಮಲೈ ಮತ್ತು ೩,೬೦೦ ಅಡಿ ಎತ್ತರದ ಕುಮಾರಸ್ವಾಮಿ ಬೆಟ್ಟಗಳು ಸಂಡೂರು ಕೇಂದ್ರದ ಎರಡು ಧ್ರುವಗಳಂತಿವೆ.

**೨.೨ ಸ್ಥಳನಾಮ**

"ಸಂಡೂರು" ಸ್ಥಳನಾಮದ ಉತ್ಪತ್ತಿಯನ್ನು ಕುರಿತು ಹಲವಾರು ಅಭಿಪ್ರಾಯಗಳನ್ನು ಕಾಣುತ್ತೇವೆ. ಸ್ಕಂದ ಪುರಾಣದ ಉಲ್ಲೇಖದಂತೆ ಸ್ಕಂದನಿರುವ ಪುರವಾದುದರಿಂದ "ಸ್ಕಂದಪುರ" ವೆನಿಸಿಕೊಂಡಿದೆ. ಇದರ ಜೊತೆಗೆ "ಸುಂದರಪುರ" ವೆಂಬ ಹೆಸರು ಇದರ ಪ್ರಾಚೀನ ಸರಣಿಯಲ್ಲಿ ಬರುತ್ತದೆ. ಆದರೆ 'ಸಂಡೂರು' ಶಬ್ದದ ಮೂಲರೂಪ "ಸಂದೂರು" ಆಗಿದ್ದು, ಬೆಟ್ಟ-ಗುಡ್ಡಗಳ ಸಂದುಗಳಲ್ಲಿರುವ ಊರು ಎಂಬ ಕಾರಣದಿಂದ ಈ ಹೆಸರು ಬಂದಿದೆ. ಈ ಸಂದು+ಊರು= ಸಂದೂರು ಎಂಬುದು ಇಂದು ಸಂಡೂರು ಆಗಿ ಪರಿವರ್ತನೆಗೊಂಡಿದೆ. 'ಸಂದು' ಎಂಬುದು ನಿರ್ದಿಷ್ಟ ಆಕೃತಿಮಾ ಇದು ಈ ಊರಿನ ವಿಶೇಷವನ್ನು ತಿಳಿಸುತ್ತದೆ. 'ಊರು' ಎಂಬುದು ವಾರ್ಗಿಕ ಆಕೃತಿಮಾ. ಇದು ಸಾಮಾನ್ಯ ವಾಚಕ. ಭೂಗೋಳ ಶಾಸ್ತ್ರಜ್ಞ ಮೇಕಲಿನ್‌ನ ಹೇಳಿಕೆಯ ಪ್ರಕಾರ ಸಂಡೂರು ಸಂದು (ಈ ಪ್ರದೇಶವು ಹೆಚ್ಚಾಗಿ ಕಂಡಿ, ಗಂಡಿ, ಕಣಿವೆಗಳಿಂದ ಕೂಡಿದೆ) ಊರು ಎಂಬುದಾಗಿತ್ತು ಎಂದು ತಿಳಿದುಬರುತ್ತದೆ. ಈ ಸಂದೂರು ಎಂಬುದು ಸ್ಥಳೀಯರ ಬಾಯಿಯಲ್ಲಿ ಸಂಡೂರು > ಸ್ವಂಡೂರು > ಸೊಂಡೂರು ಎಂದಾಗಿದೆ.

ಕೆಲವರ ಹೇಳಿಕೆಯಂತೆ ಸಂದುಗಳಿಂದ ಕಿರಿದಾದ ಓಣಿಗಳಿಂದ ಸಂಡೂರು ಕೂಡಿರುವುದರಿಂದ ಈ ಊರಿಗೆ 'ಸಂದೂರು' ಎಂಬ ಹೆಸರು ಬಂದಿತೆಂದು ಮತ್ತೆ ಕೆಲವರ

ಹೇಳಿಕೆಯಂತೆ ಈ ಊರಿಗೆ ಕಣಿವೆಗಳ ಮೂಲಕ ಪ್ರವೇಶವಿರುವುದರಿಂದ ಸಂದೂರು ಎಂಬ ಹೆಸರು ಬಂದಿದ್ದು ಬ್ರಿಟಿಷರ ಇಂಗ್ಲೀಷ್ ಭಾಷೆಯಿಂದಾಗಿ "ಸಂಡೂರು" ಆಯಿತೆಂದು ಹೇಳುತ್ತಾರೆ. ಈ ಹೇಳಿಕೆಗಳಷ್ಟೇ ಅಲ್ಲದೆ ಈ ಪ್ರದೇಶದಲ್ಲಿ ಕಂಡುಬರುವ ಶಾಸನಗಳ ಉಲ್ಲೇಖದಂತೆ ಗಮನಿಸುವುದಾದರೆ ಕುಮಾರಸ್ವಾಮಿ ಬೆಟ್ಟದಲ್ಲಿಯ ಪಾರ್ವತಿ ದೇವಾಲಯದ ಕ್ರಿ.ಶ.೧೨೦೬ರ ಹೊಯ್ಸಳ ೨ನೇ ವೀರಬಲ್ಲಾಳನ ಶಾಸನದಲ್ಲಿ ಮೊಟ್ಟ ಮೊದಲ ಬಾರಿಗೆ 'ಸಂಡೂರಿನ' ಉಲ್ಲೇಖವಿರುವುದನ್ನು ಕಾಣುತ್ತೇವೆ. ವಿಜಯನಗರ ಅವಧಿಯ ಕೆಲವು ಶಾಸನಗಳಲ್ಲಿ "ಸೊಂಡೂರು" ಸ್ಥಳನಾಮ ಉಲ್ಲೇಖ ಕಾಣಸಿಗುತ್ತವೆ. ಇದರಿಂದ ಕ್ರಿ.ಶ.೧೨೦೬ಕ್ಕಿಂತ ಹಿಂದಿನಿಂದಲೇ ಸೊಂಡೂರು ಸ್ಥಳನಾಮದ ಪಟ್ಟಣವಿತ್ತೆಂದು ತಿಳಿದುಬರುತ್ತದೆ. ಈ ಶಾಸನಗಳ ಆಧಾರಗಳನ್ನು ಹೊರತುಪಡಿಸಿದರೆ ಈ ಊರಿನ ನಿಜ ನಿಷ್ಪತ್ತಿಯನ್ನು ಕುರಿತು ವಿವೇಚಿಸಿದಾಗ "ಸಂಡೂರು" ಎಂಬುದು ದೇವತೆಯ ಹೆಸರಿನಿಂದಾಗಿ ಬಂದುದು. ಕುಮಾರಸ್ವಾಮಿ ದೇವಾಲಯದ ಪಕ್ಕದಲ್ಲಿರುವ ಪಾರ್ವತಿ ದೇವಾಲಯವು ಕುಮಾರಸ್ವಾಮಿ ದೇವಾಲಯಕ್ಕಿಂತಲೂ ಪುರಾತನವಾದುದಾಗಿದೆ. ಇದು ಕ್ರಿ.ಶ.೪-೫ನೇ ಶತಮಾನದಲ್ಲಿ ಕಟ್ಟಲ್ಪಟ್ಟಿರಬೇಕು.

ಈ ದೇವಾಲಯದ ಹೆಬ್ಬಾಗಿಲದ ಗೋಡೆಯ ಮೇಲಿನ ಶಾಸನದ ಲಿಪಿಗಳು ಕದಂಬರ ಕಾಲದಲ್ಲಿ ಬಳಸುತ್ತಿದ್ದ ಲಿಪಿಗಳನ್ನು ಹೋಲುತ್ತವೆ. ಇಷ್ಟು ಪ್ರಾಚೀನವಾದ ಈ ದೇವತೆಯ ಮೂಲ ಹೆಸರು "ಚಂಡಿ" ಇರಬೇಕು. ಈ ದೇವಾಲಯದ ಗೋಪುರದ ಮೇಲೆ ಚಂಡಿಯ ಸವೆದ ಮೂರ್ತಿ ಇಂದಿಗೂ ಸ್ಪಷ್ಟವಾಗಿ ಕಾಣುತ್ತದೆ. ಈ "ಚಂಡಿ" ದೇವತೆಯಿಂದಾಗಿ "ಸಂಡೂರು" ಎಂದು ಹೆಸರು ಬಂದಿದೆ. ಚಂಡಿ +ಊರು = ಚಂಡಿಯೂರು> ಚಂಡೂರು> ಸಂಡೂರು ಆಗಿದೆ. ಇಲ್ಲಿ 'ಚ' ಕಾರ 'ಸ' ಕಾರವಾಗಿ ಚಂಡೂರು ಎಂಬುದು ಸಂಡೂರು ಆಗಿ ಪರಿವರ್ತನೆಗೊಂಡಿರಬೇಕು. "ಚಂಡಿ" ದೇವತೆಯ ಆರಾಧನೆ ಸಾಮಾನ್ಯವಾಗಿ ಕಾಡು, ಗುಡ್ಡಗಳಿಂದ ಕೂಡಿರುವ ಏಕಾಂತ ಪ್ರದೇಶದಲ್ಲಿ ನಡೆಯುತ್ತಿತ್ತು. ಹಿಂದೆ ಸಂಡೂರಿನ ಪ್ರದೇಶ ಕಾಪಾಲಿಕರಿಂದ ಕೌಳರಿಂದ ಕೂಡಿತ್ತು. ಭೈರವ ತೀರ್ಥದ ಹೆಸರೇ ಸೂಚಿಸುತ್ತದೆ. ಅದೊಂದು ಕಾಪಾಲಿಕರ ಕ್ಷೇತ್ರವಾಗಿತ್ತೆಂದು, ಇಂದಿಗೂ ಇಲ್ಲಿಯ ಕೊಳ್ಳಗಳ ಪ್ರದೇಶದಲ್ಲಿ ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ಪ್ರಾಚೀನ ದೇವಾಲಯಗಳಿದ್ದು, ಅಲ್ಲಿ ದೇವತೆಯ ಆರಾಧನೆ ನಡೆಯುವುದನ್ನು ಕಾಣಬಹುದು. ಹೀಗಾಗಿ 'ಚಂಡಿ' ದೇವತೆಯ ಹೆಸರಿನಿಂದ 'ಸಂಡೂರು' ಎಂಬ ಹೆಸರು ಈ ಊರಿಗೆ ಬಂದಿತು.

## ೨.೩ ಚಾರಿತ್ರಿಕ ಹಿನ್ನೆಲೆ

### ಪ್ರಾಗಿತಿಹಾಸ ಕಾಲ

ಕರ್ನಾಟಕದ ನೆಲವು ಪ್ರಾಕ್-ಪ್ರಾಚೀನ ಮಾನವನ ಬಹುಕಾಲದ ವಸತಿಯಾಗಿತ್ತು. ಕ್ರಿ.ಶ.೧೯ ನೇಯ ಶತಮಾನದ ಕೊನೆಯ ಭಾಗದಿಂದ ಈ ವರೆಗೆ ಕರ್ನಾಟಕದಲ್ಲಿ ಪ್ರಾಚೀನ ಶಿಲಾಯುಗ, ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಹಲವಾರು ನೆಲೆಗಳನ್ನು ಪತ್ತೆ ಹಚ್ಚಲಾಗಿದೆ. ಇವುಗಳ ಶೋಧ ಮತ್ತು ಉತ್ಖನನಗಳಿಂದ ದೊರೆತ ಪುರಾತತ್ವ ವಸ್ತುಗಳಿಂದ ಕರ್ನಾಟಕದಲ್ಲಿ ಜನ ವಸತಿಯು ಸುಮಾರು ೫೦ ಲಕ್ಷ ವರ್ಷಗಳ ಹಿಂದಿನಿಂದಲೂ ಇದೆ ಎಂದು ತಿಳಿದುಬರುತ್ತದೆ. ಅಂದಿನಿಂದ ಇಂದಿನವರೆಗೆ ನಿರಂತರವಾಗಿ ಮಾನವನ ನೆಲೆಯಾಗಿರುವ ಕರ್ನಾಟಕದಲ್ಲಿ ರಾಬರ್ಟ್ ಬ್ರೂಸ್ ಪೂಟ್, ಕೆ.ಆರ್.ಯು. ಟಾಡ್, ಮಾರ್ಟಿಮರ್ ವ್ಹೀಲರ್ ಮುಂತಾದ ಪಾಶ್ಚಾತ್ಯ ಸಂಶೋಧಕರು ಮತ್ತು ಸಂಪತ್ ಅಯ್ಯಂಗಾರ್, ಡಾ. ಎಂ.ಎಚ್.ಕೃಷ್ಣ, ಡಾ.ಅ.ಸುಂದರ ಮುಂತಾದ ಭಾರತೀಯ ಸಂಶೋಧಕರು ಹಲವಾರು ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆ ಹಚ್ಚಿ ಉತ್ಖನನ ಮಾಡಿ, ಅನೇಕ ಹೊಸ ವಿಷಯಗಳನ್ನು ಬೆಳಕಿಗೆ ತಂದಿರುವುದೇ ಅಲ್ಲದೆ, ಇನ್ನೂ ಅನೇಕ ಪ್ರಾಗೈತಿಹಾಸಿಕ ನೆಲೆಗಳಿರುವ ಸುಳಿವು ನೀಡಿದ್ದಾರೆ.

ಇತಿಹಾಸ ಪೂರ್ವಕಾಲದಲ್ಲಿ ಸಂಡೂರು ಸುತ್ತಮುತ್ತಲಿನ ಪ್ರದೇಶಗಳಾದ ಕೊಪ್ಪಳ, ಕುರುಗೋಡು, ಕಲ್ಕಂಬ, ತೆಕ್ಕಲಕೋಟೆ, ಸಂಗನಕಲ್ಲು, ಕಪ್ಪಗಲ್ಲು, ತೋರಣಗಲ್ಲು, ರಾಂಪುರ, ಅಶೋಕ ಸಿದ್ಧಾಪುರ, ಜಟಿಂಗರಾಮೇಶ್ವರ, ಮೊಳಕಾಲ್ಮೂರು, ಗುಡೆಕೋಟೆಗಳು ಆದಿ ಮಾನವನ ನಿವಾಸಗಳಾಗಿದ್ದವು. ಹಾಗೂ ಸಿಡೇಗಲ್ಲು, ವಿಭೂತಿಗುಡ್ಡ, ತೋರಣಗಲ್ಲುಗಳು ಕಬ್ಬಿಣಯುಗದ ತಾಣಗಳಾಗಿವೆ.

### ಹಳೆಶಿಲಾಯುಗ (*Paleolithic Age*)

ಪೂರ್ವ ಶಿಲಾಯುಗದ ಕಾಲದಲ್ಲಿ ಮಾನವ ನಾವಿನ್ಯ ರಹಿತ ಶಿಲಾಯುಧಗಳನ್ನು ಬಳಸುತ್ತಿದ್ದನು. ಅಲ್ಲದೆ ಪ್ರಕೃತಿಯಲ್ಲಿ ಆಹಾರವನ್ನು ಯಾವ ರೀತಿ ಪಡೆಯುತ್ತಿದ್ದನೋ ಅದೇ ರೀತಿ ಬಳಸುತ್ತಿದ್ದನೇ ವಿನಃ ಅದನ್ನು ತನ್ನ ಅವಶ್ಯಕತೆಗೆ ತಕ್ಕಂತೆ ಸಿದ್ಧಪಡಿಸಿಕೊಳ್ಳುತ್ತಿರಲ್ಲಿಲ್ಲ.

ಪ್ರಾಣಿಗಳ ಚರ್ಮ ಅಥವಾ ತೊಗಟೆಯನ್ನು ಉಡುಪನ್ನಾಗಿ ಮಾಡಿಕೊಂಡಿದ್ದನು. ಹೆಚ್ಚು- ಕಡಿಮೆ ಅವನ ಜೀವನ ಪ್ರಾಣಿಗಳ ರೀತಿಯಲ್ಲಿತ್ತು.

ಕರ್ನಾಟಕದಲ್ಲಿ ಆದಿ ಹಳೆಯ ಶಿಲಾಯುಗ ಕಾಲದಿಂದಲೂ ಮಾನವನ ಚಟುವಟಿಕೆಗಳನ್ನು ಗುರುತಿಸಲಾಗಿದೆ. ಅದರಲ್ಲೂ ಬಳ್ಳಾರಿ ಜಿಲ್ಲೆಯು ಆಗಿನ ಮದ್ರಾಸ್ ಪ್ರಾಂತ್ಯದ ಇತರೆ ಜಿಲ್ಲೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಶಿಲಾಯುಗದ ನೆಲೆಗಳನ್ನು ಮತ್ತು ಅವಶೇಷಗಳನ್ನು ಹೊಂದಿದೆ ಎಂದು ೧೯೦೮ರ ಭಾರತದ ಇಂಪೀರಿಯಲ್ ಗೆಜೆಟಿಯರ್ ತಿಳಿಸುತ್ತದೆ. ರಾಬರ್ಟ್ ಬ್ರೂಸ್ ಫೂಟ್ ಈ ಜಿಲ್ಲೆಯ ಪ್ರಮುಖ ಪ್ರಾಗ್ಐತಿಹಾಸಿಕ ನೆಲೆಗಳನ್ನು ಸರ್ವೇಕ್ಷಣೆ ಮಾಡಿದ್ದಾನೆ. ಈತ ಸುಮಾರು ೭೭ ನೆಲೆಗಳನ್ನು ಗುರುತಿಸಿ ಅವುಗಳಲ್ಲಿ ೩೬ ನೆಲೆಗಳು ಪ್ರಮುಖವಾಗಿವೆ ಎಂದು ತಿಳಿಸುತ್ತಾನೆ.

ಸಂಡೂರು ತಾಲ್ಲೂಕಿನ ದರೋಜಿ, ಜೋಗ, ಕುರೆಕುಪ್ಪೆ ಬೆಟ್ಟಗಳು ಆದಿಹಳೆಯ ಶಿಲಾಯುಗ ಸಂಸ್ಕೃತಿಯ ನೆಲೆಯಾಗಿದ್ದವೆಂದು ಮತ್ತು ಈ. ಸಂಸ್ಕೃತಿಗೆ ಸಂಬಂಧಿಸಿದ ಶಿಲಾಯುಧ ಅವಶೇಷಗಳು ಪತ್ತೆಯಾಗಿರುವವೆಂದು ತಿಳಿದುಬರುತ್ತದೆ. ಇದೇ ತಾಲ್ಲೂಕಿನ ಮಲ್ಲಾಪುರ ಗ್ರಾಮದಲ್ಲಿ ಈ ಸಂಸ್ಕೃತಿಯ ಕೈಗೊಡಲಿಯ ಉಪಕರಣ ದೊರೆತಿದೆ. ಆದಿಹಳೆಯ ಶಿಲಾಯುಗದ ಉಪಕರಣಗಳು ಹೆಚ್ಚಾಗಿ ಅಶ್ಯೂಲ್ ಮಾದರಿಯಲ್ಲಿವೆ. ಇವು ಕೈಗೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ಕೊರೆದ ದುಂಡಾದ ಚಪ್ಪಟೆ ಉಪಕರಣ ಮೊದಲಾದವುಗಳಾಗಿವೆ. ಇವುಗಳಲ್ಲಿ ಅತ್ಯಂತ ವೈಶಿಷ್ಟ್ಯ ಪೂರ್ಣವಾದ ಉಪಕರಣವೆಂದರೆ ಕೈಗೊಡಲಿ.

ಈ ಶಿಲಾಯುಧ ಅವಶೇಷಗಳನ್ನು ಬೆಣಚು ಮತ್ತು ಹೆಮಟೈಟ್ ಶಿಲೆಗಳಿಂದ ಮಾಡಲಾಗಿದೆ. ಈ ತಾಲ್ಲೂಕಿನ ಮೇಲ್ಕಂಡ ಗ್ರಾಮಗಳು ಈ ಸಂಸ್ಕೃತಿಯ ನೆಲೆಗಳು ಆಗಿದ್ದವೆಂದು ಮತ್ತು ಈ ಸಂಸ್ಕೃತಿಯ ಅವಶೇಷಗಳು ಹಾಗೂ ಉಪಕರಣಗಳು ಈ ಪ್ರದೇಶದಲ್ಲಿ ದೊರೆತಿರುವುದರಿಂದ ಮತ್ತು ಈ ಪ್ರದೇಶವು ದಟ್ಟವಾದ ಕಾಡು ಹಾಗೂ ಉತ್ತಮವಾದ ನೆಲ-ಜಲವನ್ನು ಹೊಂದಿದ್ದು ಮಾನವನು ವಾಸಿಸಲು ಯೋಗ್ಯವಾದ ಪ್ರದೇಶವಾಗಿದ್ದರಿಂದ ಈ ಪರಿಸರದಲ್ಲಿ ಹಳೆಯ ಶಿಲಾಯುಗದ ಕಾಲದಿಂದಲೂ ಮಾನವನ ಅಸ್ತಿತ್ವವಿತ್ತೆಂದು ಸ್ಪಷ್ಟವಾಗುತ್ತದೆ.

**ಮಧ್ಯಶಿಲಾಯುಗ (*Mesolithic Age*)**

ಹಳೆಯ ಶಿಲಾಯುಗವನ್ನು ಸೂಕ್ಷ್ಮ ಶಿಲಾಯುಗ ಹಿಂಬಾಲಿಸಿತು. ಈ ಯುಗದಲ್ಲಿ ತಯಾರಿಸಲ್ಪಟ್ಟ ಆಯುಧಗಳು ಆಕಾರದಲ್ಲಿ ಬಹಳಷ್ಟು ಚಿಕ್ಕವಾಗಿವೆ. ಉದಾಹರಣೆಗೆ ಕೆಲವು ಆಯುಧಗಳು ೫.ಮಿ.ಮೀ. ನಿಂದ ೫.ಸೆಂ.ಮೀ ಉದ್ದ ಹಾಗೂ ೩.ಮಿ.ಮೀ. ನಿಂದ ೭.ಸೆಂ.ಮೀ. ವರೆಗೆ ಅಗಲವಾಗಿವೆ. ಆದ್ದರಿಂದ ಮಧ್ಯ ಶಿಲಾಯುಗವನ್ನು ಸೂಕ್ಷ್ಮ ಶಿಲಾಯುಗ ಎಂದು ಕರೆಯಲಾಗಿದೆ. ಈ ತಾಲ್ಲೂಕಿನ ಕುರೆಕುಪ್ಪೆ ಬೆಟ್ಟ, ಕೋಡಾಳು, ರಾಜಾಪುರ, ತೋರಣಗಲ್ಲು, ಮಲ್ಲಾಪುರ ಗ್ರಾಮಗಳು ಸೂಕ್ಷ್ಮ ಶಿಲಾಯುಗದ ನೆಲೆಗಳಾಗಿದ್ದವೆಂದು ಮತ್ತು ಅಪ್ಪಲಾಪುರದಲ್ಲಿ ಈ ಸಂಸ್ಕೃತಿಯ ಕೆಲವು ಸೂಕ್ಷ್ಮ ಶಿಲೋಪಕರಣಗಳು ದೊರೆತಿವೆ ಎಂದು ತಿಳಿದುಬರುವುದು ಅಲ್ಲದೆ ಅಯ್ಯನಹಳ್ಳಿ ರಾಂಪುರ(ಕೆರೆ)ದಲ್ಲಿಯೂ ಈ ಸಂಸ್ಕೃತಿಯ ವಿವಿಧ ಮಾದರಿಯ ಉಪಕರಣಗಳು ದೊರೆತಿವೆ.

ಮೇದರ ಹಳ್ಳಿಯಲ್ಲಿಯೂ ಈ ಸಂಸ್ಕೃತಿಯ ಕೆಲವು ಉಪಕರಣಗಳು ದೊರೆತಿದ್ದು ಅವು ನೀಳಗೆರೆಗಳುಳ್ಳ ಮೂಲ ಶಿಲಾಗಟ್ಟಿಗಳು ಚರ್ಟ್ ಶಿಲೆಯಲ್ಲಿ ದೊರೆತಿವೆ. ಯಶವಂತನಗರದಲ್ಲಿ ಈ ಸಂಸ್ಕೃತಿಯ ಉಪಕರಣಗಳು ಅಲ್ಲಲ್ಲಿ ದೊರೆತಿವೆ. ಆದರೆ ಇದು ಈ ಸಂಸ್ಕೃತಿಯ ನಿರ್ದಿಷ್ಟ ನೆಲೆಯಾಗಿದ್ದಿಲ್ಲವೆಂದು ತಿಳಿದುಬರುತ್ತದೆ. ಈ ಸೂಕ್ಷ್ಮಶಿಲಾಯುಧಗಳನ್ನು ಚರ್ಟ್, ಜಾಸ್ಪರ್, ಅಗೇಟ್ ಚಾಲ್ಸಿಡನಿ, ಕ್ರಿಸ್ಟಲ್ ಮುಂತಾದ ಅರೆ ಪ್ರಶಸ್ತ ಶಿಲೆಗಳಿಂದ ಹರಿತವಾದ ಅಲಗುಗಳು ಮತ್ತು ಅರ್ಧಚಂದ್ರಾಕೃತಿಯ ಹೆರೆಯುವ ಹಾಗೂ ಕೊರೆಯುವ ಮೊನೆಯುಳ್ಳ ಆಯುಧಗಳನ್ನು ಗಾತ್ರದಲ್ಲಿ ಸೂಕ್ಷ್ಮವಾಗಿಯೂ ಮತ್ತು ಹರಿತವಾಗಿಯೂ ಮಾಡುತ್ತಿದ್ದರು. ಈ ಕಾಲದಲ್ಲಿ ಮಾನವನು ಮೀನುಗಾರಿಕೆಯನ್ನು ಮತ್ತು ಬೇಟೆಯನ್ನು ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡಿದ್ದನು.

**ನವಶಿಲಾಯುಗ (*Neolithic Age*)**

ಮಾನವ ಆಯುಧೋಪಕರಣಗಳನ್ನು ಉಜ್ಜಿ ನಯಗೊಳಿಸಿ ಅದರ ಸೌಂದರ್ಯವನ್ನು ವೃದ್ಧಿಸಿದನು. ಅಲ್ಲದೆ ಹೆಚ್ಚು ಉಪಯೋಗವಾಗುವಂತೆ ಮಾಡಿಕೊಂಡು ಉಪಯೋಗಿಸಲು ಆರಂಭಿಸಿದ್ದರಿಂದ ಈ ಯುಗವನ್ನು ನವ ಶಿಲಾಯುಗವೆಂದು ಕರೆಯಲಾಗಿದೆ. ಈ ಹಂತದಲ್ಲಿ ಮಾನವನು ಅಲೆಮಾರಿ ಜೀವನವನ್ನು ಬಿಟ್ಟು ಒಂದೆಡೆ ನೆಲೆಸಿ ಬೇಸಾಯ ಹಾಗೂ

ಪಶುಪಾಲನೆಯನ್ನು ಆರಂಭಿಸಿ, ಆಹಾರ ಉತ್ಪಾದನೆಯಲ್ಲಿ ತೊಡಗಿ, ನಿಸರ್ಗವನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ.

ಈ ತಾಲ್ಲೂಕಿನ ಕುರೆಕುಪ್ಪೆ ಬೆಟ್ಟ, ಇಂಗಳ್ಗಿ, ಲಿಂಗದಹಳ್ಳಿ ಗ್ರಾಮಗಳಲ್ಲಿ ನೂತನ ಶಿಲಾಯುಗದ ಬೂದಿದಿಬ್ಬಗಳು ದೊರೆತಿವೆ. ತೋರಣಗಲ್ಲಿ ನಲ್ಲಿಯೂ ಈ ಸಂಸ್ಕೃತಿಯ ಮಡಿಕೆಯ ಭಾಗಗಳು ಬೂದಿಯಲ್ಲಿ ದೊರೆತಿದ್ದು ಬೂದಿದಿಬ್ಬಗಳು ಹಾಳಾಗಿವೆ. ದರೋಜಿಯಲ್ಲಿ ಈ ಸಂಸ್ಕೃತಿಯ ಉಜ್ಜಿ ನಯಗೊಳಿಸಿದ ಶಿಲೋಪಕರಣ ಮತ್ತು ನೀಳಚಕ್ಕೆಯ ಉಪಕರಣಗಳು ದೊರೆತಿವೆ. ರಾಜಾಪುರದಲ್ಲಿಯೂ ಈ ಸಂಸ್ಕೃತಿಯ ಉಜ್ಜಿ ನಯಗೊಳಿಸಿರುವ ಕೊಡಲಿಯ ತುಂಡೊಂದು ದೊರೆತಿದ್ದು ಮಡಕೆಯ ಭಾಗ ದೊರೆತಿವೆ. ಹಾಗೂ ಬಂಡೆಯ ಚಿತ್ರಗಳು ದೊರೆತಿವೆ.

**ತಾಮ್ರಶಿಲಾಯುಗ**

ನೂತನ ಶಿಲಾಯುಗ ಸಂಸ್ಕೃತಿಯ ನಂತರ ವಿಕಾಸಗೊಂಡ ಹಂತ ಶಿಲಾ ತಾಮ್ರಯುಗ. ಮಾನವನು ಕಲ್ಲಿಗೆ ಬದಲಿಯಾಗಿ ತಾಮ್ರವನ್ನು ಆಯುಧೋಪಕರಣಗಳನ್ನು ಮಾಡಲು ಬಳಸಲಾರಂಭಿಸಿದ್ದರಿಂದ ಈ ಕಾಲವನ್ನು ತಾಮ್ರ ಶಿಲಾಯುಗವೆಂದು ಕರೆಯಲಾಗಿದೆ. ಸಂಡೂರು ತಾಲ್ಲೂಕಿನ ಲಕ್ಷ್ಮೀಪುರವು ಶಿಲಾ ತಾಮ್ರಯುಗದ ನೆಲೆಯಾಗಿದ್ದು, ದರೋಜಿಯಲ್ಲಿ ಈ ಸಂಸ್ಕೃತಿಯ ಬೂದಿದಿಬ್ಬ ದೊರೆತಿದೆ. ಬೈರನಾಯಕನಹಳ್ಳಿ, ರಾಜಾಪುರದಲ್ಲಿಯೂ ಈ ಸಂಸ್ಕೃತಿಯ ಗೀರು ಚಿತ್ರಗಳು ದೊರೆತಿವೆ. ಈ ಪ್ರದೇಶವು ಶಿಲಾ ತಾಮ್ರಯುಗದ ನೆಲೆಯಾಗಿದ್ದರೂ ಈ ತಾಲ್ಲೂಕಿನ ಯಾವುದೇ ಪ್ರದೇಶಗಳಲ್ಲಿ ತಾಮ್ರದ ಆಯುಧಗಳು ಇದುವರೆಗೂ ದೊರಕಿಲ್ಲ.

**ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗ**

ಶಿಲಾ-ತಾಮ್ರಯುಗದ ಸಂಸ್ಕೃತಿಯ ನಂತರ ಈ ಪ್ರದೇಶದಲ್ಲಿ ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಕಂಡುಬರುತ್ತವೆ. ಈ ಕಾಲದಲ್ಲಿ ಮಾನವನು ಮೊದಲ ಬಾರಿಗೆ ಕಬ್ಬಿಣದ ಉಪಯೋಗವನ್ನು ಕಂಡುಕೊಳ್ಳುತ್ತಾನೆ. ಕಬ್ಬಿಣದ ಆಯುಧಗಳನ್ನು ಹಾಗೂ ಸಮಾಧಿಗಳ ರಚನೆಗೆ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿರುವುದರಿಂದ ಈ ಕಾಲದ ಸಂಸ್ಕೃತಿಯನ್ನು ಕಬ್ಬಿಣಯುಗ ಅಥವಾ ಬೃಹತ್ ಶಿಲಾಸಂಸ್ಕೃತಿ ಎಂದು ಕರೆಯಲಾಯಿತು. ಈ

ತಾಲ್ಲೂಕಿನ ಮಲ್ಲಾಪುರ ಗ್ರಾಮವು ಈ ಸಂಸ್ಕೃತಿಯ ಗೋರಿಯ ನೆಲೆಯಾಗಿದ್ದು, ಕಂಡಿಕೋಣೆ ಗೋರಿಗಳು ದೊರಕಿವೆ. ಹಾಗೂ ರಾಜಾಪುರ, ಬೈರನಾಯಕನಹಳ್ಳಿಗಳೂ ಸಹ ಈ ಸಂಸ್ಕೃತಿಯ ನೆಲೆಗಳಾಗಿದ್ದು, ಗೀರು ಚಿತ್ರಗಳು ದೊರೆತಿವೆ. ಈ ಸಂಸ್ಕೃತಿಯ ಜನರು ದೊಡ್ಡ ದೊಡ್ಡ ಕಲ್ಲು ಗುಂಡುಗಳನ್ನು ಚಪ್ಪಡಿಗಳನ್ನೂ ನಿರ್ದಿಷ್ಟ ಸ್ಥಳಕ್ಕೆ ಸಾಗಿಸಿ ನಿರ್ಮಾಣ ಕುಶಲತೆಗೆ ಏನು ಕಡಿಮೆಯಿಲ್ಲದ ವಿವಿಧ ಪ್ರಕಾರಗಳ ಕಲ್ಗೋರಿಗಳನ್ನು ಕಟ್ಟಿದ್ದರೂ ಕೂಡ ಅವರ ವಾಸದ ಮನೆಗಳ ನಿರ್ಮಿತಿಯ ಬಗ್ಗೆ ಕುರುಹುಗಳು ಸಿಕ್ಕಿಲ್ಲವೆಂದೇ ಹೇಳಬಹುದು.

ಕರ್ನಾಟಕದಲ್ಲಿ ಈ ಸಂಸ್ಕೃತಿಗೆ ಸಂಬಂಧಿಸಿದಂತೆ ವಿವಿಧ ಬಗೆಯ ಶಿಲಾ-ಸಮಾಧಿಗಳು ಕಂಡುಬರುತ್ತವೆ. ಅವುಗಳಲ್ಲಿ ಶಿಲಾವರ್ತುಲಗಳು, ಒರಟುಕಲ್ಲು ಬಂಡೆಗಳಿಂದ ನಿರ್ಮಿತವಾದ ಶಿಲಾತೊಟ್ಟಿಗಳು, ಕಲ್ಲುಚಪ್ಪಡಿಗಳಿಂದ ನಿರ್ಮಿತವಾದ ಶಿಲಾತೊಟ್ಟಿಗಳು, ಸಮಾಧಿ ಗುಂಡುಗಳು ಮುಖ್ಯವಾಗಿವೆ. ಇವುಗಳಲ್ಲಿ ಮೃತರ ಅವಶೇಷಗಳು, ಮಡಿಕೆಗಳು, ಆಹಾರ ಪದಾರ್ಥಗಳು ಮತ್ತು ಅವರು ಉಪಯೋಗಿಸುತ್ತಿದ್ದ ಕಬ್ಬಿಣದ ಆಯುಧೋಪಕರಣಗಳನ್ನು ಇಟ್ಟು ಸಮಾಧಿ ಮಾಡುತ್ತಿದ್ದರು. ಈ ಜನರು ಕಪ್ಪು ಮತ್ತು ಕೆಂಪು ಮಡಿಕೆಗಳನ್ನು ಕಬ್ಬಿಣದ ಆಯುಧಗಳನ್ನು ಬಳಸುತ್ತ ಸತ್ತವರನ್ನು ವಿಶಿಷ್ಟ ರೀತಿಯ ಸಮಾಧಿಗಳಲ್ಲಿ ಹೂಳುತ್ತಿದ್ದರಿಂದ ಪ್ರಾಕ್ತನ ಶಾಸ್ತ್ರಜ್ಞರು ಇವರ ಸಂಸ್ಕೃತಿಯನ್ನು ಬೃಹತ್-ಶಿಲಾ ಸಮಾಧಿ ಸಂಸ್ಕೃತಿ ಎಂದು ಕರೆದಿದ್ದಾರೆ. ಕಪ್ಪು ಮತ್ತು ಕೆಂಪು ಮಡಿಕೆಗಳು ಹಾಗೂ ಕಬ್ಬಿಣದ ವಸ್ತುಗಳನ್ನು ಈ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳೆಂದು ಪರಿಗಣಿಸಲಾಗಿದೆ.

ಸಂಡೂರು ಪರಿಸರದ ಸಿಡೇಗಲ್ಲು, ವಿಭೂತಿಗುಡ್ಡ, ತೋರಣಗಲ್ಲು ಮತ್ತು ಬ್ರಹ್ಮಗಿರಿಯಲ್ಲಿ ನಡೆದ ಉತ್ಖನನದಲ್ಲಿ ಕಲ್ಗೋರಿಗಳು ಪತ್ತೆಯಾಗಿದ್ದು, ಅದರ ಜೊತೆಯಲ್ಲಿ ಈಟಿ, ಭರ್ಜಿ, ಕತ್ತಿ, ಬಾಣದ ಮೊನೆಗಳು ಅಪಾರ ಸಂಖ್ಯೆಯಲ್ಲಿ ದೊರೆತಿವೆ. ಈ ಭಾಗವು ಪ್ರಾಕ್ತನ ಶಾಸ್ತ್ರಜ್ಞರ ಪ್ರಕಾರ ಬೃಹತ್ ಶಿಲಾಯುಗದ ಅಂದರೆ ಲೋಹಯುಗದ ಸಂಸ್ಕೃತಿಯ ತಾಣವಾಗಿತ್ತು. ಈ ಲೋಹ ಸಂಸ್ಕೃತಿಯು ಕ್ರಿ.ಪೂ.೧೨೦೦ ರಿಂದ ೨೦೦ ರವರೆಗೆ ಅಸ್ತಿತ್ವದಲ್ಲಿತ್ತು ಎಂಬುದು ಸಂಶೋಧಕರ ಅನಿಸಿಕೆ. ಅದರಲ್ಲೂ ಮುಖ್ಯವಾಗಿ ಸಂಡೂರಿನ ಕಾರ್ತಿಕೇಯನ (ಕುಮಾರಸ್ವಾಮಿ ಬೆಟ್ಟ) ದ ಪರಿಸರವು ಕ್ರಿ.ಪೂ.೯೦೦ ರಿಂದ ೫೦೦ರ ಅವಧಿಯಲ್ಲಿ ಕಬ್ಬಿಣದ ಕಾರ್ಯಾಗಾರಕ್ಕೆ ಪ್ರಸಿದ್ಧಿಯನ್ನು ಪಡೆದಿತ್ತು.

ಈ ಅವಧಿಯಲ್ಲಿ ದೊರೆತ ಕಬ್ಬಿಣದ ಉಪಕರಣಗಳನ್ನು ವೈಜ್ಞಾನಿಕ ಅಧ್ಯಯನಕ್ಕೆ ಒಳಪಡಿಸಿ ಅದರಿಂದ ತಿಳಿದುಬಂದ ಸಂಗತಿಯಿಂದ ಈ ಉಪಕರಣಗಳು ಈ ಪ್ರದೇಶದ ಕಬ್ಬಿಣದ ಅದಿರನ್ನು ಸಂಗ್ರಹಿಸಿ ಮತ್ತು ಸಂಸ್ಕರಿಸಿ ಮಾಡಿದ ಕಬ್ಬಿಣದ ಲೋಹದಿಂದ ಮಾಡಿದವುಗಳಾಗಿವೆ ಎಂಬ ಸತ್ಯಾಂಶವನ್ನು ಶೋಧಕರು ಶೋಧಿಸಿದ್ದಾರೆ. ಈ ಅವಧಿಯಲ್ಲಿ ನೆಲಸಿದ್ದ ಜನವಸತಿಯಲ್ಲಿ ಒಂದು ಗುಂಪಿನವರು ಕುಮಾರಸ್ವಾಮಿಯ ಬೆಟ್ಟ ಹಾಗೂ ಸುತ್ತಮುತ್ತಲಿನ ಪ್ರದೇಶದಲ್ಲಿ ಕಬ್ಬಿಣದ ಅದಿರಿನ ನಿಕ್ಷೇಪವನ್ನು ಗುರುತಿಸಿ ಮತ್ತು ಸಂಗ್ರಹಿಸಿ ಈ ಲೋಹದ ನಾನಾ ಪ್ರಕಾರದ ಉಪಕರಣಗಳನ್ನು ಮತ್ತು ಶಸ್ತ್ರಗಳನ್ನು ತಯಾರಿಸುವಲ್ಲಿ ಸಿದ್ದ ಹಸ್ತರಾಗಿದ್ದರು ಎಂದು ಹೇಳಲು ದೊರೆತ ವರ್ಣಚಿತ್ರಗಳು ಸಾಕ್ಷಿಯಾಗಿವೆ.

**ಆದಿ ಇತಿಹಾಸ ಕಾಲ**

ಬೃಹತ್ ಶಿಲಾಯುಗ ಸಂಸ್ಕೃತಿಯ ನಂತರ ಈ ಪ್ರದೇಶದಲ್ಲಿ ಇತಿಹಾಸ ಆರಂಭಯುಗದ ಅವಶೇಷಗಳು ಕಂಡುಬರುತ್ತವೆ. ಮಾನವನು ಜೀವನದ ವಿವಿಧ ಸಂಸ್ಕೃತಿಗಳ ಹಂತದಿಂದ ಲಿಪಿಯ ಬಳಕೆಗೆ ಬಂದ ಹಂತವನ್ನು ಇತಿಹಾಸ ಆರಂಭಯುಗ ಎಂದು ಗುರುತಿಸಬಹುದಾಗಿದೆ. ಸಂಡೂರು ತಾಲ್ಲೂಕಿನ ಕ್ಷೇತ್ರದ ಜೋಗಿಕೊಳ್ಳದಲ್ಲಿ ಇತಿಹಾಸ ಆರಂಭಯುಗದ ಇಟ್ಟಿಗೆ ಕಟ್ಟಡದ ಅವಶೇಷಗಳು ದೊರೆತಿವೆ. ಇವು ಇಟ್ಟಿಗೆಗಳಿಂದ ಕಟ್ಟಲ್ಪಟ್ಟ ದೇವಾಲಯದ ಅವಶೇಷಗಳು ಮತ್ತು ಕಲ್ಲಿನ ಕಂಬಗಳಾಗಿದ್ದು, ಇತ್ತೀಚೆಗೆ ಕಂಡುಬಂದಿವೆ. ಇಲ್ಲಿ ದೊರೆತ ಇಟ್ಟಿಗೆಗಳು ಪ್ರಾಚೀನ ಕಾಲದಲ್ಲಿ ಬಳಸುತ್ತಿದ್ದ ಇಟ್ಟಿಗೆಗಳನ್ನು ಹೋಲುತ್ತವೆ. ಇವುಗಳ ಅಳತೆ ಒಂದು ಅಡಿ ಎಂಟೂವರೆ ಇಂಚು ಉದ್ದ ಎಂಟೂವರೆ ಇಂಚು ಹಾಗೂ ಅಗಲ ನಾಲ್ಕು ಇಂಚು ದಪ್ಪವಾಗಿವೆ. ಇಲ್ಲಿ ನಿರ್ಮಿಸಲ್ಪಟ್ಟಿದ್ದ ದೇವಾಲಯ ಕ್ರಿ.ಶ.೧-೨ನೇ ಶತಮಾನಕ್ಕೆ ಸಂಬಂಧಪಟ್ಟಿರಬೇಕು. ಈ ಅವಶೇಷಗಳ ಅಡಿಯಲ್ಲಿ ಕಲ್ಲಿನಿಂದ ಕೆತ್ತಲ್ಪಟ್ಟ ಸ್ತ್ರೀ ದೇವತೆಯ ವಿಗ್ರಹ ದೊರೆತಿದೆ. ಹಾಗೂ ಜೋಗದ ಗುಡ್ಡದಲ್ಲಿ ಶಿಲಾಯುಗದ ಮಾನವ ಬದುಕಿದ ಬಗ್ಗೆ ಕುರುಹುಗಳು ದೊರಕಿವೆ. ಇಲ್ಲಿ ಮೂಲತಃ ವಾಸವಾಗಿದ್ದ ಜನರು "ದ್ರಾವಿಡ ಜನಾಂಗದವರು". ವೇದ ಕಾಲದಲ್ಲಿ ಬಳಕೆಯಿದ್ದ "ಶಿಶ್ನಾರಾಧನೆ"ಯನ್ನು ನಡೆಸುತ್ತಿದ್ದ ಜನರು ಇಲ್ಲಿ ವಾಸವಾಗಿದ್ದರು. ಶಿಶ್ನಾರಾಧನೆಯ ನಂತರದ ಹಂತದ ಊರ್ಧ್ವಮುಖಯೋನಿ ಪೀಠ ರಹಿತ ಲಿಂಗಗಳು ಕುಮಾರಸ್ವಾಮಿ ದೇವಾಲಯದ ಆವರಣದಲ್ಲಿವೆ. ಇವು ಯೋನಿಪೀಠಯುಕ್ತ ಲಿಂಗಗಳಿಗಿಂತಲೂ ಪ್ರಾಚೀನ. ಹಾಗೂ ತೋರಣಗಲ್ಲಿನಲ್ಲಿಯೂ ಈ ಹಂತದ ಮಡಕೆ ಭಾಗಗಳು ಬೂದಿಯಲ್ಲಿ ದೊರೆತಿವೆ.

ಸಂಡೂರಿನ ಇತಿಹಾಸವು ಶಿಲಾಯುಗದ ಮಾನವನಿಂದ ಪ್ರಾರಂಭವಾಗಿತ್ತು ಎಂಬುದಕ್ಕೆ ಇಲ್ಲಿ ದೊರೆತ ಇತಿಹಾಸ ಪೂರ್ವಕಾಲದ ಅವಶೇಷಗಳೇ ಆಧಾರವಾಗಿವೆ. ಹಾಗೂ ಶಿಲಾಯುಗದ ಮಾನವನಿಗೆ ಬೇಕಾಗುತ್ತಿದ್ದ ಕುಡಿಯುವ ನೀರು, ದಟ್ಟವಾದ ಅರಣ್ಯ, ಬೇಟೆಯಾಡಲು ಪ್ರಾಣಿಗಳು ಯಥೇಚ್ಛವಾಗಿ ಸಿಗುತ್ತಿದ್ದರಿಂದ ಶಿಲಾಯುಗದ ಮಾನವ ಇಲ್ಲಿ ವಾಸಿಸುತ್ತಿದ್ದ ಎಂದು ಈ ಎಲ್ಲಾ ಹಿನ್ನೆಲೆಯಿಂದ ಸಂಡೂರಿನ ಪರಿಸರವು ಇತಿಹಾಸ ಪೂರ್ವಕಾಲದ ಮಾನವನ ನೆಲೆಯಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.

ಈ ಅಧ್ಯಯನದಲ್ಲಿ ಸಂಡೂರು ತಾಲ್ಲೂಕಿನ ಪ್ರಾದೇಶಿಕ(ಸ್ಥಳೀಯ) ಇತಿಹಾಸವನ್ನು ವಿವಿಧ ಆಕರಗಳ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಸ್ಥಳೀಯ ಇತಿಹಾಸವು ಚರಿತ್ರೆಯ ಅಧ್ಯಯನದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇತಿಹಾಸ ಶಾಸ್ತ್ರದ ಬೆಳವಣಿಗೆಯ ಪರಿಣಾಮವಾಗಿ ಇತಿಹಾಸಕಾರರಿಂದ ಕಡೆಗಣಿಸಲ್ಪಟ್ಟಿದ್ದ ಸ್ಥಳೀಯ ಇತಿಹಾಸಕ್ಕೆ ಇಂದಿನ ದಿನಗಳಲ್ಲಿ ಹೆಚ್ಚಿನ ಮಹತ್ವ ದೊರಕಿದೆ. ಭಾರತೀಯ ಸಂದರ್ಭದಲ್ಲಿ ಸ್ಥಳೀಯ ಇತಿಹಾಸವನ್ನು ಮುಖ್ಯವೆಂದು ಪರಿಗಣಿಸುವುದು ಅತ್ಯವಶ್ಯಕವಾಗಿದೆ. ನಮ್ಮ ನಾಡಿನ ಇತಿಹಾಸವು ಹಲವಾರು ಪ್ರದೇಶಗಳ, ಪ್ರಾಂತಗಳ, ರಾಜ್ಯಗಳ, ಸಂಸ್ಥೆಗಳ ಹಾಗೂ ಜನಾಂಗಗಳ ಕಥೆಯಾಗಿದೆ. ವಿವಿಧ ಪ್ರದೇಶಗಳ ಜನರ ಜೀವನ ವಿಧಾನ ಭಿನ್ನ ಭಿನ್ನವಾದ ಧರ್ಮ, ಗುಂಪು, ಸಮುದಾಯಗಳು ಮತ್ತು ಇವುಗಳಿಂದ ಕೂಡಿ ನಾಡಿನ ಇತಿಹಾಸ ಬೆಳೆದಿದೆ.

ಭೌಗೋಳಿಕ ಲಕ್ಷಣಗಳ ಪರಿಣಾಮವಾಗಿ ಪ್ರತ್ಯೇಕವಾಗಿ ಉಳಿದ-ಬೆಳೆದ ರಾಜ್ಯಗಳ ಸಂಸ್ಕೃತಿಗೆ ರಂಗುರಂಗಿನ ಎಳೆಗಳನ್ನು ಎಚ್ಚರಿಕೆಯಿಂದ ಪೋಣಿಸಿದಾಗ ಇತಿಹಾಸದ ವರ್ಣಮಯ ಚಿತ್ರ ಮೂಡುತ್ತದೆ. ಈ ಹಿನ್ನಲೆಯಲ್ಲಿ ಸಂಡೂರು ತಾಲ್ಲೂಕಿನ ವಿವಿಧ ಪ್ರದೇಶಗಳ ವೈವಿಧ್ಯ ಪೂರ್ಣವಾದ ಆಕರಗಳನ್ನು ಸಂಗ್ರಹಿಸಿ ಈ ಸ್ಥಳೀಯ ಇತಿಹಾಸದ ಸ್ಪಷ್ಟ ಚಿತ್ರಣವನ್ನು ನೀಡುವ ಪ್ರಯತ್ನ ಇದಾಗಿದೆ.

ಈ ಪ್ರದೇಶವು ಇತಿಹಾಸ ಪೂರ್ವಕಾಲ ಮತ್ತು ಪುರಾಣಗಳ ಕಾಲದಿಂದಲೂ ತನ್ನದೇ ಆದ ಸಾಂಸ್ಕೃತಿಕ, ಧಾರ್ಮಿಕ, ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಹಾಗೂ ಈ ಪ್ರದೇಶದ ಸುತ್ತಮುತ್ತಲಿರುವ ಗ್ರಾಮಗಳಿಗೆ, ಕ್ಷೇತ್ರಗಳಿಗೆ ಮತ್ತು ಕೊಳ್ಳಗಳಿಗೆ, ತೀರ್ಥಗಳಿಗೆ ತಮ್ಮದೇ ಆದ ಪೌರಾಣಿಕ ಹಿನ್ನೆಲೆಗಳಿವೆ.

**ಇತಿಹಾಸ ಕಾಲ**

ಈ ಪ್ರದೇಶವು ಅನೇಕ ರಾಜಕೀಯ ವಂಶಗಳ ಆಳ್ವಿಕೆಗೆ ಒಳಪಟ್ಟಿದ್ದನ್ನು ಕಾಣುತ್ತೇವೆ. ಅವುಗಳಲ್ಲಿ ಈ ಜಿಲ್ಲೆಯ ಹಾಗೂ ಕನ್ನಡ ನಾಡನ್ನು ಆಳಿದ ಪ್ರಸಿದ್ಧ ರಾಜ ಮನೆತನಗಳಾದ ನಂದರು, ಮೌರ್ಯರು, ಗುಪ್ತರು, ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಪಾಂಡ್ಯರು, ಕಲ್ಯಾಣಚಾಲುಕ್ಯರು, ಕಲಚೂರಿ, ಸೇವುಣರು, ಸಿಂಧರು, ಹೊಯ್ಸಳರು, ಕುಮ್ಮಟದ ನಾಯಕರ ಆಳ್ವಿಕೆಯ ಪರಿಧಿಗೆ ಒಳಪಟ್ಟಿದ್ದು, ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಪೂರ್ವದಲ್ಲಿ ಸಂಡೂರಿಗೆ ಸಮೀಪವಿರುವ ಹೊಸಮಲೆದುರ್ಗ (ರಾಮನದುರ್ಗ, ರಾಮಘಡ) ವು ಕಂಪಿಲರಾಯ ಮತ್ತು ಆತನ ಮಗ ಕುಮಾರರಾಮನ ಆಳ್ವಿಕೆಗೂ ಒಳಪಟ್ಟಿತ್ತು. ಕುಮಾರರಾಮನು ದೆಹಲಿ ಸುಲ್ತಾನನೊಂದಿಗೆ ಹೋರಾಡುತ್ತ ತನ್ನ ಪ್ರಾಣವನ್ನೇ ಕೊಡುತ್ತಾನೆ.

ಈ ಯುದ್ಧದಿಂದ ಕಂಪಿಲರಾಯನೂ ಮರಣಿಸಿದ್ದರಿಂದ ಕಂಪಿಲರಾಯನ ರಾಜ್ಯನಾಶವಾಯಿತು. ಮುಂದೆ ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡ ಮೇಲೆ ಸಂಡೂರಿನ ಪ್ರದೇಶವು ಇವರ ಆಳ್ವಿಕೆಗೆ ಒಳಪಟ್ಟಿತು. ವಿಜಯನಗರ ಸಾಮ್ರಾಜ್ಯ ಪತನಾನಂತರ ಈ ಪ್ರದೇಶವು ಜರಿಮಲೆ ಪಾಳೆಗಾರರ ಅಳ್ವಿಕೆಗೆ ಒಳಪಟ್ಟಿತು. ನಂತರ ಬಿಜಾಪುರ ಸುಲ್ತಾನನಿಂದ ಶಿವಾಜಿಯ ಆಳ್ವಿಕೆಗೆ ಒಳಪಟ್ಟಿತು. ಶಿವಾಜಿಯ ನಂತರ ಈತನ ಸೇನಾನಿ ಸಂತಾಜಿ ಘೋರ್ಪಡೆಯ ವಂಶಸ್ಥನಾದ ಸಿದ್ದೋಜಿರಾವ್ ಘೋರ್ಪಡೆಯವರ ಆಳ್ವಿಕೆಗೊಳಪಟ್ಟಿತ್ತು.

ಕ್ರಿ.ಶ.೧೭೭೫-೭೬ರಲ್ಲಿ ಸಂಡೂರು ಹೈದರಾಲಿಯ ಆಳ್ವಿಕೆಗೆ ಒಳಪಟ್ಟಿತ್ತಾದರೂ ೧೭೯೨ರಲ್ಲಿ ಟಿಪ್ಪುಸುಲ್ತಾನನಿಗೂ ಮತ್ತು ಬ್ರಿಟಿಷರ ಈಸ್ಟ್ ಇಂಡಿಯಾ ಕಂಪನಿಗೂ ನಡೆದ ಒಪ್ಪಂದದಂತೆ ಸಂಡೂರಿನ ಅಧಿಕಾರ ಪುನಃ ಘೋರ್ಪಡೆಯವರಿಗೆ ಲಭ್ಯವಾಯಿತು. ಹಾಗೂ ಕ್ರಿ.ಶ.೧೮೧೭ರಲ್ಲಿ ಬೆಸ್ಸಿನ್ ಒಪ್ಪಂದದ ಪ್ರಕಾರ ಸಂಡೂರು ಬ್ರಿಟಿಷರ ವಶವಾಗಿದ್ದು ಕ್ರಿ.ಶ.೧೮೧೮ರಲ್ಲಿ ಪುನಃ ಸಂಡೂರಿನ ಅಧಿಕಾರವನ್ನು ಘೋರ್ಪಡೆ ವಂಶದವರಿಗೆ ವಹಿಸಿಕೊಡಲಾಯಿತು.

ಹೀಗೆ ಸಂಡೂರಿನ ಪ್ರದೇಶವು ಈ ಎಲ್ಲಾ ರಾಜ ಮನೆತನಗಳ ಒಂದಿಲ್ಲೊಂದು ರೀತಿಯ ಪ್ರಭಾವಕ್ಕೆ ಒಳಗಾಗಿದ್ದನ್ನು ಕುರಿತು ಈ ಅಧ್ಯಾಯದಲ್ಲಿ ಆಯಾ ರಾಜ ಮನೆತನಗಳ ಇತಿಹಾಸವನ್ನು ವಿವರವಾಗಿ ಹೇಳಲು ಪ್ರಯತ್ನಿಸಲಾಗಿದೆ.

## ನಂದರು

ಬಳ್ಳಾರಿ ಜಿಲ್ಲೆಯ ಈ ವಿಭಾಗವನ್ನು ನಂದರು(ಸು.ಕ್ರಿ.ಪೂ.೪.ನೇಯ ಶತಮಾನ) ಆಳಿದ್ದರೆಂಬುದಕ್ಕೆ ನಮಗೆ ಪರೋಕ್ಷ ಮಾಹಿತಿಗಳು ಲಭಿಸುತ್ತವೆ. ಪ್ರಾಚೀನ ಕೃತಿಗಳ ಹೇಳಿಕೆಯ ಪ್ರಕಾರ ನಂದರು ತಮ್ಮ ಎಲ್ಲಾ ಶತ್ರುಗಳನ್ನು ಸೋಲಿಸಿ ಭಾರತ ದೇಶದ ಚಕ್ರಾಧಿಪತ್ಯವನ್ನು ವಹಿಸಿಕೊಂಡರು. ಇದರ ಜೊತೆಗೆ ಕನ್ನಡದ ಪ್ರಾಚೀನ ಶಾಸನಗಳಿಂದ (೧೦ನೇಯ ಶತಮಾನದಿಂದ ೧೩ನೇಯ ಶತಮಾನದವರೆಗೆ) "ಕುಂತಲನಾಡು" ಎಂದು ಪ್ರಸಿದ್ಧಿ ಪಡೆದಿದ್ದ ಈ ಕರ್ನಾಟಕವನ್ನು ಆಳುತ್ತಿದ್ದುದಾಗಿ ಉಲ್ಲೇಖಿಸಿಗುತ್ತದೆ. ಅಂದರೆ ಕುಂತಲನಾಡಿನ ಸುಮಾರು ಮುಕ್ಕಾಲು ಭಾಗ ಪ್ರದೇಶ ಅವರ ವಶದಲ್ಲಿತ್ತು ಎಂಬ ಶಿಕಾರಿಪುರದ ಶಾಸನದ ಹೇಳಿಕೆಯ ಆಧಾರದ ಮೇಲೆ ಬಳ್ಳಾರಿ ಜಿಲ್ಲೆಯ ಸಂಡೂರಿನ ಪ್ರದೇಶ ಅದನ್ನು ಒಳಗೊಂಡಿರಬಹುದು ಎಂದು ಪರೋಕ್ಷ ಮಾಹಿತಿಯಿಂದ ಊಹಿಸಬಹುದಾಗಿದೆ.

## ಮೌರ್ಯರು

ಕ್ರಿ.ಪೂ.೩ನೇಯ ಶತಮಾನದಲ್ಲಿ ಉತ್ತರ ಭಾರತದಲ್ಲಿ ಅಧಿಕಾರಕ್ಕೆ ಬಂದ ಮೌರ್ಯರು ದಕ್ಷಿಣ ಭಾರತದ ಕೆಲವು ಪ್ರದೇಶಗಳ ಮೇಲೆ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದರು. ಇವರ ಕಾಲದ ಅಶೋಕನ ಶಾಸನಗಳು ಸಂಡೂರು ನೆರೆಯ ಸೀಮೆಗಳಾದ ಕೊಪ್ಪಳ, ಗವಿಮಠ, ಮಸ್ಕಿ, ನಿಟ್ಟೂರು, ಅಶೋಕನ ಸಿದ್ಧಾಪುರ, ಜಟ್ಟಿಂಗರಾಮೇಶ್ವರ, ಬ್ರಹ್ಮಗಿರಿಗಳಲ್ಲಿ ದೊರಕಿರುವುದರಿಂದ ಸಂಡೂರು ಮೌರ್ಯರ ಆಡಳಿತಕ್ಕೆ ಒಳಪಟ್ಟಿತ್ತೆಂದು ತಿಳಿದುಬರುವುದು. ಬ್ರಹ್ಮಗಿರಿ ಶಾಸನದ ಉಲ್ಲೇಖದಂತೆ ಇದು (ಇಸಿಲಾ) ಸಾಮ್ರಾಜ್ಯದ ದಕ್ಷಿಣ ಗಡಿಯಾಗಿದ್ದು ಇಸಿಲಾವನ್ನು ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡು ಮಹಾಮಾತ್ರರನ್ನು ಅಲ್ಲಿ ನೇಮಿಸಿದ್ದನು.

ಮೌರ್ಯರ ಕಾಲದಲ್ಲಿ ಸಂಡೂರಿನ ಕುಮಾರಸ್ವಾಮಿಯ ಆರಾಧನೆಯು ಅಭಿವೃದ್ಧಿ ಹೊಂದುತ್ತಾ ಬಂದಂತೆ ಕಾಣುತ್ತದೆ. ಭಾರತಕ್ಕೆ ದಂಡೆತ್ತಿ ಬಂದಿದ್ದ ಅಲೆಕ್ಸಾಂಡರ್ ಹಲವಾರು ರಾಷ್ಟ್ರಗಳಲ್ಲಿ ವಿಖ್ಯಾತನಾದ ಈತನು "ದೇವ ಕುಮಾರ" ನೆಂದು ಗ್ರೀಸ್ ಮತ್ತು ಪರ್ಶಿಯಾಗಳಲ್ಲಿ ಪ್ರತೀತಿ ಇತ್ತು. ಪರ್ಶಿಯನ್ ಮತ್ತು ಅರೇಬಿಯನ್ ಜನ ಈತನನ್ನು 'ಇಸ್ಕಂದರ'ನೆಂದು ಕರೆದಿದ್ದು, ಭಾರತದಲ್ಲಿ 'ಸ್ಕಂದ'ನೆಂದು ಸಂಸ್ಕೃತ ರೂಪ ತಳೆಯಿತು. ಚಂದ್ರಗುಪ್ತ ಮೌರ್ಯ ಹುಡುಗನಾಗಿದ್ದಾಗ ಅಲೆಕ್ಸಾಂಡರ್‌ನನ್ನು ಕಂಡು ಅವನ ಬಗ್ಗೆ ಭಕ್ತಿ ಭಾವನೆ ತಳೆದಿದ್ದರಲ್ಲಿ ಆಶ್ಚರ್ಯವೇನಿಲ್ಲ. ಪತಂಜಲಿ 'ಶಿವಸ್ಕಂದೋ ವಿಶಾಖ ಇತಿ'.... ಮೌರ್ಯೆಶ್ವರ್ಹಿ ಕಣ್ಯಾರ್ಥಿ

ಭಿರರ್ಚಾ ಕಲ್ಪಿತಾ' ಎಂದು ಹೇಳುತ್ತಾನೆ. ಮೌರ್ಯರಿಗೂ ನವಿಲಿಗೂ (ಮೋರಿಯ) ಗೋತ್ರ ಸಂಬಂಧವಿದ್ದಿತು. ಹೀಗಾಗಿ ಅವರ ದೇವತೆ ಸ್ಕಂದ ಮಯೂರ ವಾಹನನಾದ.

**ಶಾತವಾಹನರು**

ದಕ್ಷಿಣ ಭಾರತವನ್ನಾಳಿದ ಶಾತವಾಹನರು ಸುಮಾರು ಕ್ರಿ.ಪೂ.೨೨೦ ರಿಂದ ಕ್ರಿ.ಶ.೨೩೦ ರವರೆಗೆ ರಾಜ್ಯವಾಳಿದ ಬಗ್ಗೆ ತಿಳಿದುಬರುತ್ತದೆ. ಅಶೋಕನ ಶಾಸನಗಳು ಶಾತವಾಹನರನ್ನು 'ಆಂಧ್ರಭೃತ್ಯರು' ಎಂದು ಉಲ್ಲೇಖಿಸಿವೆ. 'ಭೃತ್ಯ' ಎಂಬ ಪದಕ್ಕೆ ಸಾಮಾನ್ಯವಾಗಿ 'ಸೇವಕ' ಎಂಬ ಅರ್ಥವಿದ್ದರೂ ಇಲ್ಲಿ 'ಆಧೀನರು' ಎಂದು ಪರಿಗಣಿಸುವುದೆ ಸೂಕ್ತ. ಅಂದರೆ ಆಂಧ್ರವನ್ನಾಳಿದವರು ಅಥವಾ ಆಂಧ್ರ ರಾಜರುಗಳಿಗೆ ಕೆಲಕಾಲ ಸಾಮಂತರಾಗಿದ್ದರೆಂದು ತಿಳಿಸುತ್ತವೆ. ಇದರಿಂದ ವ್ಯಕ್ತವಾಗುವುದು ಏನೆಂದರೆ ಶಾತವಾಹನರು ಮೌರ್ಯರ ಅಧೀನ ಅರಸರಾಗಿದ್ದರೆಂದೂ ಮೌರ್ಯರ ಪತನಾನಂತರ ಸ್ವತಂತ್ರ ಅರಸರಾದರೆಂದೂ ತಿಳಿದುಬರುತ್ತದೆ. ಶಾತವಾಹನರ ಆಡಳಿತಕ್ಕೆ ಈ ಪ್ರದೇಶ ಸೇರಿದ್ದಿರಬಹುದು ಆದರೂ ಅವರು ಹಾಕಿಸಿರುವ ಶಾಸನಗಳು ಯಾವುವು ಇದುವರೆಗೆ ಈ ಭಾಗದಲ್ಲಿ ದೊರೆತಿಲ್ಲ.

ಮೌರ್ಯರ ನಂತರ ಅಧಿಕಾರಕ್ಕೆ ಬಂದ ಇವರು ಇಲ್ಲಿ ಕುಮಾರಸ್ವಾಮಿಗಾಗಿ ದೇವಾಲಯವನ್ನು ನಿರ್ಮಿಸಿರಬಹುದು. ಇವರ ಕಾಲದಲ್ಲಿ ಇದೊಂದು ಒಳನಾಡಿನ ಒಂದು ಮುಖ್ಯ ಕೇಂದ್ರವಾಗಿತ್ತು. ಕುಮಾರಸ್ವಾಮಿ ಬೆಟ್ಟ ಶಕ್ತಿ ಕೇಂದ್ರವಾಗಿತ್ತು. ಈಗಿರುವ ಪಾರ್ವತಿ ದೇವಾಲಯ ಶಾತವಾಹನರ ಕಾಲದಿಂದಲೇ ಅಭಿವೃದ್ಧಿ ಹೊಂದುತ್ತ ಬಂದಿತೆಂದು ವಿದ್ವಾಂಸರ ಅಭಿಪ್ರಾಯ.

ಕರ್ನಾಟಕದ ಬಳ್ಳಾರಿ ಪ್ರದೇಶವೇ ಶಾತವಾಹನರ ಮೂಲ ನಿವಾಸವೆಂದು ಅನೇಕ ಇತಿಹಾಸಕಾರರು ಭಾವಿಸಿದ್ದಾರೆ. ಆದರೆ ಕೆಲವು ಇತಿಹಾಸಕಾರರು ಕರ್ನಾಟಕ ಶಾತವಾಹನರ ಮೂಲ ನಿವಾಸವೆಂಬುದನ್ನು ಒಪ್ಪದಿದ್ದರೂ ಕರ್ನಾಟಕದಲ್ಲಿ ಶಾತವಾಹನರ ಆಳ್ವಿಕೆಯಿದ್ದಿತ್ತು ಎಂಬುದರಲ್ಲಿ ಮಾತ್ರ ಯಾವ ಸಂದೇಹವೂ ಇಲ್ಲ.

ಆಂಧ್ರ ಪ್ರದೇಶದ ಸ್ವಲ್ಪ ಭಾಗವು ಸೇರಿದಂತೆ ಬಳ್ಳಾರಿ ಪ್ರದೇಶವನ್ನು 'ಶಾತವಾಹನೀಹಾರ' ಮತ್ತು ಆ ಭಾಗದ ರಾಜ್ಯವನ್ನು 'ಶಾತವಾಹನೀರಾಷ್ಟ್ರ'ವೆಂದು ಕರೆಯಲಾಗಿತ್ತು. ಕರ್ನಾಟಕದ ಬಳ್ಳಾರಿ ಆಂಧ್ರಪ್ರದೇಶದ ಭಾಗವನ್ನು ಸ್ಪಷ್ಟವಾಗಿ 'ಶಾತವಾಹನೀಹಾರ ಮತ್ತು ರಾಷ್ಟ್ರವೆಂದು'

ಕರೆದಿರುವುದರಿಂದ ಈ ಪ್ರದೇಶದಿಂದಲೇ ರಾಜಕೀಯ ಚಟುವಟಿಕೆಗಳು ಆರಂಭವಾಗಿರಬಹುದು ಎಂಬ ಅನುಮಾನಕ್ಕೆ ಹೆಚ್ಚು ಬಲ ಇದೆ. ಈ ಪ್ರದೇಶದಿಂದ ಪಶ್ಚಿಮದ ಕಡೆಗೆ ವಿಸ್ತರಿಸಿದರೆಂದು ಹೇಳುವುದು ಸರಿ ಎಂದು ಕಾಣುತ್ತದೆ. ವಾಸಿಷ್ಠಪುತ್ರ ಪುಳಮಾವಿಯ ಕಾಲದ ಶಾಸನ ಬಳ್ಳಾರಿ ಜಿಲ್ಲೆಯ ಮ್ಯಾಕೆದೋಣಿಯಲ್ಲಿ ದೊರೆತಿದೆ. ಹಾಗೂ ಗೌತಮೀಪುತ್ರ ಶಾತಕರ್ಣಿ ಮತ್ತು ವಾಸಿಷ್ಠಪುತ್ರ ಪುಳಮಾವಿಯ ಶಾಸನಗಳು ಮತ್ತು ಶಾಸನ ರಹಿತ ದುಃಖಿತ ಅರಮನೆ ವಾಸಿಗಳಿಂದ ಸುತ್ತುವರೆಯಲ್ಪಟ್ಟ ಮರಣಶಯ್ಯೆಯಲ್ಲಿರುವ ಗೌತಮೀಪುತ್ರ ಶಾತಕರ್ಣಿ ಚಿತ್ರಫಲಕವು ಈ ನೆಲೆಯಲ್ಲಿ ದೊರಕಿರುವುದು ಅರ್ಥಗರ್ಭಿತ.

ಈ ಸ್ಥಳದ ದಕ್ಷಿಣಕ್ಕೆ ಹಿರೇಹಡಗಲಿಯಿದೆ. ಇಲ್ಲಿಯ ಶಾಸನವು 'ಶಾತವಾಹನಿಹಾರ' 'ಶಾತವಾಹನರಾಷ್ಟ್ರ' ಎಂದು ಉಲ್ಲೇಖಿಸಿರುವುದು ಈ ಸಂದರ್ಭದಲ್ಲಿ ಗಮನಾರ್ಹ. ಹಾಗೂ ಈ 'ಶಾತವಾಹನಿಹಾರ' ಮತ್ತು 'ಶಾತವಾಹನೀರಟ್ಟ' ಅಂದರೆ ಶಾತವಾಹನಿ ಪ್ರದೇಶ ಎಂಬ ಪದಗಳ ಅರ್ಥದ ಆಧಾರದ ಮೇಲೆ ಅವರು ಕನ್ನಡ ಪ್ರದೇಶದವರೆಂದು ಅದು ಬಳ್ಳಾರಿ ಪ್ರದೇಶವೆಂದು ಗುರುತಿಸುತ್ತಾರೆ. ಈ ಪದಗಳ ಮೇಲೆ ತಿಳಿಸಿದಂತೆ ಮ್ಯಾಕೆದೋಣಿ ಮತ್ತು ಹಿರೇಹಡಗಲಿ ಶಾಸನಗಳಲ್ಲಿ ಕಂಡುಬರುತ್ತವೆ. ಇವರ ಕಾಲಕ್ಕೆ ಸೇರಬಹುದಾದ ಸಂಡೂರು ತಾಲ್ಲೂಕಿನ ದೇವಗಿರಿ, ಚೋರನೂರು, ಅಗ್ರಹಾರ(ಗೆಣತಿಕಟ್ಟೆ) ಗ್ರಾಮಗಳಲ್ಲಿ ಇವರ ಕಾಲದ ಅವಶೇಷಗಳು ದೊರೆಯುತ್ತವೆ. ಇದರಿಂದಾಗಿ ಸಂಡೂರು ಪರಿಸರವೂ ಸಹ ಶಾತವಾಹನರ ಕಾಲದ ಪ್ರಮುಖ ಪಟ್ಟಣವಾಗಿತ್ತು ಎಂಬುದರಲ್ಲಿ ಸಂದೇಹವಿಲ್ಲ.

**ಕದಂಬರು**

ಕ್ರಿ.ಶ.೪ ರಿಂದ ೬.ನೆಯ ಶತಮಾನದವರೆಗೆ ಆಡಳಿತ ನಡೆಸಿದ ಬನವಾಸಿಯ ಕದಂಬರ ಅರಸು ಮನೆತನ ಈ ನಾಡಿಗೆ ಮಹತ್ವದ್ದು. ಬನವಾಸಿ ಕದಂಬರ ಕಾಲದಲ್ಲಿ ಸಂಡೂರು ಪ್ರದೇಶವು ಕದಂಬರ ಸಾಮಂತರಾದ ಉಚ್ಚಂಗಿದುರ್ಗದ (ಬಳ್ಳಾರಿ ಜಿಲ್ಲೆಯ ನೈಋತ್ಯ ಗಡಿ) ನೊಳಂಬರ ಆಡಳಿತಕ್ಕೊಳಪಟ್ಟ ಒಂದು ಪ್ರಮುಖ ಕೇಂದ್ರವಾಗಿತ್ತು. ಇದು ಕದಂಬರ ೧೨,೦೦೦ ಗ್ರಾಮಗಳಲ್ಲಿ ಒಂದು. ಕದಂಬರ ನಾಡಿನ ಪೂರ್ವದಿಕ್ಕಿನ ಈ ಭಾಗಕ್ಕೆ ಇದು ರಾಜಧಾನಿಯಾಗಿತ್ತು. ಇವರ ರಾಜ್ಯವು ಪಶ್ಚಿಮ ತೀರದಿಂದ ಬಳ್ಳಾರಿ ಪ್ರದೇಶದವರೆಗೂ ಹಬ್ಬಿತ್ತು. ರವಿವರ್ಮನ ಗುಡ್ನಾಪುರ ಶಾಸನವು ಅವನ ಆಳ್ವಿಕೆಯ ಕೆಲವು ವಿವರಗಳನ್ನು ತಿಳಿಸುತ್ತದೆ. ಇವನು ಬಳ್ಳಾರಿ ಜಿಲ್ಲೆಯಲ್ಲಿರುವ ಉಚ್ಚಂಗಿ(ಉತ್ತಂಗಿ)ಯನ್ನು ಮತ್ತೊಂದು ಉಪ-ರಾಜಧಾನಿಯನ್ನಾಗಿ

ಮಾಡಿದನು. ಹದಿನೆಂಟು ಮಾಂಡಲೀಕರ ಅಧಿಪತಿ ಗಂಗ, ಪಲ್ಲವ, ಕೊಂಗಳ್ವ, ಪೂನ್ನಾಟ, ಆಳುವ ರಾಜರಿಂದ ಕಪ್ಪಕಾಣಿಕೆಗಳನ್ನು ಪಡೆಯುತ್ತಿದ್ದವ ಎಂದೂ ಇವನು ವರ್ಣಿತನಾಗಿದ್ದಾನೆ. ಮಯೂರವರ್ಮ ತನ್ನ ಚಂದ್ರವಳ್ಳಿ ಶಾಸನದಲ್ಲಿ ಸತಹನಿ-ರಾಷ್ಟ್ರದಲ್ಲಿನ ಸೇಂದ್ರಕ ವಿಷಯದವರೆಗೂ ಆಳಿದನೆಂಬ ಉಲ್ಲೇಖವಿದೆ. ಇದಕ್ಕೆ ಸಾಕ್ಷಿಯಾಗಿ ಉಚ್ಚಂಗಿಯಲ್ಲಿರುವ ಬೆಟ್ಟದ ಕೋಟೆಯೇ ಸ್ಮಾರಕವಾಗಿದೆ. ಇದರ ಜೊತೆಗೆ ನಮಗೆ ದೊರಕುವ ವಿಷಯವೆಂದರೆ ಸಂಡೂರಿನ ಅದರಲ್ಲೂ ವಿಶೇಷವಾಗಿ ಪ್ರಸಿದ್ಧ ಕಾರ್ತಿಕೇಯ ದೇವಸ್ಥಾನವನ್ನು ಒಳಗೊಂಡ ಬಹುಭಾಗ ಕದಂಬರ ಕಾಲದಲ್ಲೂ ನಂತರ ಕನ್ನಡ ನಾಡಿನ ಅವರ ಯಶಸ್ವಿ ಉತ್ತರಾಧಿಕಾರಿಗಳಾದ ಚಾಲುಕ್ಯರ ಕಾಲದಲ್ಲೂ ಮಹತ್ವ ಪಡೆದಿತ್ತು. ಕುಮಾರಸ್ವಾಮಿಯ ಈ ಬೆಟ್ಟ ಅಂದಿಗಾಗಲೇ ಸ್ವಾಮಿಮಲೈ, ಸಾವಿಮಲೈ ಎಂದೆನಿಸಿಕೊಂಡಿತ್ತು. (ಸು.೭ನೇ ಶತಮಾನಕ್ಕೆ) ಹಾಗೂ ಸಂಡೂರು ಪ್ರದೇಶದಲ್ಲಿ ಇವರ ಕಾಲದಲ್ಲಿ ನಿರ್ಮಿತವಾದ ಕೆಲವು ದೇವಾಲಯದ ಅವಶೇಷಗಳಿವೆ.

ಅಲ್ಲದೆ ಕೆಲವು ಮೂರ್ತಿಶಿಲ್ಪಗಳೂ ಸಿಕ್ಕಿವೆ. ಕದಂಬರು ಸಪ್ತಮಾತೃಕೆಯರ ಮತ್ತು ಕುಮಾರಸ್ವಾಮಿಯ ಆರಾಧಕರಾಗಿದ್ದರು. ತಾಳಗುಂದ ಸ್ಥಂಭಲೇಖದ ಉಲ್ಲೇಖದಂತೆ ದೇವಸಾನಿಯಾದ ಸಾಕ್ಷಾತ್ ಷಣ್ಮುಖನೇ ಮಯೂರಶರ್ಮನಿಗೆ ಪಟ್ಟಾಭಿಷೇಕ ಮಾಡಿದನೆಂದು ತಿಳಿದುಬರುವುದು. ಎಂದರೆ ಷಣ್ಮುಖನ ವರ ಪ್ರಸಾದದಿಂದ ಮಯೂರಶರ್ಮನಿಗೆ ಜಯವೂ ರಾಜ್ಯ ಲಾಭವೂ ದೊರಕಿರಬಹುದೆಂದು ಊಹಿಸಬಹುದಾಗಿದೆ. ಕದಂಬ ಸಾಮ್ರಾಟರು ಈ ಮಹಾಸೇನನ ಪರಮಭಕ್ತರಾಗಿದ್ದರೆಂದು ಅನೇಕ ಶಾಸನಗಳಲ್ಲಿ ಹೇಳಲ್ಪಟ್ಟಿರುವುದು. ದೇವಸೇನಾನಿಗೆ ಷಣ್ಮುಖ, ಕಾರ್ತಿಕೇಯ, ಸುಬ್ರಹ್ಮಣ್ಯ, ಕುಮಾರ, ಷಡಾನನ, ಸ್ವಾಮಿಮಹಾಸೇನ ಮೊದಲಾದ ಹೆಸರುಗಳಿರುವವು.

ಕದಂಬ ಅರಸರ ವಂಶ ಪಾರಂಪರ್ಯವಾಗಿ ಬಂದ ಮನೆಯ ದೇವರಾದ ಕುಮಾರಸ್ವಾಮಿಯ ವರ ಪ್ರಸಾದದಿಂದ ಧ್ರುವದೇವಿಯ ಗರ್ಭದಲ್ಲಿ ಜನಿಸಿರುವ ರಾಜಕುಮಾರನಿಗೆ ಆ ದೇವರ ಹೆಸರಿನಲ್ಲಿ ಕುಮಾರಗುಪ್ತನೆಂದೆ ನಾಮಕರಣ ಮಾಡಿದಂತೆ ವ್ಯಕ್ತವಾಗುವುದು. ಸಂಡೂರು ಪ್ರದೇಶದಲ್ಲಿಯ ಕುಮಾರಸ್ವಾಮಿ ದೇವಾಲಯವು ಕದಂಬರ ಕಾಲದಲ್ಲೇ ಪ್ರಾಮುಖ್ಯತೆ ಪಡೆದಿತ್ತು. ಬಾದಾಮಿ ಚಾಲುಕ್ಯರ ಪ್ರಾಬಲ್ಯದಿಂದಾಗಿ ಕದಂಬರು ಅವರ ಸಾಮಂತರಾಗಿ ಮುಂದುವರಿಯುತ್ತಾರೆ.

**ಗಂಗರು**

ಕನ್ನಡ ನಾಡಿನ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಗಂಗರ ಆಳ್ವಿಕೆಗೂ ಈ ಪ್ರದೇಶ ಒಳಪಟ್ಟಿತ್ತು. ಈ ಸಂಡೂರಿಗೆ ಸಂಬಂಧಿಸಿದಂತೆ ಹೇಳುವುದಾದರೆ ಗಂಗ ದೊರೆ ಇಮ್ಮಡಿ ಮಾರಸಿಂಹ (೯೬೩-೯೭೪) ನೊಳಂಬ ರಾಜ್ಯವನ್ನು ವಶಪಡಿಸಿಕೊಂಡು ರಾಜ್ಯ ವಿಸ್ತರಿಸುತ್ತ ಬಂದನು. ಈತನ ಸೇನಾಧಿಪತಿ ಚಾವುಂಡರಾಯ ಉಚ್ಚಂಗಿದುರ್ಗವನ್ನು ವಶಪಡಿಸಿಕೊಂಡು ಪುನಃ ರಾಷ್ಟ್ರಕೂಟ ದೊರೆ "ಖೊಟ್ಟಿಗ"ನಿಗೆ ರಾಜಧಾನಿ ಮಾನ್ಯಖೇಟ (ಇಂದಿನ ಮಳಖೇಡ, ಗುಲಬರ್ಗಾ ಜಿಲ್ಲೆಯಲ್ಲಿದೆ ಇದು ರಾಷ್ಟ್ರಕೂಟರ ರಾಜಧಾನಿಯಾಗಿತ್ತು)ವನ್ನು ಕೊಡಿಸಿ ಅದರಲ್ಲಿ ಸೊಂಡೂರು ಮತ್ತು ಮಂಚಾಲೆ (ಆದವಾನಿ ತಾಲ್ಲೂಕಿನಲ್ಲಿರುವ ಪ್ರಸಿದ್ಧ ಮಂತ್ರಾಲಯ)ಗಳನ್ನು ಸೇರಿಸಿದ ಆ ಕಾಲಕ್ಕಾಗಲೇ ಈ ಎರಡೂ ಕ್ಷೇತ್ರಗಳು ನಾಡಿನ ನಾನಾ ಭಾಗಗಳಿಂದಲೂ ಪ್ರವಾಸಿಗರನ್ನು ಆಕರ್ಷಿಸುವ ತೀರ್ಥಕ್ಷೇತ್ರಗಳು ಎನಿಸಿಕೊಂಡಿದ್ದವು. (ಸು.೧೦.ನೇ. ಶತಮಾನದಲ್ಲಿ)

**ಬಾದಾಮಿ ಚಾಲುಕ್ಯರು**

ಕುಮಾರಸ್ವಾಮಿ ದೇವಾಲಯವಿರುವ ಸಂಡೂರಿನ ಪ್ರದೇಶವು ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ಪ್ರಮುಖವಾಗಿತ್ತು. ಬಾದಾಮಿಚಾಲುಕ್ಯರ ರಾಜಾಡಳಿತವೇ ಕರ್ನಾಟಕದ ರಾಜಕೀಯ ಇತಿಹಾಸದ ಆರಂಭವೆಂದರೆ ಅಸಂಗತವಾಗದು. ಬನವಾಸಿ ಕದಂಬರಿಂದ ಬಾದಾಮಿಯನ್ನು ವಶಪಡಿಸಿಕೊಂಡು ಅದನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ರಾಜ ಶಾಸನಗಳಲ್ಲಿ ಕನ್ನಡವನ್ನು ಬಳಸಿ ಜನರ ಭಾಷೆಗೆ ಆಡಳಿತದಲ್ಲಿ ಸ್ಥಾನ ಕಲ್ಪಿಸಿದ ಮೊದಲಿಗರು ಬಾದಾಮಿಚಾಲುಕ್ಯರು.

ಬಾದಾಮಿ ಚಾಲುಕ್ಯರ ಕಾಲದಲ್ಲಿ ಕುಮಾರಸ್ವಾಮಿಯ ಆರಾಧನೆ ವಿಶೇಷವಾದ ಮಹತ್ವ ಪಡೆದುಕೊಂಡಿತು ಎಂಬುದಕ್ಕೆ ಸಂಡೂರಿನ ಕುಮಾರಸ್ವಾಮಿ ದೇವಾಲಯದ ಸಮುಚ್ಚಯದ ಪಾರ್ವತಿ ದೇವಾಲಯದ ಶಾಸನ ಮತ್ತು ಲಿಪಿ ಹಾಗೂ ಶಿಲ್ಪಗಳ ಆಧಾರದ ಮೇಲೆ ಹೇಳಬಹುದಾಗಿದೆ. ಕುಮಾರಸ್ವಾಮಿಯು ಚಾಲುಕ್ಯರ ಯುದ್ಧ ದೇವತೆಯಾಗಿದ್ದ. ಇದು ಕದಂಬರ ಕಾಲದಲ್ಲೇ ಪ್ರಖ್ಯಾತಿ ಪಡೆದಿತ್ತು. ಇವರ ಕಾಲದ ಕೊನೆಯ ಅವಧಿಯಲ್ಲಿ ಕಟ್ಟಿರಬಹುದಾದ ಪಾರ್ವತಿ ದೇವಸ್ಥಾನ ಕುಮಾರಸ್ವಾಮಿ ಬೆಟ್ಟದ ಕುಮಾರಸ್ವಾಮಿ ದೇವಾಲಯದ ಪಕ್ಕದಲ್ಲಿದೆ. ಇವರ ಕಾಲದಲ್ಲಿ ಕಟ್ಟಲ್ಪಟ್ಟ ದುರ್ಗಾ ದೇವಾಲಯವೊಂದು ಕುಮಾರಸ್ವಾಮಿ ಬೆಟ್ಟದಲ್ಲಿದೆ.

ಕುಮಾರಸ್ವಾಮಿ ಬೆಟ್ಟದ ಪಾರ್ವತಿ ದೇವಾಲಯವು ಇವರ ಶೈಲಿಯ ವಾಸ್ತುಶಿಲ್ಪ ವಿಮಾನ ಶೈಲಿಯಲ್ಲಿದೆ. ದ್ವಾರ ಬಾಗಿಲು ಇಕ್ಕೆಲಗಳಲ್ಲಿ ಶಂಖ ಲಿಪಿಯ ಶಿಲಾ ಶಾಸನಗಳಿವೆ. ಬಳ್ಳಾರಿ ಜಿಲ್ಲೆಯಲ್ಲಿಯೇ ಪ್ರಾಚೀನವಾದ ಸುಂದರ ವಾಸ್ತುಶಿಲ್ಪವುಳ್ಳ ದೇವಾಲಯ ಇದಾಗಿದೆ. ಸುತ್ತಮುತ್ತಲಿನ ಸೀಮೆಗಳು ನೊಳಂಬವಾಡಿ ಭಾಗಗಳಾಗಿ ಬಾದಾಮಿ ಚಾಲುಕ್ಯರ ಆಡಳಿತಕ್ಕೊಳಪಟ್ಟಿದ್ದವು. ಇವರ ಕಾಲದ ಬಾದಾಮಿಯ ಮೊದಲನೆಯ ಗುಹೆಯ ಪ್ರವೇಶದಲ್ಲಿ ಕುಮಾರಸ್ವಾಮಿಯ ಉಬ್ಬುಶಿಲ್ಪ ಮತ್ತು ಐಹೊಳೆಯ ಹುಚ್ಚಮಲ್ಲಿ ದೇವಾಲಯದ ಮುಖಮಂಟಪದ ಭುವನೇಶ್ವರಿಯ ಭಾಗದಲ್ಲಿ ನವಿಲು ವಾಹನನಾದ ಕುಮಾರಸ್ವಾಮಿಯು ಶತ್ರುಗಳನ್ನು ಸಂಹರಿಸುತ್ತಿರುವ ಶಿಲ್ಪವಿದೆ.

ಅಲ್ಲದೆ ಅವರು ಸಂಡೂರು ಕುಮಾರಸ್ವಾಮಿ ಕ್ಷೇತ್ರಕ್ಕೆ ಹೆಚ್ಚು ಗಮನ ಹರಿಸಿದರು. ಹಾಗೂ ಕರ್ನಾಟಕದ ದೇವಾಲಯಗಳ ಹಲವು ಬಗೆಯ ಪ್ರಯೋಗಗಳು ಇವರ ಕಾಲದಲ್ಲಿ ನಡೆದವು. ಅಲ್ಲದೆ ಮುಂದಿನ ವಾಸ್ತು ಶೈಲಿಗೆ ಒಂದು ಮಾದರಿಯನ್ನು ಹಾಕಿಕೊಟ್ಟರು. ಇವರ ಕಾಲದ ಧಾರ್ಮಿಕ ವಾಸ್ತುಶಿಲ್ಪಗಳಲ್ಲಿ ಗುಹೆಗಳು ಮತ್ತು ಕಟ್ಟಡಗಳೆಂದು ಎರಡು ಪ್ರಕಾರಗಳಾಗಿ ವಿಂಗಡಿಸಬಹುದು. ಇವು ಹೆಚ್ಚಾಗಿ ಬಾದಾಮಿ ಮತ್ತು ಐಹೊಳೆ ಹಾಗೂ ಪಟ್ಟದಕಲ್ಲುಗಳಲ್ಲಿ ಕೇಂದ್ರಿಕೃತವಾಗಿವೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಲಕ್ಷಣಗಳಲ್ಲಿ ಚೌಕಾಕಾರದ ಗರ್ಭಗೃಹ ಮತ್ತು ಚಿಕ್ಕ ಮುಖಮಂಟಪ ಮತ್ತು ಅದಕ್ಕೆ ಪ್ರದಕ್ಷಿಣಾ ಪಥವನ್ನು ಒಳಗೊಂಡಿರುವಂಥವು. ಗಜಪುಷ್ಠಾಕಾರ ಹಾಗೂ ತ್ರಿಕೂಟಾಚಲದ ತಲವಿನ್ಯಾಸದಲ್ಲಿರುವ ಇನ್ನೊಂದು ಪ್ರಕಾರದವು.

ಚಾಲುಕ್ಯರು ಈ ಪ್ರದೇಶದ ಮೇಲೆ ಅಧಿಕಾರ ಸ್ಥಾಪಿಸಿದ್ದರೂ ಅವರ ಕಾಲದ ವಾಸ್ತುಶಿಲ್ಪ ಇಲ್ಲಿ ವಿರಳ. ವಿನಯಾದಿತ್ಯನ ಕ್ರಿ.ಶ.೬೮೯ರ ತಾಮ್ರಪಟದಲ್ಲಿ "ಪಂಪಾ ತಟ ಮಧಿವಸಾತಿ ವಿಜಯಸ್ಕಂದಾವರ" ಎಂದಿದೆ. ಇದರಿಂದ ವಿಜಯ ಬೀಡಾರವನ್ನು ಪಂಪಾನದಿಯ ದಡದ ಮೇಲೆ ಬಿಟ್ಟಿದ್ದಾಗಿ ತಿಳಿಯುತ್ತದೆ. ಕುರುಗೋಡಿನ ಶಾಸನವೊಂದು ಸತ್ಯಾಶ್ರಯನನ್ನು ಹೆಸರಿಸುತ್ತದೆ. ಹಾಗೂ ಉತ್ತಂಗಿಯ ವಿಷ್ಣುಶಿಲ್ಪ, ಕುಮಾರಸ್ವಾಮಿ ಬೆಟ್ಟದ ಪಾರ್ವತಿ ದೇವಾಲಯಗಳು ಇಲ್ಲಿ ಕಂಡುಬರುವ ಇವರ ಕಾಲದ ಗುರುತುಗಳಾಗಿವೆ.

## ರಾಷ್ಟ್ರಕೂಟರು

ರಾಷ್ಟ್ರಕೂಟರು ಈ ಪ್ರದೇಶದ ಅಧಿಕಾರವನ್ನು ಪಡೆದ ಮೇಲೆ ಕುಮಾರಸ್ವಾಮಿ ದೇವಾಲಯದ ಅಭಿವೃದ್ಧಿ ಗಮನಾರ್ಹವಾಗಿ ಬೆಳವಣಿಗೆಯಾಯಿತು. ಅವರು ಪಾರ್ವತಿ ದೇವಾಲಯ ಮತ್ತು ಕುಮಾರಸ್ವಾಮಿ ದೇವಾಲಯಗಳ ನಿರ್ವಹಣೆಗಾಗಿ ಅನೇಕ ರೀತಿಯ ದಾನಗಳನ್ನು ನೀಡಿರುವರು. ಪಾರ್ವತಿ ದೇವಾಲಯದಲ್ಲಿರುವ ಇಮ್ಮಡಿ ಬಲ್ಲಾಳನ ಅವಧಿಯ ಕ್ರಿ.ಶ.೧೨೦೬ರ ಶಾಸನದಲ್ಲಿ ಅರಸನ ಆಜ್ಞೆಯಂತೆ ರಾಷ್ಟ್ರಕೂಟರ ಅರಸನಾದ ಮೂರನೆ ಕೃಷ್ಣನ ಅವಧಿಯಲ್ಲಿ ನೀಡಲಾಗಿದ್ದ ದಾನವು ನಿಂತು ಹೋಗಿದ್ದರಿಂದ ಅದನ್ನು ಬಲ್ಲಾಳನ ಮಂತ್ರಿ ಮಹಾದೇವ ದಂಡನಾಯಕನು ದೇವಾಲಯದ ಸ್ಥಾನಿಕ ವಿಷ್ಣುಕರ ಬ್ರಹ್ಮಚಾರಿಗೆ ದತ್ತಿಯನ್ನು ನವೀಕರಿಸುತ್ತಾನೆ.

ಸಂಡೂರಿನ ಕಾರ್ತಿಕೇಯಸ್ವಾಮಿ ದೇವಾಲಯ ಮತ್ತು ಮಂಚಾಳೆಯ ಯಲ್ಲಮ್ಮನ ದೇಗುಲ ರಾಷ್ಟ್ರಕೂಟರ ೨ನೇ ಕೃಷ್ಣನ ಬೇಡಿಕೆಯ ಮೇರೆಗೆ ಅವನ ಸಾಮಂತ ಅರಸನನ್ನು ಕ್ರಿ.ಶ.೮೯೩ರಲ್ಲಿ ದತ್ತಿ ಕೊಟ್ಟಿದ್ದು ಸಂಡೂರಿನ ಕುಮಾರಸ್ವಾಮಿ ಬೆಟ್ಟದ ಪಾರ್ವತಿದೇವಿ ದೇವಾಲಯದ ಶಾಸನದಿಂದ ಗೊತ್ತಾಗುವುದು. ಆಗ ಮಂಚಾಳೆ ಯಲ್ಲಮ್ಮ ದೇವತೆ ಸಿಂಧವಾಡಿ ಸಾವಿರಕ್ಕೆ ಒಳಪಟ್ಟಿತ್ತು. ರಾಷ್ಟ್ರಕೂಟರ ಕೃಷ್ಣನು ಕುಮಾರಸ್ವಾಮಿ ದೇವನಿಗೆ ಕೆರೆಯಪಳ್ಳಿಯನ್ನು ಸೇವೆಗೆ ದತ್ತಿಕೊಟ್ಟನು. ಆಗ ಅದರ ಹೆಸರು 'ತಟಾಕ' ಎಂದಿದೆ. ಬಹುಶಃ ಈಗ ಅದು ತಾರಾನಗರ ಆಗಿರಬೇಕು.

ಈ ರಾಷ್ಟ್ರಕೂಟರ ಶಾಸನಗಳು ಸಂಡೂರಿನ ನೆರೆಯ ಪ್ರದೇಶಗಳಾದ ಕೊಳಗಲ್ಲು, ಕುಡತಿನಿಗಳಲ್ಲಿ ಕಂಡುಬರುತ್ತವೆ. ರಾಷ್ಟ್ರಕೂಟರ ಅರಸ ೨ನೇ ಕೃಷ್ಣನ ಹಾಗೂ ಕೊಟ್ಟಿಗನ ಕಾಲದ ಕುಡತಿನಿ ಮತ್ತು ಕೊಳಗಲ್ಲಿನ ಶಾಸನಗಳಲ್ಲಿ "ಕೊಳಗಲ್ಲಿನ ಪ್ರಭುಗದಾಧರನು ಕಾರ್ತಿಕೇಯ ತಪೋವನದ ಅಧಿಕಾರಿಯಾಗಿದ್ದನು. ಆತನು ಕೊಳಗಲ್ಲು ಮತ್ತು ಕುಡತಿನಿಗಳಲ್ಲಿ ಸ್ಕಂದದೇವನ ಮೂರ್ತಿಗಳನ್ನು ಪ್ರತಿಷ್ಠಾಪನೆ ಮಾಡುತ್ತಾನೆ. ಈ ಆಧಾರಗಳಿಂದ ರಾಷ್ಟ್ರಕೂಟರು ಈ ಪ್ರದೇಶವನ್ನು ಆಳ್ವಿಕೆ ನಡೆಸಿದ್ದಲ್ಲದೆ ಧರ್ಮ, ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ಕೊಟ್ಟರೆಂದು ಹೇಳಬಹುದಾಗಿದೆ.

**ನೊಳಂಬರು**

ನೊಳಂಬರು ಪಾರಂಪರಿಕವಾಗಿ ಬಂದ ನೊಳಂಬವಾಡಿ ೩೨೦೦೦ದ ಅರಸರು. ಮೊದಲಿಗೆ ನೊಳಂಬರು ಸಾಮಂತರಾಗಿ ಅಥವಾ ಪಲ್ಲವರ ಶಾಖೆಯಾಗಿ ಎಂಟನೆಯ ಶತಮಾನದ ಮಧ್ಯಭಾಗದಲ್ಲಿ ಪ್ರಾಂತ್ಯವೊಂದನ್ನು ಈ ಭಾಗದಲ್ಲಿ ಸ್ಥಾಪಿಸಿ ಆಳಲು ಪ್ರಾರಂಭಿಸಿದರು. ಆ ರಾಜ್ಯವೆ ನೊಳಂಬವಾಡಿ ೩೨,೦೦೦ ಸಂಡೂರು ನೊಳಂಬವಾಡಿ ೩೨,೦೦೦ದಲ್ಲಿ ಸೇರಲಾಗಿತ್ತು. ಇವರ ಆಳ್ವಿಕೆ ಮೂರು ಶತಮಾನಗಳ ಕಾಲ ನಿರಂತರವಾಗಿ ಮುಂದುವರೆಯಿತು. ಬಳ್ಳಾರಿ ಪ್ರದೇಶವು ನೊಳಂಬವಾಡಿಯ ಒಂದು ಭಾಗವಾಗಿತ್ತು. ಇವರು ಆರಂಭದಲ್ಲಿ ಹೇಮಾವತಿ(ಹೆಂಜೇರು)ಯನ್ನು ರಾಜಧಾನಿಯಾಗಿ ಹೊಂದಿದ್ದರೂ ಮುಂದೆ ಕಂಪಿಲೆ (ಹೊಸಪೇಟೆತಾ)ಯನ್ನು ರಾಜಧಾನಿಯನ್ನಾಗಿ ಆರಿಸಿದರು. ಒಟ್ಟಿನಲ್ಲಿ ಉಚ್ಚಂಗಿ(ಹರಪನಹಳ್ಳಿತಾ) ಹೆಂಜೇರು ಅಥವಾ ಹೇಮಾವತಿ(ಮಡಕಶಿರಾ.ತಾ) ಮತ್ತು ಕಂಪಿಲಿ(ಹೊಸಪೇಟೆ. ತಾ) ವಿವಿಧ ಕಾಲದಲ್ಲಿ ಇವರ ರಾಜಧಾನಿಗಳಾಗಿದ್ದವು.

**ಸಿಂಧರು**

ಸಿರುಗುಪ್ಪ, ಹೊಸಪೇಟೆ, ಬಳ್ಳಾರಿ, ಸಂಡೂರು ತಾಲ್ಲೂಕುಗಳ ಹಾಗೂ ಆಂಧ್ರಪ್ರದೇಶದ ಅನಂತಪುರ ಮತ್ತು ಕರ್ನೂಲು ಜಿಲ್ಲೆಗಳ ಕೆಲವು ಗ್ರಾಮಗಳನ್ನು ಒಳಗೊಂಡ ಪ್ರದೇಶವನ್ನು ಶಾಸನಗಳಲ್ಲಿ 'ಸಿಂದವಾಡಿ ನಾಡು' ಎಂದು ಕರೆಯಲಾಗಿದೆ. ಈ ಪ್ರದೇಶವನ್ನು ಬಹು ಹಿಂದಿನಿಂದ ಸಿಂದವಂಶದ ಅರಸರು ಆಳುತ್ತ ಬಂದಿದ್ದರಿಂದ ಇದಕ್ಕೆ ಈ ಹೆಸರು ಪ್ರಾಪ್ತವಾಗಿದೆ. ೨ನೇ ವೀರಬಲ್ಲಾಳ ಕ್ರಿ.ಶ.೧೨೦೬ರಲ್ಲಿ ಹಂಪೆಯ ಮಧುವನದಲ್ಲಿದ್ದು ಆಳುತ್ತಿದ್ದುದನ್ನು ಸಂಡೂರಿನ ಶಾಸನ ತಿಳಿಸುತ್ತದೆ.

ಮುಂದೆ ಈ ಸಿಂದ ಮನೆತನದವರು ಏನಾದರೆಂಬುದು ತಿಳಿದುಬರುವುದಿಲ್ಲ. ಹಾಗೂ ಅಕಾಲವರ್ಷ ಶುಭತುಂಗ ಭಟಾರ (ಕೃಷ್ಣ ೩೩) ಆಳುತ್ತಿದ್ದುದನ್ನು ಬಳ್ಳಾರಿಗೆ ಸಮೀಪವಿರುವ ಮಂಚಳಾ ಗ್ರಾಮದ ಶಾಸನ ಹೇಳುತ್ತದೆ. ಈತನ ಸಾಮಂತ 'ಶ್ರೀಮತು ಕಣ್ಣಂ' ಸಿಂದವಾಡಿ ಸಾವಿರ ವಿಭಾಗವನ್ನು ಆಳುತ್ತಿರುವಾಗ ದಾನಕೊಟ್ಟ ಅಸ್ಪಷ್ಟ ಮಾಹಿತಿ ಇದೆ. (ಈ೨ನೇ ಕೃಷ್ಣನು ಸಂಡೂರಿನ ಸಮೀಪವಿರುವ ಕುಮಾರಸ್ವಾಮಿ ದೇವರಿಗೆ ದತ್ತಿ ಬಿಟ್ಟುದನ್ನು ಸಂಡೂರಿನ ಶಾಸನ ತಿಳಿಸುತ್ತದೆ. ೨ನೇ ಕೃಷ್ಣನ ಕಾಲಕ್ಕಾಗಲೇ ಸಂಡೂರಿನ ಷಣ್ಮುಖಸ್ವಾಮಿ ದೇವಾಲಯ ಅತ್ಯಂತ

ಪ್ರಸಿದ್ಧಿ ಪಡೆದಿತ್ತು. ಹೀಗಾಗಿ ಕೃಷ್ಣನು ಭಕ್ತಿ ಪೂರ್ವಕವಾಗಿ ದೇವರ ನೈವೇದ್ಯಕ್ಕೆ ಪ್ರೀತ ತಟಾಕ ಅಂದರೆ ಕೆರೆಯಪಳ್ಳಿ ಈಗಿನ ಕೆರ್‍ನಳ್ಳಿ ಗ್ರಾಮವನ್ನು ದಾನ ಬಿಡುತ್ತಾನೆ.

**ಕಲ್ಯಾಣ ಚಾಲುಕ್ಯರು**

ರಾಷ್ಟ್ರಕೂಟರ ನಂತರ ಅಧಿಕಾರಕ್ಕೆ ಬಂದ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಈ ಪ್ರದೇಶ ಸಂಪೂರ್ಣವಾಗಿ ಸೇರಿತ್ತು. ಇವರ ಸಾಮಂತರಾದ ಪಾಂಡ್ಯರು ಮಹಾಮಂಡಳೇಶ್ವರರಾಗಿ ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗಿದುರ್ಗದಿಂದ ನೊಳಂಬವಾಡಿ ೩೨,೦೦೦ವನ್ನು ಆಳಿದರು. ಸಂಡೂರು ನೊಳಂಬವಾಡಿಯಲ್ಲಿ ಸೇರಲಾಗಿತ್ತು. ತುಂಗಭದ್ರ ನದಿಯ ಉತ್ತರಕ್ಕೆ ಕುರುಗೋಡು ಸಿಂಧರು ಆಡಳಿತ ಮಾಡುತ್ತಿದ್ದರು. ಕಲ್ಯಾಣ ಚಾಲುಕ್ಯರು ಕುಮಾರಸ್ವಾಮಿಯ ಆರಾಧನೆಯನ್ನು ಮುಂದುವರಿಸಿಕೊಂಡು ಬಂದರು. ಇವರ ಕಾಲದಲ್ಲಿ ಕುಡತಿನಿಯ ಕುಮಾರಸ್ವಾಮಿ ಸಂಡೂರಿನ ಕುಮಾರಸ್ವಾಮಿ ದೇವಾಲಯಗಳನ್ನು ಪುನಃ ನಿರ್ಮಾಣ ಮಾಡಲಾಯಿತು.

ಕ್ರಿ.ಶ.೧೧೪೯ರ ಮುದನೂರು (ಸುರಪುರ ತಾ. ಗುಲ್ಬರ್ಗ ಜಿ.) ಗ್ರಾಮದ ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ಅರಸ ೬ನೇ ವಿಕ್ರಮಾದಿತ್ಯ ಮುದನೂರು ಊರೊಡೆಯ ಪ್ರಮುಖವಾಗಿ ಐನೂರು ಮಹಾಜನರು ಕುಮಾರಸ್ವಾಮಿ ದಂಡನಾಯಕ ಪ್ರತಿಷ್ಠಾಪಿಸಿದ ಕುಮಾರಸ್ವಾಮಿ ದೇವರಿಗೆ ಅಂಗ ಭೋಗ, ರಂಗಭೋಗ, ನೈವೇದ್ಯ, ನಂದಾದೇವಿಗೆ ಹಾಗೂ ಜೀರ್ಣೋದ್ಧಾರ ಕಾರ್ಯಗಳು ನಿರಂತರವಾಗಿ ನಡೆಯಲು ದಾನಬಿಟ್ಟ ಉಲ್ಲೇಖವಿದೆ. ಈ ಗ್ರಾಮದ (ಕ್ರಿ.ಶ.೧೯೦೮) ಶಾಸನದಲ್ಲಿ ಕಲ್ಯಾಣ ಚಾಲುಕ್ಯರ ಅರಸ ತ್ರಿಭುವನಮಲ್ಲದೇವರ ಆಳ್ವಿಕೆಯ ಕಾಲದಲ್ಲಿ ಲೋಕ್ಕಿಪೊನ್ನದ ಬದಲಾಗಿ ಅದರ ಸಮತೂಕದ ನವಿಲಚ್ಚಿನ ಪೊನ್ನವೆಂಬ ಬಂಗಾರದ ನಾಣ್ಯಗಳನ್ನು ಅಚ್ಚು ಹಾಕಲು ಪ್ರಾರಂಭಿಸಿದರು. ಮತ್ತು ಶ್ರೀಸ್ವಾಮಿಗೆ ವರ್ಷಕ್ಕೆ ೧೨ ಪೊನ್ನುಗಳನ್ನು ಕೊಡುತ್ತಾರೆ. ಕುರುಗೋಡು ಮತ್ತು ಕುಡುತಿನಿ ಗ್ರಾಮಗಳಲ್ಲಿ ನವಿಲಪೊನ್ನ ಎಂಬ ನಾಣ್ಯ ಹಾಗೂ ನವಿಲುಕೋಲು ಎಂಬ ಅಳತೆ ಬಳಕೆಯಲ್ಲಿದ್ದವು.

ಚಾಲುಕ್ಯರ ಕಾಲದಲ್ಲಿ ಕೆಲವು ಶೈವ ದೇವಾಲಯಗಳಲ್ಲಿ ಕುಮಾರಸ್ವಾಮಿಯ ಮೂರ್ತಿಶಿಲ್ಪಗಳು ಕಂಡುಬರುತ್ತವೆ. ಈ ಅವಧಿಯಲ್ಲಿ ಕುಮಾರಸ್ವಾಮಿಯ ಆರಾಧನೆ ಸಾಕಷ್ಟು ಪ್ರಸಿದ್ಧಿಯನ್ನು ಹೊಂದಿತ್ತು. ಸಂಡೂರು ಮತ್ತು ಕುಡತಿನಿಗಳಲ್ಲಿಯ ಕುಮಾರಸ್ವಾಮಿಯ ಕ್ಷೇತ್ರಗಳು ಪ್ರಮುಖ ಯಾತ್ರಾ ಸ್ಥಳಗಳಾಗಿದ್ದವು. ಇವರ ಕಾಲದಲ್ಲಿ ಕುಮಾರಸ್ವಾಮಿ ದೇವಾಲಯಗಳನ್ನು ವೇಸರ ಶೈಲಿಯಲ್ಲಿ ಕಟ್ಟಲಾಗಿದೆ. ಕುಮಾರಸ್ವಾಮಿ ದೇವಾಲಯ ಕಲ್ಯಾಣ ಚಾಲುಕ್ಯರ ಶೈಲಿಯ

೧೧ನೇ ಶತಮಾನದ ಶೈಲಿಯಲ್ಲಿ ಕಟ್ಟಲಾಗಿದೆ. ಇದರಿಂದ ಇವರ ಕಾಲದಲ್ಲಿ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಅಲ್ಲದೆ ಕುಮಾರಸ್ವಾಮಿ ಮೂರ್ತಿಶಿಲ್ಪ ಸಹ ಕಲ್ಯಾಣ ಚಾಲುಕ್ಯರ ಕಾಲದ ಶೈಲಿಯಲ್ಲಿದೆ. ಇದರಿಂದ ಈ ಪ್ರದೇಶ ಕಲ್ಯಾಣ ಚಾಲುಕ್ಯರ ಆಡಳಿತಕ್ಕೆ ಸೇರಿದ್ದು, ಇಲ್ಲಿನ ಕಲೆ, ಸಾಹಿತ್ಯ, ಧರ್ಮ, ಸಾಂಸ್ಕೃತಿಕ ಬೆಳವಣಿಗೆಗೆ ಕಲ್ಯಾಣ ಚಾಲುಕ್ಯರು ಪ್ರೋತ್ಸಾಹ ನೀಡಿದ್ದಾರೆಂದು ಹೇಳಬಹುದು.

ಹಾಗೂ ಕಲ್ಯಾಣ ಚಾಲುಕ್ಯರ ಅರಸ ಜಗದೇಕಮಲ್ಲ ಜಯಸಿಂಹ ಹಲವಾರು ಶಾಸನಗಳು ಬಳ್ಳಾರಿ ಜಿಲ್ಲೆಯಲ್ಲಿ ದೊರೆತಿದ್ದು, ಅವುಗಳಲ್ಲಿ ಒಂದಾದ ಸಂಡೂರು ತಾಲ್ಲೂಕಿನ ಚೋರುನೂರು ಬಗ್ಗೆ ಉಲ್ಲೇಖವಿದೆ. ಸೋಗಿಯ ಶಾಸನ ಜಗದೇಕಮಲ್ಲನು ಚೋರುನೂರಿನಿಂದ ಆಳುತ್ತಿದ್ದನೆಂದು ಹೇಳುತ್ತದೆ. ಈ ಚೋರುನೂರು ಸಂಡೂರು ತಾಲ್ಲೂಕಿನ ಚೋರುನೂರು ಗ್ರಾಮವೇ ಆಗಿದೆ.

**ಪಾಂಡ್ಯರು**

ಪಾಂಡ್ಯರು ಅನೇಕ ಶಾಸನಗಳಲ್ಲಿ ಉಚ್ಚಂಗಿಯ ಪಾಂಡ್ಯರೆಂದೇ ಹೆಸರಾಗಿದ್ದಾರೆ. ಉಚ್ಚಂಗಿದುರ್ಗ ಮತ್ತು ನೊಳಂಬವಾಡಿ ಹಾಗೂ ದೊರವಾಡಿಗಳನ್ನು ವಶಪಡಿಸಿಕೊಂಡಾಗ ಪಾಂಡ್ಯರ ಆಡಳಿತಕ್ಕೆ ಸೊಂಡೂರು ಸೇರಿರಬೇಕು. ಇವರ ಕಾಲದಲ್ಲಿ ಕುಮಾರಸ್ವಾಮಿ ದೇವಾಲಯ ತುಂಬಾ ಪ್ರಸಿದ್ಧಿ ಪಡೆದಿತ್ತು. ಇವರು ಚಾಲುಕ್ಯರ ಸಾಮಂತರಾಗಿ ನೊಳಂಬವಾಡಿಯನ್ನು ಆಳುತ್ತಿದ್ದರು. ಕ್ರಿ.ಶ.೧೧೪೮ರ ಉರುವಾಯಿ ಶಾಸನದ ಪ್ರಕಾರ ದೋರವಾಡಿ ನಾಡಿನ ವಿಚಾರ ಬರುತ್ತದೆ. ಸಂಡೂರಿನ ಕಾರ್ತಿಕೇಯಸ್ವಾಮಿ ದೇವಾಲಯದ ಪ್ರದೇಶಕ್ಕೆ ದೊರವಾಡಿನಾಡು ಎಂದು ಕರೆಯಲಾಗಿದೆ. ಚಾಲುಕ್ಯರಿಗೆ ಸಾಮಂತ ಅರಸರಾದ ಪಾಂಡ್ಯರು ಉಚ್ಚಂಗಿ ಮುಖ್ಯಪಟ್ಟಣದಿಂದ ನೊಳಂಬವಾಡಿಯನ್ನು ಆಳುತ್ತಿದ್ದರು. ಇವರಲ್ಲಿ ಪ್ರಮುಖ ಅರಸರೆಂದರೆ ವೀರ ಪಾಂಡ್ಯನು ಇವನು 'ಮಲೈ' ಪ್ರದೇಶವನ್ನು ವಶಪಡಿಸಿಕೊಂಡಿದ್ದನು.

**ಹೊಯ್ಸಳರು**

ಕಲ್ಯಾಣ ಚಾಲುಕ್ಯರ ನಂತರ ಕ್ರಿ.ಶ.೧೧೦೮ರಲ್ಲಿ ಅಧಿಕಾರಕ್ಕೆ ಬಂದ ಹೊಯ್ಸಳರು ೧೩೪೨ರವರೆಗೆ ಆಳ್ವಿಕೆ ನಡೆಸಿದರು. ಇವರು ಕ್ರಿ.ಶ.೧೧೩೭ರಲ್ಲಿ ಉಚ್ಚಂಗಿ ಕೋಟೆಯನ್ನು ಮುತ್ತಿ ನೊಳಂಬವಾಡಿ ೩೨,೦೦೦ವನ್ನು ಒಳಗೊಂಡಂತೆ ತುಂಗಭದ್ರಾ ನದಿವರೆಗಿನ ಪ್ರದೇಶವನ್ನು

ಆಕ್ರಮಿಸಿದರು. ಅಷ್ಟೇ ಅಲ್ಲದೆ ಕೊಂಕಣದಿಂದ ಸಾವಿಮಲ್ಲೆ (ಸಂಡೂರು ಪ್ರದೇಶ) ವರೆಗಿನ ಸಾಕಷ್ಟು ವಿಸ್ತಾರವಾದ ಪ್ರದೇಶದ ಸ್ವಾಮಿಯಾಗಿದ್ದ ಎರೆಯಗಂಗನ ರಾಜ್ಯಕ್ಕೆ ಆತನ ಮಗ ಒಂದನೇಯ ಬಲ್ಲಾಳ ಉತ್ತರಾಧಿಕಾರಿಯಾದನು. ಇದು ಬಹುದೊಡ್ಡ ಪ್ರದೇಶವಾಗಿದ್ದರೂ ಬಲ್ಲಾಳನ ಪೂರ್ವಜರು ಅದನ್ನು ಸಾಮಂತರಾಗಿಯೇ ಪಡೆದುಕೊಂಡಿದ್ದರು.

ಇವರ ಕಾಲದ ಶಾಸನಗಳಲ್ಲಿ ಒಂದು ಕುಮಾರಸ್ವಾಮಿ ಬೆಟ್ಟದ ಪಾರ್ವತಿ ದೇವಾಲಯದಲ್ಲಿಯೂ ಮತ್ತು ಮೂರು ಕುಡತಿನಿಗಳಲ್ಲಿಯೂ ಇವೆ. ೨ನೆಯ ವೀರಬಲ್ಲಾಳನ ಕ್ರಿ.ಶ.೧೨೦೬ರ ಶಾಸನದಲ್ಲಿ ಕುಮಾರಸ್ವಾಮಿ ದೇವಾಲಯದ ದಾನವನ್ನು ಮಹದೇವ ದಂಡನಾಯಕನು ನವೀಕರಿಸಿದ ವಿಷಯವಿದೆ. ರಾಷ್ಟ್ರಕೂಟರ ಮೂರನೇ ಕೃಷ್ಣನು ಕುಮಾರಸ್ವಾಮಿಗೆ ಕೆರೆಯಪಳ್ಳಿ ಗ್ರಾಮವನ್ನು ದಾನ ಬಿಟ್ಟಿದ್ದನ್ನು ಗಮನಿಸಿದರೆ, ಗಧಾದರನು ಇದೆ ಅವಧಿಯಲ್ಲಿ ಅಲ್ಲೂ ಕುಮಾರಸ್ವಾಮಿಯ ದೇವಾಲಯವನ್ನು ಕಟ್ಟಿಸಿದಂತೆ ಕಾಣುತ್ತದೆ.

ಸಂಡೂರು ಕುಮಾರಸ್ವಾಮಿ ದೇವರಿಗೆ ಈ ಹಿಂದೆ ೨ನೇ ಕೃಷ್ಣನ ಕಾಲದಲ್ಲಿ ಬಿಟ್ಟ ಕೆರೆಯಪಳ್ಳಿ ಗ್ರಾಮದತ್ತಿ ನಿಂತು ಹೋಗಲು ವೀರಬಲ್ಲಾಳನ ಆಜ್ಞೆಯಂತೆ ಪ್ರಧಾನಮಂತ್ರಿ ಮಹಾದೇವ ದಂಡನಾಯಕನು ಅದರ ಸ್ಥಾನಿಕ ವಿಷ್ಣುಕರ ಬ್ರಹ್ಮಚಾರಿಗೆ ಪುನಃ ದತ್ತಿ ಬಿಡುತ್ತಾನೆ. ಕ್ರಿ.ಶ.೧೨೧೮ರಲ್ಲಿ ತಲರ(ತಾಳೂರು)ದಲ್ಲಿ ಯಗವಟ್ಟಿಯ ಬೊಮ್ಮಗವುಡನು ಈಶ್ವರ ದೇವಾಲಯವನ್ನು ಕಟ್ಟಿಸುತ್ತಾನೆ. ಈ ದೇವಾಲಯವನ್ನು ಕಟ್ಟಿಸಿದ ಬೊಮ್ಮೊಜನಿಗೆ ಭೂದಾನ ನೀಡಿದನು. ಇದು ಸಂಡೂರಿನ ಸಮೀಪದಲ್ಲಿದೆ. ಬಳ್ಳಾರಿ ಜಿಲ್ಲೆಯ ಕುರುಗೋಡು ಮತ್ತು ಕಂಪಲಿ ಸ್ಥಳಗಳಲ್ಲಿ ದೊರೆತ ೧೨೧೭ ಮತ್ತು ೧೨೧೯ರ ಶಾಸನದ ಪ್ರಕಾರ ಬಲ್ಲಾಳನು ಸ್ವಾಮಿ ಕಾರ್ತಿಕೇಯ ತಪೋವನಕ್ಕೆ ದತ್ತಿಯನ್ನು ಕೊಟ್ಟು ತೆಲ್ಲಿಗೆಯನ್ನು ಸ್ಥಾಪಿಸಿದ್ದಾನೆ.

ಕ್ರಿ.ಶ.೧೨೨೪ರಲ್ಲಿ ವೀರಬಲ್ಲಾಳನ ದಂಡನಾಯಕ ಅಮಿತಯ್ಯನೆಂಬುವನು ಶ್ರೀಪುರದಲ್ಲಿ ತ್ರಿಕೂಟ ದೇವಾಲಯವನ್ನು ಕಟ್ಟಿಸಿ, ಅದರಲ್ಲಿ ಅಮೃತೇಶ್ವರ, ವಾಮೇಶ್ವರ, ಲಕ್ಷ್ಮೀನಾರಾಯಣ ದೇವರುಗಳನ್ನು ಪ್ರತಿಷ್ಠಾಪಿಸುತ್ತಾನೆ. ಅಲ್ಲದೆ ಈ ದೇವಾಲಯದ ಪೂಜಾ ಕಾರ್ಯಕ್ಕಾಗಿ ಕೊಂಡಕಸಿಪುರವೆಂಬ ಗ್ರಾಮದಾನ ನೀಡುತ್ತಾನೆ. ಕಾರ್ತಿಕೇಯ ತಪೋವನಾಧಿಪತಿ ವಿಷ್ಣುಕರಬ್ರಹ್ಮಚಾರಿಯ ಉಲ್ಲೇಖ ಕುಡತಿನಿಯ ಶಾಸನದಲ್ಲಿಯೂ ಇದೆ. ಇವರ ಕಾಲದಲ್ಲಿ ಕಾರ್ತಿಕೇಯನ ಕ್ಷೇತ್ರ ಮತ್ತಷ್ಟು ಪ್ರಚಾರಕ್ಕೆ ಬಂತು. ಈ ಅನೇಕ ಆಧಾರಗಳಿಂದ ಹೊಯ್ಸಳ

ಅರಸರು ಸಂಡೂರು ಪ್ರದೇಶದಲ್ಲಿ ಸಾಂಸ್ಕೃತಿಕ ಬೆಳವಣಿಗೆಗೆ ಉತ್ತಮ ಪ್ರೋತ್ಸಾಹ ನೀಡಿರುವುದು ಕಂಡುಬರುತ್ತದೆ.

**ಕುಮ್ಮಟದ ನಾಯಕರು**

ಕರ್ನಾಟಕದ ಚರಿತ್ರೆಗೆ ವಿಶಿಷ್ಟ ಕೊಡುಗೆಯನ್ನು ನೀಡಿದ ಕುಮ್ಮಟ ಅರಸರ ಇತಿಹಾಸವು ಸಂಡೂರು ತಾಲ್ಲೂಕಿನ ಚರಿತ್ರೆಯಲ್ಲಿಯೂ ತನ್ನದೇ ಆದ ಮಹತ್ವದ ಸ್ಥಾನವನ್ನು ಪಡೆದಿದೆ. ಮುಮ್ಮಡಿ ಮನೆತನದ ಇತಿಹಾಸವನ್ನು ಅರಿಯಲು ಶಾಸನಗಳು, ಕನ್ನಡ ಸಾಹಿತ್ಯ ಕೃತಿಗಳು ಜಾನಪದ ಕಥೆಗಳು ಮತ್ತು ಕೈಫಿಯತ್ತುಗಳು ಆಧಾರವಾಗಿವೆ. ಕುಮಾರರಾಮನನ್ನು ಕುರಿತಂತೆ ಹಳೆಯ ಕುಮಾರರಾಮನ ಸಾಂಗತ್ಯ, ಹೊಸ ಕುಮಾರರಾಮನ ಸಾಂಗತ್ಯ, ಕುಮಾರರಾಮಯ್ಯನ ಚರಿತೆ, ನಂಜುಂಡ ಕವಿಯ ಕುಮಾರರಾಮ ಚರಿತೆ, ಮಹಾಲಿಂಗ ಸ್ವಾಮಿಯ ಬಾಲರಾಮನ ಸಾಂಗತ್ಯಗಳು ಹುಟ್ಟಿಕೊಂಡಿವೆ. ಡಾ.ಜಿ.ವರದರಾಜರಾವ್ ಅವರು 'ಕುಮಾರರಾಮನ ಸಾಂಗತ್ಯಗಳು' ಎಂಬ ಶೀರ್ಷಿಕೆಯಲ್ಲಿ ಸಾಂಗತ್ಯಗಳನ್ನು ಅಧ್ಯಯನ ಮಾಡಿ ಪಿ.ಎಚ್.ಡಿ. ಮಹಾಪ್ರಬಂಧ ರಚಿಸಿದ್ದು, ಅದು ಪ್ರಕಟಗೊಂಡಿದೆ.

ಕರ್ನಲ್ ಮೆಕೆಂಜಿ ಸಂಗ್ರಹಿಸಿದ್ದ ಕೈಫಿಯತ್ತುಗಳನ್ನು ಡಾ.ಎಂ.ಎಂ.ಕಲಬುರ್ಗಿಯವರು ಸಂಪಾದಿಸಿ 'ಕರ್ನಾಟಕದ ಕೈಫಿಯತ್ತುಗಳು' ಎಂದು ಪ್ರಕಟಿಸಿದ್ದಾರೆ. ಅವುಗಳಲ್ಲಿ ಅಂತಾಪುರ ಕೈಫಿಯತ್ತು, ಕೈಫಿಯತ್ತು ಕುರುಗೋಡು ತಾಲ್ಲೂಕು ಬಳ್ಳಾರಿ, ಭಟ್ಟರಹಳ್ಳಿ ಕೈಫಿಯತ್ತು, ಕಂಪಲಿ ತಾಲ್ಲೂಕು ಕೈಫಿಯತ್ತು, ದರೋಜಿ ಗ್ರಾಮದ ಕೈಫಿಯತ್ತು ಹಾಗೂ ಮೈ.ಹ.ರಾಮಶರ್ಮರ ರಣಧೀರ ರಾಮನಾಥ ಗ್ರಂಥದಲ್ಲಿಯೂ ಅಷ್ಟೇ ಅಲ್ಲದೆ, ಡಾ.ಸಿ.ಎಸ್.ಪಾಟೀಲರು *'Vijayanagara : Progress of research* ೧೯೮೭–೮೮' ಕೃತಿಯಲ್ಲಿ ಈ ಅರಸರಿಗೆ ಸಂಬಂಧಿಸಿದ *Mummadi Singa, Kampila and Kumararama* ಮತ್ತು *Kumata* ಎಂಬ ಎರಡು ಉಪಯುಕ್ತ ಲೇಖನಗಳನ್ನು ಪ್ರಕಟಿಸಿದ್ದಾರೆ. ಇವಲ್ಲದೆ ಈ ಅರಸರ ಆಳ್ವಿಕೆಯ ಕುರಿತು ಅನೇಕ ಲೇಖನಗಳು ಪ್ರಕಟವಾಗಿವೆ. ಈ ಎಲ್ಲಾ ಆಧಾರದಿಂದ ಮುಮ್ಮಡಿ ಮನೆತನದ ಅರಸರ ಇತಿಹಾಸವನ್ನು ಈ ರೀತಿ ಚಿತ್ರಿಸಬಹುದು.

ಬಳ್ಳಾರಿ ಜಿಲ್ಲೆಯಲ್ಲಿಯ ರಾಯದುರ್ಗದ ನೆರೆಹೊರೆಯ ಪ್ರದೇಶವನ್ನು ಜನರು ಮಲೆಪ್ರಾಂತ್ಯ ಅಥವಾ ಮಲೆಪಂಕ್ತಿ ದೇಶವೆಂದು ಕರೆಯುತ್ತಿದ್ದರು. ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ಎಂಬ ಗ್ರಂಥದಲ್ಲಿ ಈ ಮಲೆಪ್ರಾಂತ್ಯಕ್ಕೆ 'ಅರ್ಧಮತಿ' ಎಂದರೆ 'ಅರಣ್ಯಪಂಥಿ' ಎಂದು

ಉಲ್ಲೇಖಿಸಿದೆ. ಈ ಅರ್ಧಮತಿಯೇ ಮುಂದೆ ಅರಣ್ಯಪಂಥಿ> ಮಲೆಪ್ರಾಂತ್ಯ ಅಥವಾ ಮಲೆಪಂಕ್ತಿಯಾಗಿರಬೇಕು. ಈ ಮಲೆಪಂಕ್ತಿ ದೇಶದ ತಿಪ್ಪಸಮುದ್ರ ಎಂಬ ಗ್ರಾಮದಲ್ಲಿ ಮುಮ್ಮಡಿ ಸಿಂಗೆಯನಾಯಕನು ಜನಿಸಿದನು. ಈತನಿಗೆ 'ಮುಮ್ಮಡಿ' ಎಂಬ ಬಿರುದಿತ್ತು. ಇಲ್ಲಿ 'ಮುಮ್ಮಡಿ' ಎಂಬ ಶಬ್ದ ಹಿಡಿದು ಈ ವಂಶದಲ್ಲಿ ಹಿಂದೆ ಆಳಿದ್ದಿರಬಹುದಾದ ಇಮ್ಮಡಿ ಅಥವಾ ಮೊದಲನೆಯ ಸಿಂಗೆಯನಾಯಕನೆಂಬ ಪೂರ್ವಜರು ಆಡಳಿತ ನಡೆಸಿರಬೇಕೆಂದು ತೋರುತ್ತದೆ. ಈತನು ಬೇಡರ ಜಾತಿಯವನು. ಈತನ ಕುಲದೇವರು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಸಿದ್ದಾಪುರ ಬಳಿಯಿರುವ ಜಟಾಂಗಿರಾಮೇಶ್ವರ. ಈ ಮುಮ್ಮಡಿ ಸಿಂಗನು ಮೊದಲು ನಾಡ ತಳವಾರನಾಗಿದ್ದನು.

ಕಲ್ಯಾಣ ಚಾಲುಕ್ಯರ ದೊರೆ ೬ನೆಯ ವಿಕ್ರಮಾದಿತ್ಯನ ಸಮರ್ಥ ಮಹಾಮಂಡಳೇಶ್ವರರಾಗಿ ಸೇವುಣರು ಕರ್ನಾಟಕದ ಹಾಗೂ ಮಹಾರಾಷ್ಟ್ರಗಳ ಇತಿಹಾಸದಲ್ಲಿ ಮಹತ್ವದ ಪಾತ್ರವಹಿಸಿದ್ದರು. ಕ್ರಿ.ಶ.೧೩೧೮ರಲ್ಲಿ ಸೇವುಣ ರಾಜ್ಯ ತನ್ನ ಅವಸಾನವನ್ನು ಕಂಡುಕೊಂಡಿತು. ಅವಸಾನದ ಜೊತೆ ಅಸ್ತಿತ್ವದ ನೆಲೆಯನ್ನು ಕಳೆದುಕೊಂಡ ಸೇವುಣ ರಾಜ್ಯ ದೆಹಲಿಯ ಒಂದು ಪ್ರಾಂತ್ಯವಾಗಿ ಉಳಿದುಕೊಂಡಿತು. ಕರ್ನಾಟಕದಲ್ಲಿ ಈ ಸಂಧಿಯನ್ನು ಸದುಪಯೋಗ ಪಡಿಸಿಕೊಂಡು ಕುಮ್ಮಟದುರ್ಗವನ್ನು ತಮ್ಮ ರಾಜಧಾನಿಯನ್ನಾಗಿಸಿಕೊಂಡು ಕಂಪಲಿಯನ್ನು ಸಮರ್ಥರಾಜ್ಯವನ್ನಾಗಿ ಮಾರ್ಪಡಿಸಿದವರು ಈ ಮರುಳೆಯ ಮನೆತನದವರು. ಕಾಲದಿಂದ ಕಾಲಕ್ಕೆ ಹತ್ತಾರು ಕೈಗಳ ಅಧಿಕಾರಕ್ಕೆ ಸಿಕ್ಕಿ ಈ ಪ್ರದೇಶ ಸೇವುಣ ಹಾಗೂ ಹೊಯ್ಸಳ ಸೀಮೆಗಳ ನಡುವಿನ ತಡೆರಾಜ್ಯವಾಗಿ ಅಧಿಕ ಮಹತ್ವ ಪಡೆಯಿತು.

ಬಲ್ಲಕುಂದೆ ಮುನ್ನೂರು ಪ್ರಾಂತದ ದೊರವಡಿ(ಈಗಿನ ಬಳ್ಳಾರಿ ಜಿಲ್ಲೆಯ ದರೋಜಿ ಅಥವಾ ದೋಅಬ್) ಅನ್ನು ತನ್ನ ಪ್ರಬಲ ಕೋಟೆಯನ್ನಾಗಿ ರೂಪಿಸಿ ಕೊಂಡಿದ್ದರೂ, ಪರಾಕ್ರಮಿಯಾಗಿದ್ದ ಮುಮ್ಮಡಿ ಸಿಂಗೆಯನಾಯಕನು(೧೨೮೦-೧೩೦೦) ಸದ್ದುಗದ್ದಲವಿಲ್ಲದೆ, ಸೀಮಿತವಾಗಿ ತನ್ನ ಪಾಳೆಯಪಟ್ಟನ್ನು ಹರಿಹರದವರೆಗಿನ ಚಿತ್ರದುರ್ಗ ಜಿಲ್ಲೆಯ ಭಾಗಗಳನ್ನು ಒಳಗೊಂಡಂತೆ ಸಾದ್ಯಂತವಾಗಿ ವಿಸ್ತರಿಸಿದ್ದ.

ಕೈಫಿಯತ್ತಿನ ಹೇಳಿಕೆಯಂತೆ ಜಿ.ವರದರಾಜರಾಯರು ಮಾಹಿತಿಯನ್ನು ಸಂಗ್ರಹಿಸಿ ಹೇಳಿರುವ ಪ್ರಕಾರ ಮುಮ್ಮಡಿ ಸಿಂಗೆಯನೆಂಬಾತನು ತನ್ನ ದಾಯಾದಿಗಳ ಕಾಟವನ್ನು ತಡೆಯಲಾಗದೆ ರಾಜ್ಯವನ್ನೆಲ್ಲ ಅವರಿಗೆ ಹಂಚಿಕೊಟ್ಟು ತಾನು ದೇವಗಿರಿಯ ರಾಮ

ದೇವರಾಯನನ್ನು ಅಶ್ರಯಿಸಿದನು ಎಂದಿದೆ. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳಲ್ಲಿಯ 'ಪುವ್ವಲ ಅರಸರು' ಎಂಬ ಲೇಖನದಲ್ಲಿ ಮುಮ್ಮಡಿ ಸಿಂಗನು ಮೊದಲು ದೇವಗಿರಿಯಲ್ಲಿದ್ದನು ಎಂದು ತಿಳಿಸುತ್ತದೆ. ಅದು ಸಂಡೂರು ದೇಶದಲ್ಲಿರುವ ಕುಮಾರಸ್ವಾಮಿ ಬೆಟ್ಟವೇ ಈ ದೇವಗಿರಿಯಾಗಿದೆ ಎಂದಿದ್ದಾರೆ. ಪಾಂಚಾಳ ಗಂಗನ ಚೆನ್ನರಾಮನ ಸಾಂಗತ್ಯವು ಮುಮ್ಮಡಿ ಸಿಂಗನು ದೇವಗಿರಿಯಿಂದ 'ಹನೆಯದೆರೆ'ಗೆ (ಚಿತ್ರದುರ್ಗ.(ಜಿ) ಮೊಳಕಾಲ್ಮೂರು.(ತಾ)) ಬಂದು ಅಲ್ಲಿ ತನ್ನ ವಾಸ್ತವ್ಯ ಕಟ್ಟುತ್ತಾನೆ ಎಂದು ತಿಳಿಸುತ್ತದೆ.

ರಣಧೀರ ರಾಮನಾಥ ಗ್ರಂಥದಲ್ಲಿ ಮುಮ್ಮಡಿ ಸಿಂಗನಿಗೆ ದಾಯಾದಿಗಳು ಅನೇಕರು ಒಮ್ಮೆ ಇವರೊಳಗೆ ತಮ್ಮ ಆಸ್ತಿಯ ವಿಚಾರವಾಗಿ ಬಲವಾದ ಕಲಹವು ತಲೆದೂರಿತು ಆದ್ದರಿಂದ ಮುಮ್ಮಡಿ ಸಿಂಗನು ದಾಯಾದಿಗಳ ಕಾಟ ತಡೆಯಲಾಗದೆ ಅವರಿಗೆ ಎಲ್ಲಾ ಆಸ್ತಿಯನ್ನು ಹಂಚಿ ತಾನು ಸ್ವದೇಶವನ್ನು ಬಿಟ್ಟು ಪರಿವಾರ ಸಹಿತ ದೂರದಲ್ಲಿದ್ದ ದೇವಗಿರಿಗೆ ಹೊರಟು ಹೋದನು ಎಂದಿದೆ. ಆದರೆ ಸೇವುಣರ ಆಳ್ವಿಕೆಗೆ ಒಳಪಟ್ಟ ದೇವಗಿರಿಯ ಪ್ರದೇಶವು ಈಗಿನ ಮಹಾರಾಷ್ಟ್ರದಲ್ಲಿದೆ. ೯ನೆಯ ಶತಮಾನದಲ್ಲಿ ಈ ದೇವಗಿರಿ ಪ್ರದೇಶಕ್ಕೆ ಈಗಿನ ಮಹಾರಾಷ್ಟ್ರದ ಅರ್ಥ ಇರಲಿಲ್ಲ. ಅಂದರೆ ರಣಧೀರ ರಾಮನಾಥ ಗ್ರಂಥದಲ್ಲಿಯ ಹೇಳಿಕೆಯಂತೆ ಸಿಂಗನು ಸ್ವದೇಶ ಬಿಟ್ಟು ಪರಿವಾರ ಸಹಿತ ದೂರದಲ್ಲಿದ್ದ ದೇವಗಿರಿಗೆ ಹೋದನು ಎಂಬುದನ್ನು ಗಮನಿಸಿದರೆ ಇಂದಿನ ಮಹಾರಾಷ್ಟ್ರದಲ್ಲಿಯ ದೇವಗಿರಿಯ ಪ್ರದೇಶಕ್ಕೆ ಹೋಗಿ ಅಲ್ಲಿ ರಾಮ ದೇವರಾಯನನ್ನು ಆಶ್ರಯಿಸಿದನು ಎಂಬ ಹೇಳಿಕೆ ಸತ್ಯಕ್ಕೆ ಹತ್ತಿರವಾದದೆಂದು ಊಹಿಸಬಹುದಾಗಿದೆ.

ಒಟ್ಟಿನಲ್ಲಿ ಮೇಲಿನ ಕೈಫಿಯತ್ತು, ಸಾಂಗತ್ಯ, ಗ್ರಂಥಗಳ ಹೇಳಿಕೆಯನ್ನು ಗಮನಿಸುವುದರಿಂದ ಮುಮ್ಮಡಿ ಸಿಂಗನು ಆಶ್ರಯಿಸಿದ ರಾಮ ದೇವರಾಯನ ದೇವಗಿರಿ ಪ್ರದೇಶ, ಸಂಡೂರು ಪ್ರದೇಶದ ದೇವಗಿರಿಯೋ? ಅಥವಾ ಈಗಿನ ಮಹಾರಾಷ್ಟ್ರದಲ್ಲಿರುವ ದೇವಗಿರಿಯೋ? ಎಂಬ ಬಗ್ಗೆ ಅನುಮಾನ ಉಂಟಾಗುತ್ತದೆ. ಪಾಂಚಾಳಗಂಗನ ಚೆನ್ನರಾಮ ಸಾಂಗತ್ಯವು ಸಿಂಗನು ದೇವಗಿರಿಯಿಂದ 'ಹನೆಯದೆರೆಗೆ' ಬಂದು ಅಲ್ಲಿ ತನ್ನ ವಾಸ್ತವ್ಯ ಕಟ್ಟುತ್ತಾನೆ. ರಾಯದುರ್ಗದ ಅರಸನನ್ನು ಕಂಡು ಆತನ ದಳವಾಯಿಯಾಗುತ್ತಾನೆ ಎಂದು ತಿಳಿಸುತ್ತದೆ. ಹಾನೆಯದೆರೆ ಎಂಬ ಪ್ರಾಂತ್ಯವು ಆಗ ರಾಯದುರ್ಗದ ಮಲ್ಲರಾಜನೆಂಬುವನ ಅಧಿಕಾರಕ್ಕೆ ಒಳಪಟ್ಟಿತ್ತು. ಇದರಿಂದ ವ್ಯಕ್ತವಾಗುವುದೇನೆಂದರೆ ಸಿಂಗನು ಮೊದಲು ದೇವಗಿರಿಯಲ್ಲಿ ತನ್ನ ಆಳ್ವಿಕೆಯನ್ನು ಆರಂಭಿಸಿ ಸ್ವಲ್ಪ ಕಾಲದಲ್ಲಿಯೇ ನಿಡುಗಲ್ಲಿನ ಚೋಳ ಮಹಾರಾಜನಾದ

ಮಲ್ಲದೇವನಿಂದ ಹನೆಯಕೋಟೆ ಮತ್ತು ಸುತ್ತಲು ೨೦ ಹಳ್ಳಿಗಳ ರಾಜ್ಯವನ್ನು ಪಡೆದನೆಂದು ತಿಳಿದುಬರುತ್ತದೆ. ಈ ಹನೆಯದರೆಯಲ್ಲಿ ೧೨-೧೩ನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ಕೋಟೆಯೂ ಇದೆ. ಇದನ್ನು ಚೋಳ ಬಮ್ಮದೇವನಲ್ಲಿ ಮಂತ್ರಿಯಾಗಿದ್ದ ಬೀಚನು ಕಟ್ಟಿಸಿದ್ದಾನೆಂದು ಶಾಸನಗಳ ಆಧಾರದಿಂದ ಡಾ.ಚೆನ್ನಬಸಪ್ಪ ಪಾಟೀಲರು ತಿಳಿಸುತ್ತಾರೆ.

ಒಟ್ಟಿನಲ್ಲಿ ಯಾದವ ರಾಮದೇವರಾಯನಲ್ಲಿ ಆಶ್ರಯ ಪಡೆದ ಮುಮ್ಮಡಿ ಸಿಂಗೆಯನಾಯಕ ಯಾದವರು ಸುಲ್ತಾನರಿಗೆ ಸೋತು ಹೋದ ನಂತರ ಮರಳಿ ರಾಯದುರ್ಗಕ್ಕೆ ಬಂದು ಒಂದು ಸಣ್ಣ ಪಾಳೆಯಪಟ್ಟನ್ನು ಕಟ್ಟಿಕೊಂಡಂತೆ ಚೆನ್ನರಾಮ ಸಾಂಗತ್ಯ ವಿವರಿಸಿದೆ. ಕಾಲಾಂತರದಲ್ಲಿ ದೊರವದಿಯಲ್ಲಿ ನೆಲೆಸಿ ಕುಮ್ಮಟದುರ್ಗವನ್ನು ಕೈವಶ ಮಾಡಿಕೊಂಡಿರಬೇಕೆಂದು ಶಾಸನಗಳ ಊಹೆಯಾಗಿದೆ. ಹೀಗೆ ಮುಮ್ಮಡಿ ಸಿಂಗನು ಮುಂದೆ ತನ್ನ ಸ್ವಬಾಹು ಬಲದಿಂದ ಸುತ್ತಣ ರಾಜ್ಯವನ್ನೇ ವಿಸ್ತರಿಸಿ ದೇವವಾಡಿಯನ್ನು ರಾಜಧಾನಿ ಮಾಡಿಕೊಂಡನು. ದೇವಗಿರಿಯಿಂದ ಹನೆಯದರೆಗೆ ಬಂದು ಅಲ್ಲಿ ತನ್ನ ನೆಲೆಯನ್ನು ಗಟ್ಟಿಗೊಳಿಸಿಕೊಂಡು ನಂತರ ದೊರವಡಿ ವಿಭಾಗವನ್ನು ತನ್ನ ವಶಕ್ಕೆ ತೆಗೆದುಕೊಂಡು ಈ ದೊರವಡಿಯನ್ನು ಕೇಂದ್ರ ಸ್ಥಳವನ್ನಾಗಿಸಿಕೊಂಡು ಆಳುತ್ತಾನೆ. ಹನೆಯದರೆ ಮತ್ತು ದೊರವಾಡಿಗಳು ರಾಜಧಾನಿಗಳಾಗಿದ್ದುವೆಂದು ತಿಳಿದುಬರುವುದು.

ಇದರ ಜೊತೆಗೆ ರಣಧೀರ ರಾಮನಾಥ ಗ್ರಂಥದ ಉಲ್ಲೇಖದಂತೆ ರಾಯದುರ್ಗವು ಅವನ ಮತ್ತೊಂದು ರಾಜಧಾನಿಯಾಗಿತ್ತೆಂದು, ಅದೇ ಅವನ ಮೊದಲ ರಾಜಧಾನಿಯಾಗಿದ್ದಿರಬೇಕು ಎಂದು ತಿಳಿದುಬರುತ್ತದೆ. ಮುಂದೆ ಕುಮ್ಮಟವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳಲು ಪ್ರಾರಂಭಿಸುತ್ತಾನೆ. ಕ್ರಿ.ಶ.೧೨೮೭ರಲ್ಲಿ ಕುಮ್ಮಟದಲ್ಲಿದ್ದನೆಂದು ಲಕ್ಷ್ಮೇಶ್ವರ ಶಾಸನದಿಂದ ತಿಳಿಯುತ್ತದೆ. ಹಾಗೂ ಈ ಸಮಯಕ್ಕೆ ಮುಮ್ಮಡಿ ಸಿಂಗೆಯನಾಯಕನಿಗೆ ಕುಮ್ಮಟವು ರಾಜಧಾನಿಯಾಗಿತ್ತು. ಈ ಕುಮ್ಮಟದುರ್ಗವು ಕರ್ನಾಟಕದ ಪ್ರಾಚೀನ ಕೋಟೆಗಳಲ್ಲಿ ಒಂದಾಗಿದ್ದು ಶಾಸನಗಳಲ್ಲಿ ಉಲ್ಲೇಖಗೊಂಡಿದೆ.

ಒಟ್ಟಿನಲ್ಲಿ ಹೇಳುವುದಾದರೆ ಇತ್ತೀಚಿನ ಸಂಶೋಧನೆಗಳಿಂದ ಕುಮ್ಮಟದುರ್ಗವು ಮುಮ್ಮಡಿ ಸಿಂಗನ ನಿಜವಾದ ರಾಜಧಾನಿಯಾಗಿತ್ತು ಎಂಬುದು ಸ್ಪಷ್ಟವಾಗಿದೆ. ಮುಮ್ಮಡಿ ಸಿಂಗನ ವಂಶಾವಳಿಯ ಬಗ್ಗೆ ಶಾಸನ, ಕಾವ್ಯ, ಗ್ರಂಥಗಳಿಂದ ಈ ರೀತಿ ತಿಳಿದುಕೊಳ್ಳಬಹುದಾಗಿದೆ. ಮುಮ್ಮಡಿ ಸಿಂಗನು ಮುಮ್ಮಡಿ ಮನೆತನದ ಮೂಲ ಪುರುಷ. ಈತನ ಪತ್ನಿಯ ಹೆಸರನ್ನು

'ರಣಧೀರ ರಾಮನಾಥ' ಗ್ರಂಥವು 'ಮಾರಾಂಬಿಕೆ' ಎಂದು ತಿಳಿಸುತ್ತದೆ. ಆದರೆ ಕ್ರಿ.ಶ.೧೩೨೮ರ ಹೊಸಮಲೆ ಶಾಸನದಲ್ಲಿ ಈ ಹೆಸರನ್ನು 'ಮಾದನಾಯಕಿತಿ' ಎಂದು ಉಲ್ಲೇಖಿಸಿದೆ. ಆದ್ದರಿಂದ ಇಲ್ಲಿ ಹೊಸಮಲೆ ಶಾಸನದ ಉಲ್ಲೇಖದಂತೆ ಹೇಳುವುದಾದರೆ ಈ ಮಾರಾಂಬಿಕೆ ಎಂಬ ಹೆಸರೇ ಬಹುಶಃ ಮುಂದೆ ಮಾದಾಂಬಿಕೆ ಅಥವಾ ಮಾದನಾಯಕಿತಿಯಾಗಿ ಬಳಕೆಯಾಗಿದ್ದಿರಬೇಕೆಂದು ಊಹಿಸಬಹುದಾಗಿದೆ.

ಮುಮ್ಮಡಿ ಸಿಂಗನಿಗೆ ಕಂಪಿಲರಾಯನೆಂಬ ಮಗನಿದ್ದನು(ಕ್ರಿ.ಶ.೧೩೦೦-೧೩೨೭). ಈತನು ಸೇವುಣ ದೊರೆ ರಾಮಚಂದ್ರನ ನಿಕಟವರ್ತಿಯಾಗಿ, ಆತ್ಮಿಯನಾಗಿ ಹಲವಾರು ಬಾರಿ ರಣಾಂಗಣದಲ್ಲಿ ಹೊಯ್ಸಳನನ್ನು ಎದುರಿಸಿದ್ದನು. ಸ್ನೇಹಿತ ಸೇವುಣ ದೊರೆಯ ಮರಣ ಕಂಪಿಲನಿಗೆ ರಾಜ್ಯ ವಿಸ್ತರಣೆಗೆ ಅವಕಾಶ ಮಾಡಿಕೊಟ್ಟಿತು. ಈತನು ಕರ್ನಾಟಕದಲ್ಲಿ ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ, ರಾಯಚೂರು, ಧಾರವಾಡ ಜಿಲ್ಲೆಗಳ ಮತ್ತು ಆಂಧ್ರಪ್ರದೇಶದಲ್ಲಿ ಅನಂತಪುರ ಜಿಲ್ಲೆಯ ಭಾಗಗಳನ್ನು ತನ್ನ ಕೈವಶ ಮಾಡಿಕೊಂಡು ಅಧಿಕಾರದ ಮುದ್ರೆಯೊತ್ತಿದ್ದ. ಕಂಪಿಲರಾಯನ ಪತ್ನಿ ಕನಕಗಿರಿಯ ಪಾಳೆಗಾರ ಗುಜ್ಜಲ ಕಾಟನಾಯಕನ ಮಗಳಾದ ಹರಿಯಮ್ಮನನ್ನು ಮದುವೆಯಾಗಿದ್ದ. ಈಕೆಯಲ್ಲದೆ ಕನ್ನಾಜಿ, ಹಂಪಾಜಿ, ಸಿಂಗಾಜಿ, ಸಿರಮಣಿ, ರತ್ನಾಜಿ ಎಂಬ ಐದು ಜನ ಪತ್ನಿಯರಿದ್ದರು. ಕಂಪಿಲರಾಯನ ಮಗ ಕುಮಾರರಾಮನು ಜಟಾಂಗಿರಾಮೇಶ್ವರನ ವರದಿಂದ ಜನಿಸಿದನು.

ಕುಮಾರರಾಮನ ಆಳ್ವಿಕೆಯ ಕಾಲ ಕ್ರಿ.ಶ.೧೩೨೭.ರಲ್ಲಿ ಸುಲ್ತಾನನಿಗೆ ಸಿಂಹ ಸ್ವಪ್ನವಾಗಿ ಮೆರೆದ ಈ ಗಂಡುಗಲಿಯ ಬಗ್ಗೆ ನಂಜುಂಡ ಕವಿ ಕುಮಾರರಾಮನನ್ನು, 'ಅರ್ಜುನನ ಅವತಾರ'ವೆಂದು ರಾಮನಾಥ ಚರಿತದಲ್ಲಿ ವರ್ಣಿಸಿದರೆ, ಕವಿ ಪಾಂಚಾಳಗಂಗನು ಕುಮಾರರಾಮನು 'ಜಟ್ಟಾಂಗಿರಾಮನ ಅವತಾರ'ವೆಂದು ತನ್ನ ಚೆನ್ನರಾಮನ ಸಾಂಗತ್ಯದಲ್ಲಿ ಹೊಗಳಿರುವನು. ಕವಿ ಮಹಾಲಿಂಗಸ್ವಾಮಿಯು ಕುಮಾರರಾಮನನ್ನು 'ಪರಶುರಾಮನ ಅವತಾರ'ವೆಂದು ತನ್ನ ಬಾಲರಾಮನ ಸಾಂಗತ್ಯದಲ್ಲಿ ಕರೆದಿರುವನು. ಈ ಮೂರು ಕಾವ್ಯಗಳು ಐತಿಹಾಸಿಕ ದೃಷ್ಟಿಯಿಂದ ತುಂಬ ಮೌಲ್ಯ ಮುಕ್ತ ಕೃತಿಗಳೆನಿಸಿವೆ.

ಕಂಪಿಲರಾಯನ ಮಗ ಕುಮಾರರಾಮನು ಪ್ರಾಪ್ತ ವಯಸ್ಕನಾಗಲು ಕಂಪಿಲನು ಈತನಿಗೆ ಐದು ಕನ್ಯೆಯರನ್ನು ತಂದು ಲಗ್ನ ಮಾಡಿದನು. ಅವರಲ್ಲಿ ಹಿರಿಯಮ್ಮ ಮತ್ತು ಮರಿಯಮ್ಮ ಎಂಬ ಇಬ್ಬರ ಹೆಸರು ಮಾತ್ರ ತಿಳಿದುಬರುತ್ತದೆ. ಕಂಪಿಲನ ಬೇರೊಬ್ಬ ಪತ್ನಿಯಲ್ಲಿ ಜನಿಸಿದ

ಭೈರವ ಅಂದರೆ ಅಣ್ಣ ಭೈರವ ಮತ್ತು ಹರಿಯಮ್ಮನ ಸಾಕು ಮಗನಾದ ಕಾಟಣ್ಣ ಎಂಬ ಇಬ್ಬರು ಮಲ ಸಹೋದರರು ಮತ್ತು ಮಾರಮ್ಮ ಹಾಗೂ ಸಿಂಗಮ್ಮ ಎಂಬ ಇಬ್ಬರು ಸಹೋದರಿಯರಿದ್ದರು. ಅಲ್ಲದೆ ಎಪ್ಪತ್ತೇಳು ಸಮವಯಸ್ಕರಾದ ಮನ್ನೆಯರ ಬಾಲಕರು ರಾಮನಾಥನಿಗೆ ಆ ಮರಣಾಂತ ಜೀವದ ಗೆಳೆಯರಾಗಿದ್ದರು. ಈತನು ಹದಿನಾರು ವರ್ಷ ತುಂಬುವ ಹೊತ್ತಿಗೆ ಅಸಮ ವೀರನಾಗಿದ್ದನು ಎಂದು ತಿಳಿದುಬರುತ್ತದೆ.

ಹಂಪಿಯ ಹೇಮಕೂಟದಲ್ಲಿಯ ಪ್ರಸನ್ನ ವಿರೂಪಾಕ್ಷ ದೇವಸ್ಥಾನದ ಬಳಿಯಲ್ಲಿಯ ಶಾಸನದ ಉಲ್ಲೇಖದಂತೆ ಕಂಪಿಲರಾಯನು ಮುಮ್ಮಡಿ ಸಿಂಗೆಯನಾಯಕ-ಮಾದನಾಯಕಿತಿಯರ ಪುತ್ರನೆಂದು ಹೇಳಲಾಗಿದೆ. ಈ ವೀರ ಕಂಪಿಲರಾಯನು ತಮ್ಮ ತಾಯಿ ಮಾದನಾಯಕಿತಿ ಮತ್ತು ತಂದೆ ಸಿಂಗೆಯನಾಯಕ, ಪೆರಮೆಯನಾಯಕ ಇವರಿಗೆ ಪುಣ್ಯವಾಗಲಿಯೆಂದು ಶಿವಾಲಯ ಮಾಡಿಸುತ್ತಾನೆ ಎಂದಿದೆ. ಇಲ್ಲಿಯ ಪೆರಮೆಯನಾಯಕ ಯಾರೆಂದು ತಿಳಿದುಬರುವುದಿಲ್ಲ. ಬಹುಶಃ ಈ ವ್ಯಕ್ತಿಯು ಕಂಪಿಲರಾಯನ ಅಜ್ಜನಾಗಿರಬೇಕು. ಒಟ್ಟಿನಲ್ಲಿ ಈ ಶಾಸನದ ಹೇಳಿಕೆಯಂತೆ ಇವರ ವಂಶಾವಳಿಯನ್ನು ಹೀಗೆ ನಿರೂಪಿಸಬಹುದು.




ಸಂಡೂರು ತಾಲ್ಲೂಕಿನ ರಾಮಘಡದ ಕ್ರಿ.ಶ.೧೫೨೭ರ ಶಾಸನದ ಉಲ್ಲೇಖದಂತೆ ಮುಮ್ಮಡಿ ಸಿಂಗೆಯನಾಯಕನ ವಂಶಾವಳಿಯನ್ನು ಹೀಗೆ ನೋಡಬಹುದು.



ಹೀಗೆ ಈ ಉಪಲಬ್ಧ ಶಾಸನದ ಆಧಾರದಂತೆ ಈ ವಂಶದ ಮೂಲ ಪುರುಷ ಸಿಂಗೆಯನಾಯಕನೆ ಎಂದು ತಿಳಿದುಬರುತ್ತದೆ. ಮುಮ್ಮಡಿ ಸಿಂಗೆಯನಾಯಕ ಅವನ ಮಗ ಕಂಪಿಲರಾಯ ಅಥವಾ ಖಂಡೇರಾಯ ಮತ್ತು ಕಂಪಿಲರಾಯನ ಮಗ ಕುಮಾರರಾಮ ಇವರು ಶಾಸನೋಕ್ತರಾದ ಈ ವಂಶದ ವ್ಯಕ್ತಿಗಳು. ಶಾಸನಗಳಲ್ಲಿ ಕುಮಾರರಾಮನನ್ನು 'ರಾಮನಾಥ' ಎಂದು ಕರೆದರೆ ಜನಪದರಲ್ಲಿ ಕುಮಾರರಾಮನೆಂದೇ ಪ್ರಸಿದ್ಧನಾಗಿರುವುದನ್ನು ಕಾಣುತ್ತೇವೆ. ಶಾಸನಗಳಷ್ಟೇ ಅಲ್ಲದೆ ಕಾವ್ಯಗಳು ಹಾಗೂ ಭಟ್ಟರಹಳ್ಳಿ, ಅಂತಾಪುರ, ಕಂಪಲಿ, ದರೋಜಿ, ಕುರುಗೋಡು ತಾಲ್ಲೂಕುಗಳ ಕೈಫಿಯತ್ತುಗಳಲ್ಲಿಯು ಈ ಅರಸರ ವಂಶಾವಳಿಯ ಬಗ್ಗೆ ಉಲ್ಲೇಖವಿದೆ. ಈ ಎಲ್ಲಾ ಉಪಲಬ್ಧ ಆಧಾರಗಳಿಂದ ಈ ವಂಶದ ಪ್ರಥಮ ದೊರೆ ಮುಮ್ಮಡಿ ಸಿಂಗೆಯನಾಯಕನೇ ಎಂದು ತಿಳಿದುಬರುತ್ತದೆ.

ಸಂಡೂರಿನ ಈ ಪ್ರದೇಶಕ್ಕೆ ರಾಮಘಡ ಎಂದು ಹೆಸರು ಬರಲು ಕಾರಣ ಕಂಪಿಲನ ಮೊದಲ ಹೆಂಡತಿಯ ಮಗನಾದ ಕುಮಾರರಾಮನನ್ನು, ಆತನ ಮಲತಾಯಿಯಾದ ರತ್ನಾಜಿಯು ಅವನನ್ನು ಮೋಹಿಸಿದಾಗ ಅದನ್ನು ಕುಮಾರರಾಮ ಪ್ರತಿಭಟಿಸುತ್ತಾನೆ. ಅತೃಪ್ತಳಾದ ರತ್ನಾಜಿ ತನ್ನ ಪತಿಗೆ ಸಲ್ಲದ ಮಾತನ್ನು ಹೇಳಿ ಕುಮಾರರಾಮನ ಶಿರಚ್ಛೇದವಾಗಬೇಕೆಂದು ಬಯಸುತ್ತಾಳೆ. ಆಗ ಬುದ್ಧಿವಂತ ಮಂತ್ರಿ ಬೈಚಪ್ಪನಾಯಕನು ಕುಮಾರರಾಮನನ್ನು ಕರೆದು ತಂದು ಈ ಬೆಟ್ಟದಲ್ಲಿ ಅಡಗಿಸಿಟ್ಟು ಅವನ ಶಿರಚ್ಛೇದನ ಮಾಡಿರುವುದಾಗಿ ಹೇಳುತ್ತಾನೆ. ಹೀಗೆ ಕುಮಾರರಾಮನನ್ನು ತಂದು ಇಲ್ಲಿ ಅಡಗಿಸಿಟ್ಟಿದ್ದರಿಂದ ಈ ಬೆಟ್ಟಕ್ಕೆ 'ರಾಮಘಡ' ಎಂಬ ಹೆಸರು ಬಂದಿದೆ.

ಜಟಂಗಿರಾಮೇಶ್ವರ ಬೆಟ್ಟದಲ್ಲಿಯೂ ಇದೆ ವಿಷಯದ ಬಗ್ಗೆ ಮಾಹಿತಿ ದೊರೆಯುತ್ತದೆ. ವೀರಭದ್ರ ದೇವಾಲಯದ ಹಿಂಬದಿಯಲ್ಲಿರುವ ಬಂಡೆಗಳಲ್ಲಿನ ಕೆಳಭಾಗದಲ್ಲಿ ಒಂದು ಗುಹೆಯಿದೆ. ಇದನ್ನು ಕುಮಾರರಾಮನ ಗರಡಿ ಮನೆಯೆಂದೇ ಕರೆಯುವರು. ಈ ಕುಮಾರರಾಮನ ಗರಡಿ ಮನೆಗೆ ವಿಶೇಷವಾದ ಮಹತ್ವವಿದೆ. ಭಟ್ಟರಹಳ್ಳಿಯ ಕೈಫಿಯತ್ತಿನಲ್ಲಿ ಈ ಗುಹೆಯನ್ನು ಉಲ್ಲೇಖಿಸಲಾಗಿದೆ. ಕುಮಾರರಾಮನ ತಲೆ ಕಡಿದು ತರಬೇಕೆಂಬ ಕಂಪಿಲರಾಯನ ಆಜ್ಞೆಯ ಅನುಸಾರ ಮಂತ್ರಿ ಬೈಚಪ್ಪನು ತನ್ನ ಮನಸ್ಸಿನಲ್ಲಿ ಯೋಚನೆ ಮಾಡಿದ್ದು, 'ಕೊಮಾರ ರಾಮನಾವೊಂದು ಸ್ಥಳದಲ್ಲಿಯಿಟ್ಟು' ಯೀತನ ಪ್ರಾಣ ತಪ್ಪಿಸಬೇಕೆಂದು ಗುಮ್ಮಟದ ಬಳಿಯ ಜಟಂಗೀಶ್ವರ ಗುಡಿಯ ಬಳಿ ನೆಲಮಾಳಿಗೆ ಮಾಡಿ ಪ್ರಕಟವಾಗದಂತೆಯಿಡಬೇಕೆಂದು ಯೋಚನೆ ಮಾಡಿ ಅದೇ ಪ್ರಕಾರ ನೆಲಮಾಳಿಗೆ ಮಾಡಿಸಿ ಅಲ್ಲಿ ಕುಮಾರರಾಮನ ಇನ್ನೂ ಕೆಲವು ಮಂದಿನಾ ಕುಮಾರರಾಮನ ಸಂಗಡಯಿಟ್ಟನು ಎಂದು ಹೇಳಿದೆ.

ಭಟ್ಟರಹಳ್ಳಿಯ ಕೈಫಿಯತ್ತಿನಲ್ಲಿ ಹೇಳಿರುವಂತೆ ಈ ನೆಲಮಾಳಿಗೆಯಲ್ಲಿದ್ದ ಇತರರೆಂದರೆ ಕುಮಾರರಾಮನೊಂದಿಗೆ ಆತನ ಅಣ್ಣ ಕಾಟಣ್ಣ ಲಿಂಗ, ಕೋಳಿಯನಾಗ, ಶಿಂಗಯ್ಯ, ಮುಮ್ಮಡಿಯಪ್ಪ ಇದ್ದರು. ಈ ನೆಲಮಾಳಿಗೆಯನ್ನು ಉಪ್ಪಾರ ಸಿಂಗಯ್ಯನೆಂಬುವವನು ತೋಡಿಸಿದನೆಂದು ಇದೇ ಕಾವ್ಯದಿಂದ ತಿಳಿದುಬರುತ್ತದೆ. ನಂಜುಂಡ ಕವಿಯ ರಾಮನಾಥ ಚರಿತದಲ್ಲೂ ಕುಮಾರರಾಮನನ್ನು ನೆಲಮಾಳಿಗೆಯಲ್ಲಿ ಇಟ್ಟ ವಿಷಯ ತಿಳಿದುಬರುತ್ತದೆ.

ಒಟ್ಟಿನಲ್ಲಿ ರತ್ನಾಜಿಯ ಕುತಂತ್ರದಿಂದ ಕಂಪಿಲರಾಯನ ಮಗನ ಶಿರಚ್ಛೇದವಾಗುವಂತೆ ಆಜ್ಞೆ ಮಾಡುತ್ತಾನೆ. ಆದರೆ ಮಂತ್ರಿ ಬೈಚಪ್ಪ ಕುಮಾರರಾಮನ ಜೀವ ಉಳಿಸುವ ಸಲುವಾಗಿ ಅಡಗಿಸಿಟ್ಟ ಸ್ಥಳಗಳ ಕುರಿತು ರಾಮಘಡ ಮತ್ತು ಜಟಂಗಿರಾಮೇಶ್ವರ ಈ ಎರಡೂ ಬೆಟ್ಟಗಳಲ್ಲಿ ಈ ಒಂದೇ ವಿಷಯದ ಬಗ್ಗೆ ಮಾಹಿತಿ ಲಭ್ಯವಿದೆ. ರಾಮಘಡದಲ್ಲಿ ಇಂದಿಗೂ ಕುಮಾರರಾಮನ ಕಾಲದಲ್ಲಿಯ ಕೋಟೆ–ಕೊತ್ತಲ, ಸ್ಮಾರಕ ಇತ್ಯಾದಿ ಸಾಮಾಗ್ರಿಗಳು ಇರುವ ಬಗ್ಗೆ ನಮಗೆ ಸ್ಪಷ್ಟ ಮಾಹಿತಿ ಲಭಿಸುತ್ತದೆ. ಆದ್ದರಿಂದ ಕುಮಾರರಾಮನನ್ನು ಅಡಗಿಸಿಟ್ಟ ಬೆಟ್ಟ ರಾಮಘಡವೇ ಆಗಿರಬೇಕು ಎಂದು ಹೇಳಬಹುದು. ಆದರೆ ಜಟಂಗಿರಾಮೇಶ್ವರದಲ್ಲಿಯ ಕುಮಾರರಾಮನ ಗರಡಿ ಮನೆಯೇ ಕುಮಾರರಾಮನನ್ನು ಅಡಗಿಸಿಟ್ಟ ಬೆಟ್ಟ ಎಂಬುದಕ್ಕೆ ಯಾವುದೇ ಐತಿಹಾಸಿಕ ಆಕರಗಳು ಲಭಿಸುವುದಿಲ್ಲ. ಕೈಫಿಯತ್ತು, ಸಾಂಗತ್ಯ, ಕಾವ್ಯಗಳಲ್ಲಿ ತಿಳಿಸುವಂತೆ ಕುಮಾರರಾಮನು ಜಟಂಗಿರಾಮೇಶ್ವರನ ವರದಿಂದ ಜನಿಸಿದನು ಎಂಬುದನ್ನು ಹೊರತು ಪಡಿಸಿದರೆ ಇಲ್ಲಿನ ಮಗೆಸಿಗುವ ಆಕರ ಎಂದರೆ ಕುಮಾರರಾಮನ ಗರಡಿ ಮನೆಯೊಂದೆ.

ಇಲ್ಲಿ ಸ್ಪಷ್ಟವಾಗಿ ಗಮನಿಸಬಹುದು ಕುಮಾರರಾಮನನ್ನು ಅಡಗಿಸಿಟ್ಟ ಸ್ಥಳಕ್ಕೆ 'ಕುಮಾರರಾಮನ ಗರಡಿಮನೆ' ಎಂದಿರುವುದನ್ನು. ಇಲ್ಲಿ 'ಗರಡಿಮನೆ' ಎಂದರೆ ಕುಸ್ತಿಪಟುಗಳಿಗಾಗಿ ನಿರ್ಮಿಸಿದ ಮನೆ ಎಂಬ ಅರ್ಥ ಬರುತ್ತದೆ. ಬಹುಶಃ ಇದು ಕುಮಾರರಾಮನ ಕಾಲದಲ್ಲಿ ಕುಸ್ತಿಪಟುಗಳಿಗಾಗಿ ನಿರ್ಮಿಸಲಾದ ಗರಡಿ ಮನೆಯಾಗಿದ್ದಿರಬೇಕು. ಆದರೆ ಸ್ಥಳೀಯರು ಅದನ್ನು ಇಂದು ಕುಮಾರರಾಮನನ್ನು ಅಡಗಿಸಿಟ್ಟ ಬೆಟ್ಟ ಅಥವಾ ಗುಹೆ ಇದೆ ಎಂದು ನಂಬಿರಬೇಕು.

ಕಂಪಿಲರಾಯ ಮತ್ತು ಆತನ ಪುತ್ರ ಕುಮಾರರಾಮ ಅನೇಕ ಯುದ್ಧಗಳನ್ನು ಮಾಡಿರುವುದರ ಕುರಿತು ಶಾಸನ ಮತ್ತು ಕಾವ್ಯಗಳಿಂದ ತಿಳಿದುಬರುತ್ತದೆ. ವೀರ ಬಲ್ಲಾಳನ ಊರು ಕೇರಿಗಳನ್ನು ಕೊಳ್ಳೆ ಹೊಡೆದುದರಿಂದ ಅವನೊಡನೆ ವೈರತ್ವವು ಬೆಳೆಯಿತು. ಬೊಲ್ಲನೆಂಬ

ಕುದುರೆಯನ್ನು ಹಿಡಿದು ತಂದುದರಿಂದ ಪ್ರತಾಪರುದ್ರನೊಡನೆ ಹಗೆತನವನ್ನು ಕಟ್ಟಿಕೊಂಡಂತಾಯಿತು. ಬಹದ್ದೂರ್ ಖಾನನಿಗೆ ಆಶ್ರಯ ಕೊಟ್ಟಿದ್ದರಿಂದ ಸುಲ್ತಾನನೊಡನೆ ವಿರೋಧ ಕಟ್ಟಿಕೊಳ್ಳಬೇಕಾಯಿತು. ಕುಮ್ಮಟದ ನಾಯಕರ ಆಳ್ವಿಕೆಗೊಳಪಟ್ಟಿದ್ದ ಸಂಡೂರು ತಾಲ್ಲೂಕಿನ ದೊರವಡಿ ಮತ್ತು ಹೊಸಮಲೆದುರ್ಗಗಳ ಕುರಿತು ಹಾಗೂ ಈ ಪಟ್ಟಣಗಳಲ್ಲಿ ಜರುಗಿದ ಯುದ್ಧಗಳ ವಿಷಯಕ್ಕೆ ಮಾತ್ರ ಹೆಚ್ಚು ಒತ್ತು ನೀಡಲಾಗಿದ್ದು ಅವುಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

ಸಂಡೂರು ತಾಲ್ಲೂಕಿನ ರಾಮಘಡದ ಕ್ರಿ.ಶ.೧೩೨೩ರ ವೀರಗಲ್ಲು ಶಾಸನವು ಹೊಯ್ಸಳರ ಮತ್ತು ಕುಮ್ಮಟ ಅರಸರ ಸಂಬಂಧವನ್ನು ಕುರಿತು ಮಹತ್ವದ ಬೆಳಕು ಚೆಲ್ಲುತ್ತದೆ. ಕಂಪಿಲನ ರಾಜಧಾನಿ ಕುಮ್ಮಟ ದುರ್ಗವಾಗಿದ್ದರೂ ಸಂಡೂರು-ಹೊಸಪೇಟೆ ಮಾರ್ಗ ಮಧ್ಯೆ ಹಬ್ಬಿರುವ ಬೆಟ್ಟದ ಮೇಲೆ ಮತ್ತೊಂದು ಭದ್ರವಾದ ಕೋಟೆಯನ್ನು ಕಟ್ಟಿ ಅದಕ್ಕೆ ಹೊಸಮಲೆ ದುರ್ಗವೆಂಬ ಹೆಸರನ್ನು ಇಡುತ್ತಾನೆ. ಇದನ್ನು ಈಗ ರಾಮಘಡವೆಂದು ಕರೆಯುತ್ತಾರೆ. ಜನರು ಆಡು ಮಾತಿನಲ್ಲಿ ರಾಮನಮಲೈ ಗುಡ್ಡವೆಂದು ಕರೆಯುತ್ತಾರೆ. ಇದರಿಂದ ವ್ಯಕ್ತವಾಗುವುದೇನೆಂದರೆ ಕುಮ್ಮಟದುರ್ಗ ಮತ್ತು ಹೊಸಮಲೆದುರ್ಗಗಳು ಕಂಪಿಲರಾಯನ ರಾಜಧಾನಿಗಳಾಗಿದ್ದವು ಎಂಬುದು. ಕ್ರಿ.ಶ.೧೩೨೩ರ ವೀರಗಲ್ಲು ಶಾಸನದಲ್ಲಿ 'ಶ್ರೀವೀರ ಕಂಪಿಲದೇವನ ಮೇಲೆ ಬಲ್ಲಾಳ ರಾಯನು(ದಂಡೆತ್ತಿ) ಬಂದಲ್ಲಿ ಇಬ್ಬರು ದಾಯದ ದಂಡಿನೊಳಗೆ ದಂಡಿನ ಬಯಿಚಯ್ಯನು' ಎಂದು ಉಲ್ಲೇಖವಿದೆ.

ಅಂದರೆ ಹೊಯ್ಸಳ ವೀರಬಲ್ಲಾಳನು ತಾನೇ ಸೈನ್ಯ ಸಮೇತನಾಗಿ ಮತ್ತೊಮ್ಮೆ ದೊರವಡಿಗೆ ಬಂದು ಕಂಪಿಲರಾಯನೊಂದಿಗೆ ಯುದ್ಧ ಮಾಡುತ್ತಾನೆ. ಈ ಯುದ್ಧದಲ್ಲಿ ಇವರೀರ್ವರು ನೇರವಾಗಿ ಭಾಗವಹಿಸಿದುದನ್ನು ಈ ಶಾಸನವು ತಿಳಿಸುತ್ತದೆ. ಹೀಗೆ ಕಂಪಿಲನು ರಕ್ಷಣೆಯ ಮತ್ತು ಸೌಲಭ್ಯದ ದೃಷ್ಟಿಯಿಂದ ಸಂಡೂರು ಅರಣ್ಯ ಪ್ರದೇಶದಲ್ಲಿ ಹೊಸದಾಗಿ ಗಿರಿದುರ್ಗವನ್ನು ನಿರ್ಮಿಸಿ, ಅದನ್ನು ಹೊಸಮಲೆ ದುರ್ಗವೆಂದು ಕರೆದು ತನ್ನ ಮತ್ತೊಂದು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ತಿಳಿದುಬರುತ್ತದೆ.

ಸೇವುಣ ರಾಮಚಂದ್ರನ ಮರಣ ನಂತರ ಕಂಪಿಲದೇವನು ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ, ಅನಂತಪುರ, ಧಾರವಾಡ ಮತ್ತು ರಾಯಚೂರು ಜಿಲ್ಲೆಗಳ ಭಾಗಗಳನ್ನು ಒಳಗೊಂಡಂತೆ ತನ್ನ ಸಣ್ಣ ರಾಜ್ಯವನ್ನು ಸರಿಸಮವಾಗಿ ವಿಸ್ತರಿಸಿದ. ಇವನು ಕ್ರಿ.ಶ.೧೩೧೪ರಲ್ಲಿ ಅಲ್ಲಾವುದ್ದೀನ್

ಖಿಲ್ಜಿಯ ಸೇನಾನಿಯಾದ ಮಲಿಕ್ ಕಾಫೂರನ ದಾಳಿಯನ್ನು ಎದುರಿಸಬೇಕಾಯಿತು. ಕ್ರಿ.ಶ.೧೩೨೦ರಲ್ಲಿ ಮೂರನೆಯ ಬಲ್ಲಾಳನು ಈ ಪ್ರದೇಶದ ಸಮೀಪವಿರುವ ದೊರವಾಡಿಯಲ್ಲಿ ಕಂಪಿಲದೇವನನ್ನು ಸೋಲಿಸಿ ದೊರವಾಡಿ ಮತ್ತು ಕಂಪಿಲಿಗಳನ್ನು ವಶಪಡಿಸಿಕೊಂಡನೆಂದು ತಿಳಿದುಬರುತ್ತದೆ. ಇದಕ್ಕೆ ಆಧಾರ ಮೂರನೇ ಬಲ್ಲಾಳನು ಕ್ರಿ.ಶ.೧೩೨೦ರಲ್ಲಿ ಹಂಪೆಯ ಹೊಸ ಪಟ್ಟಣದಲ್ಲಿದ್ದನೆಂದು ಶಾಸನವೊಂದು ತಿಳಿಸುತ್ತದೆ. ಬಲ್ಲಾಳನು ಕಂಪಿಲನನ್ನು ಸೋಲಿಸಿದರೂ ಯಾವುದೇ ಪ್ರದೇಶವನ್ನು ಪಡೆಯಲಾಗಲಿಲ್ಲ ಎಂದು ಪಿ.ಬಿ.ದೇಸಾಯಿಯವರು ಅಭಿಪ್ರಾಯ ಪಡುತ್ತಾರೆ. ಮತ್ತೊಂದೆಡೆ ಕುಮ್ಮಟರು ಕಾಕತೀಯ ಪ್ರತಾಪರುದ್ರನ ಆಕ್ರಮಣವನ್ನು ಎದುರಿಸಬೇಕಾಯಿತು.

ಹೀಗೆ ಕುಮ್ಮಟ ರಾಜ್ಯದ ಕತೆಯು ಶೌರ್ಯ ಸಾಹಸಗಳ ನಿರೂಪಣೆಯಾಗಿದೆ. ಕಂಪಿಲದೇವನು ದಕ್ಷಿಣ ಭಾರತದಲ್ಲಿ ಬೆಳೆಯುತ್ತಿದ್ದ ವಿದೇಶಿ ಶಕ್ತಿಯ ಪ್ರಬಲ ವಿರೋಧಿಯಾಗಿದ್ದನು. ಕ್ರಿ.ಶ.೧೩೧೪-೧೫ರ ಮಲ್ಲಿಕ್ ಕಾಫೂರನ ದಂಡಯಾತ್ರೆಯು ಯಶಸ್ವಿಯಾಗಲಿಲ್ಲ. ನಂತರದ ಕಾಲದಲ್ಲಿ ಮಹಮದ್ ಬಿನ್ ತುಘಲಕ್‌ನ ಅಧಿಕಾರಿಗಳ ಕಪ್ಪಕಾಣಿಕೆಗಳ ಬೇಡಿಕೆಯನ್ನು ತಿರಸ್ಕರಿಸಿದನು. ಅಲ್ಲಿಂದ ಮುಂದೆ ೧೦ ವರ್ಷಗಳಲ್ಲಿ ಈ ರಾಜ್ಯವು ಅಭಿವೃದ್ಧಿ ಸಾಧಿಸಿದರೂ ಕೊನೆಗೆ ದೆಹಲಿಯ ಸುಲ್ತಾನನ ದಾಳಿಗೆ ಕುಮ್ಮಟದುರ್ಗ, ಹೊಸಮಲೆದುರ್ಗ ಮತ್ತು ದೊರವಡಿ ಕೋಟೆಗಳು ನೆಲ ಕಚ್ಚಿದವು. ಒಟ್ಟಾರೆಯಾಗಿ ಹೇಳುವುದಾದರೆ ದೆಹಲಿ ಸುಲ್ತಾನನೊಡನೆ ರಾಜಿ ಮಾಡಿಕೊಳ್ಳದೆ ತನ್ನ ಪ್ರಾಣವನ್ನೇ ಅರ್ಪಿಸಿದ ರಾಮನಾಥನು ತನ್ನ ಶೌರ್ಯ, ಪರಾಕ್ರಮ ಮತ್ತು ಆದರ್ಶ ಗುಣಗಳಿಂದಾಗಿ ಜನತೆಯ ಪಾಲಿಗೆ ದೈವಾಂಶ ಸಂಭೂತವಾಗಿ ಗೋಚರಿಸಿದ ಇದು ಅವನ ಆರಾಧನೆಗೆ ದಾರಿ ಮಾಡಿಕೊಟ್ಟಿತು.

ಕುಮಾರರಾಮನ ಸೋಲು ಹಾಗೂ ಮರಣಕ್ಕೆ ಕಾರಣಳಾದ ದೆಹಲಿಯ ಸುಲ್ತಾನನ ಸೇನೆಯ ನಾಯಕಿಯ ಬಗ್ಗೆ ಒಂದು ಪರ್ಶಿಯನ್ ಮೂಲದಿಂದ ದೊರೆತ ಮಾಹಿತಿಯ ಆಧಾರದಂತೆ ಇದನ್ನು ಈಟನ್ ಎಂಬ ಅಮೇರಿಕನ್ ವಿದ್ವಾಂಸರು ಉಲ್ಲೇಖಿಸಿದ್ದಾರೆ. ಸೋಲ್ಲಾಪುರ ಜಿಲ್ಲೆಯ ಸಾಗರ್ ಎಂಬ ಊರಲ್ಲಿ ನೆಲೆನಿಂತ ಸೂಫಿ, ಸಂತನೆನಿಸಿದ ಶೇಕ್ಸರ್ಮಸ್ತನ ವಿಚಾರ ತಾರಿಖ್-ಯಿ-ಔಲಿಯ ಎಂಬ ಗ್ರಂಥದಲ್ಲಿ ಹೇಳಿದೆ. ಅದರಂತೆ 'ಕುಮಾರಾಮ್'ನ ವಿರುದ್ಧ ನಡೆದ ಹೋರಾಟದಲ್ಲಿ ಈ ಸರ್ಮಸ್ತು ಮುಖ್ಯ ಪಾತ್ರವಹಿಸಿದ ಅವನ ಮಗಳು ಕುಮಾರರಾಮನನ್ನು ಕೊಂದಳು ಎಂದು ಮೇಲೆ ಹೇಳಿದ ಕೃತಿ ತಿಳಿಸುತ್ತದೆ. ಅಲ್ಲದೆ ಕುಮಾರರಾಮನು ಉಗ್ರ ಮುಸ್ಲಿಂ ದ್ವೇಷಿಯಾಗಿದ್ದ ಎಂದು ಈ ಸಂತರ ಕಥಾನಕದಲ್ಲಿ ಬಣ್ಣಿಸಿದೆ.

ಆದರೆ ರಾಮಶರ್ಮರ ಹೇಳಿಕೆಯಂತೆ ಸುಲ್ತಾನನ ಸೇನಾನಾಯಕರು ಅನೇಕ ಬಾರಿ ಕುಮ್ಮಟಕ್ಕೆ ಮುತ್ತಿಗೆ ಹಾಕಿದರೂ ಅದನ್ನು ಜಯಿಸಲಾಗಲಿಲ್ಲ. ಆದರೆ ಮಾತಂಗಿ ಎಂಬ ಸುಲ್ತಾನನ ರಾಣಿ ವಾಸದ ದ್ವಾರಪಾಲಕಿಯಾದ ಒಬ್ಬ ಹೆಂಗಸು ಕುಮ್ಮಟವನ್ನು ಜಯಿಸಿ ಕುಮಾರರಾಮನ ಶಿರವನ್ನು ತೆಗೆದುಕೊಂಡು ಹೋದ ಬಗ್ಗೆ ತಿಳಿದುಬರುತ್ತದೆ. ಒಟ್ಟಾರೆಯಾಗಿ ಕುಮಾರರಾಮನು ಹೆಂಗೊಲೆಗೆ ಹೇಸಿ ಬಿಟ್ಟಿದ್ದರಿಂದ ಅವನು ತನ್ನ ಪ್ರಾಣವನ್ನೇ ಕಳೆದುಕೊಳ್ಳಬೇಕಾಯಿತು.

**ವಿಜಯನಗರದ ಅರಸರು**

ಕುಮ್ಮಟದುರ್ಗ ಮತ್ತು ಹೊಸಮಲೆ ದುರ್ಗಗಳಿಗೆ ತಾಕಿದ ಜ್ವಾಲೆಯಿಂದ ವಿಜಯನಗರದಂಥಾ ಬಲಿಷ್ಠ ಸಾಮ್ರಾಜ್ಯವು ೧೩೩೬ರಲ್ಲಿ ಅಂದರೆ ಮೇಲಿನ ರಾಜಧಾನಿಗಳು ಪತನಗೊಂಡ ಕೇವಲ ಒಂಭತ್ತು ವರ್ಷಗಳ ತರುವಾಯ ಉದಯಿಸಿತು. ಹುಲ್ಲೂರು ಶ್ರೀನಿವಾಸ ಜೋಯಿಸರು, ಕುಮಾರರಾಮನ ಆಸ್ಥಾನದಲ್ಲಿದ್ದ ಭಂಡಾರಿ ಹರಿಹರ ಬುಕ್ಕರೇ ವಿಜಯನಗರ ಸಾಮ್ರಾಜ್ಯದ ಸ್ಥಾಪಕರು; ಕುಮ್ಮಟ ರಾಜ್ಯದ ವಿನಾಶವೇ ವಿಜಯನಗರದ ಮೂಲವೆಂಬುದು ಕುಮಾರರಾಮನ ಸಾಂಗತ್ಯಗಳಿಂದ ವ್ಯಕ್ತವಾಗುತ್ತವೆಂದು ಬರೆದಿದ್ದಾರೆ.

'ಕುಮ್ಮಟದುರ್ಗ' ಎಂಬ ಇನ್ನೊಂದು ಸಂಪ್ರಬಂಧ ಪ್ರಕಟಿಸಿರುವ (ವಿಜಯನಗರ ಪ್ರೋಗ್ರೆಸ್ ಆಫ್ರಿಸರ್ಚ್; ೧೯೮೭-೮೮) ಚೆನ್ನಬಸಪ್ಪ ಪಾಟೀಲರು, ಕಂಪಿಲನು ಕುಮ್ಮಟದುರ್ಗವನ್ನು ತನ್ನ ವಶದಲ್ಲಿರಿಸಿಕೊಂಡಿದ್ದು ೨೫ ವರ್ಷಗಳಷ್ಟು ಅಲ್ಪಕಾಲಾವಧಿಗೆ ಮಾತ್ರ ಎಂದು ತೋರಿಸಿದ್ದಾರೆ. ಕುಮ್ಮಟವು ಕ್ರಿ.ಶ.೧೩೨೬-೨೭ರಲ್ಲಿ ಪತನಗೊಂಡಿತು. ಒಂಭತ್ತು ವರ್ಷಗಳ ತರುವಾಯ ವಿಜಯನಗರವು ಕುಮ್ಮಟ ಮತ್ತು ಹೊಸಮಲೆ ದುರ್ಗಗಳ ಮಧ್ಯದ ಭೂಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದಿತು. ಇದರಿಂದ ತಿಳಿದುಬರುವುದು ಏನೆಂದರೆ ಕಂಪಿಲನ ಸಂಸ್ಥಾನದೊಡನೆ ನಿಕಟ ಸಂಬಂಧ ಹೊಂದಿದವರೇ ವಿಜಯನಗರದ ಸ್ಥಾಪನೆಯಲ್ಲಿಯೂ ಪ್ರಮುಖ ಪಾತ್ರವಹಿಸಿರಬೇಕು ಎಂದು ತಿಳಿದುಬರುತ್ತದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಸಂಡೂರು ವಿಶೇಷ ಪಾತ್ರವಹಿಸಿತ್ತು. ಇವರ ಕಾಲದಲ್ಲಿ ಸಂಡೂರು ಒಂದು ಪ್ರಮುಖ ಪಟ್ಟಣವಾಗಿತ್ತು ಹಾಗೂ ಈ ತಾಲ್ಲೂಕಿನ ಸುತ್ತಮುತ್ತಲಿನ ಕೆಲವು ಗ್ರಾಮಗಳಲ್ಲಿ ಅವರ ಕಾಲದ ಶಾಸನಗಳು ಕಂಡುಬರುತ್ತವೆ. ಸಂಡೂರು ಪಟ್ಟಣದ ಮಧ್ಯದಲ್ಲಿ ತಾರಕೇಶ್ವರ ದೇವಸ್ಥಾನದ ಸಮೀಪದಲ್ಲಿ ಕೃಷ್ಣದೇವರಾಯನ ಅವಧಿಯ ಕ್ರಿ.ಶ.೧೫೪೪ರ ಶಿಲಾಶಾಸನವಿದೆ. ರಾಮಘಡದಲ್ಲಿಯೂ ಕೃಷ್ಣದೇವರಾಯನ ಶಾಸನವಿದೆ.

ಕುಮಾರರಾಮನ ಸ್ಮರಣೆಗಾಗಿ ಬೈಚಪ್ಪನಾಯಕ ಕಟ್ಟಿಸಿದ ಕುಮಾರರಾಮನ ದೇವಸ್ಥಾನವನ್ನು ಶ್ರೀ ಕೃಷ್ಣದೇವರಾಯ ದುರಸ್ತಿ ಮಾಡಿಸಿದನೆಂದು ತಿಳಿದುಬರುತ್ತದೆ.

ಕ್ರಿ.ಶ.೧೫೨೩ರ ಕುರೆಕುಪ್ಪೆಯ ಸಂಸ್ಕೃತ ಶಾಸನ ಮತ್ತು ಇನ್ನೊಂದು ಕನ್ನಡ ಶಾಸನಗಳಲ್ಲಿ ಕೃಷ್ಣದೇವರಾಯನ ಉಲ್ಲೇಖವಿದ್ದು ಹೆಗ್ಗರಸನ ಮಗ ಬೆನಕರಸನು ವಿರೂಪಾಕ್ಷ ದೇವಾಲಯವನ್ನು ಕಟ್ಟಿಸಿ ಊರಿಗೆ ಅನಂತಸೇತು ಎಂದು ಹೆಸರಿಸಿದ್ದುದನ್ನು ಉಲ್ಲೇಖಿಸಿದೆ. ಹಾಗೂ ಕುರೆಕುಪ್ಪೆ ಗ್ರಾಮದ ಬೆನಕರಸನು ವಿರೂಪಾಕ್ಷ ದೇವಾಲಯ ಕಟ್ಟಿಸಿ ಬಸವ ದೀಕ್ಷಿತರ ಭೂಮಿಯನ್ನು ಕ್ರಿಯವಾಗಿ ಪಡೆದು ದೇವರ ಕಾರ್ಯಕ್ಕೆ ದತ್ತಿ ಬಿಡುತ್ತಾನೆ. ಕ್ರಿ.ಶ.೧೫೪೯ರ ಅನೇಕ ಶಾಸನಗಳು ಗಮನಾರ್ಹವಾದವು. ಸಂಡೂರು ತಾಲ್ಲೂಕಿನ ಚಿಕ್ಕಕೆರೆಯಾಗಿನಹಳ್ಳಿಯ ಶಾಸನವು ವಿಜಯನಗರದ ಅರಸ ಅಚ್ಯುತರಾಯನ ಕೈಕೆಳಗೆ ಅಧಿಕಾರಿಯಾಗಿದ್ದ ಬಯಕಾರ ರಾಮಪ್ಪಯ್ಯನ ವಂಶಾವಳಿಯ ಕುರಿತು ಉಲ್ಲೇಖ ನೀಡುತ್ತದೆ. ಕ್ರಿ.ಶ.೧೫೪೪ರ ಯಳಪೆ ಮತ್ತು ಸಂಡೂರು ಶಾಸನಗಳಲ್ಲಿ ತಾಯಿಂದರಿಗೆ/ನಾಯಿಂದರಿಗೆ ತೆರಿಗೆ ವಿನಾಯಿತಿ ನೀಡಿದ ಉಲ್ಲೇಖವಿದೆ.

ಇವರ ಕಾಲದಲ್ಲಿ ಸಂಡೂರು ಒಂದು ಪ್ರಮುಖ ವ್ಯಾಪಾರ ಕೇಂದ್ರವೆಂದು ವರ್ಣಿಸಲಾಗಿದೆ. ಬಹುಶಃ ಯುದ್ಧ ಸಾಮಾಗ್ರಿಗಳಾದ ಆಯುಧಗಳ ತಯಾರಿಕೆ ಮತ್ತು ಮಾರಾಟ ಇರಬಹುದು. ಏಕೆಂದರೆ ಇಲ್ಲಿನ ಅನೇಕ ಪ್ರದೇಶಗಳಲ್ಲಿ ಕುಲುಮೆಗಳಿದ್ದು, ಬೆಟ್ಟಗಳೋಪಾದಿಯಲ್ಲಿ ಬೂದಿ ತುಂಬಿದ ತಾಣಗಳಿವೆ. ಇವು ಕಬ್ಬಿಣ ತಯಾರಿಸುವ ಕೇಂದ್ರಗಳಾಗಿರಬಹುದು. ಈ ಪ್ರದೇಶ ವಿಜಯನಗರದ ರಾಜಧಾನಿಗೆ ರಕ್ಷಣೆ ಒದಗಿಸಿತ್ತು. ಯುದ್ಧ ಸಾಮಾಗ್ರಿಗಳನ್ನು ತಯಾರಿಸುವ ರಹಸ್ಯ ಕೇಂದ್ರಗಳಾಗಿದ್ದವು. ಇಲ್ಲಿ ಹೆಚ್ಚು ಹುಲ್ಲುಗಾವಲು ಇದ್ದುದರಿಂದ ಕುದುರೆ, ಆನೆಗಳ ಸೈನ್ಯದ ವಿಶ್ರಾಂತಿ ತಾಣಗಳಿರಬಹುದು. ಅರಣ್ಯದಿಂದ ಕಟ್ಟಿಗೆ ಮತ್ತು ಗಣಿಗಳಲ್ಲಿ ಕಬ್ಬಿಣ ಸಿಗುತ್ತಿದ್ದರಿಂದ ಆಯುಧ ತಯಾರಿಕೆ ಕೇಂದ್ರಗಳು ಸೇನೆ ವಿಶ್ರಾಂತಿಗೆ ಸ್ಥಳಗಳಾದವು.

ಒಟ್ಟಿನಲ್ಲಿ ಸಂಡೂರು ಪ್ರದೇಶವು ವಿಜಯನಗರ ಸಾಮ್ರಾಜ್ಯದ ಒಂದು ಪ್ರಮುಖ ಪಟ್ಟಣವಾಗಿ, ವ್ಯಾಪಾರ ಕೇಂದ್ರವಾಗಿತ್ತು. ೧೩೩೬ ರಿಂದ ೧೫೬೫ರವರೆಗೆ ವಿಜಯನಗರ ಅರಸರ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ.ಶ.೧೫೬೫ರ ತಾಳಿಕೋಟೆ ಯುದ್ಧದ ನಂತರ ಈ ಸಾಮ್ರಾಜ್ಯ ಪತನ ಹೊಂದಿತ್ತು. ನಂತರ ಸೇನಾನಿಗಳು ಸಾಮಂತರು ಬೇರೆ ಬೇರೆ ಭಾಗಗಳನ್ನು ಸ್ವತಂತ್ರವಾಗಿ ಆಳಲು ಪ್ರಾರಂಭಿಸಿದರು.

**ಪಾಳೆಯಗಾರರು**

ವಿಜಯನಗರ ಸಾಮ್ರಾಜ್ಯದಲ್ಲಿ ವಿವಿಧ ಗಾತ್ರಗಳ ಸಣ್ಣ ಪುಟ್ಟ ರಾಜ್ಯಗಳನ್ನು ಆಳುತ್ತಿದ್ದ ಮುಖಂಡರುಗಳಿಗೆ ಪಾಳೆಯಗಾರರೆಂಬ ಹೆಸರಿದ್ದಿತು. ಈ 'ಪಾಳೆಗಾರ' ಎಂಬ ಪದ ಪ್ರಯೋಗ ೧೭-೧೮ನೆಯ ಶತಮಾನದ ನಂತರ ಬಳಕೆಯಾಗಿದೆ. ವಿಜಯನಗರ ಸಾಮ್ರಾಜ್ಯ ತುಂಬಾ ವಿಸ್ತಾರವಾಗಿದ್ದರಿಂದ ಎಲ್ಲಾ ಭಾಗಗಳ ಮೇಲೆ ತಾವೇ ನೇರವಾಗಿ ಆಳ್ವಿಕೆ ನಡೆಸುವುದು ತೊಂದರೆಯಾಗುತ್ತಿತ್ತು. ಹೀಗಾಗಿ ಆಡಳಿತದ ಉಸ್ತುವಾರಿ ನೋಡಿಕೊಳ್ಳಲು, ಕಂದಾಯ ವಸೂಲಿ ಮಾಡಲು ಮತ್ತು ಶಾಂತಿ ಸುವ್ಯವಸ್ಥೆಗಳನ್ನು ನೋಡಿಕೊಳ್ಳಲು ಯುದ್ಧ ಸಂದರ್ಭದಲ್ಲಿ ಸಹಾಯ ಮಾಡುವುದು ಮೊದಲಾದ ಗುರಿ-ಉದ್ದೇಶಗಳಿಗಾಗಿ ಬಲಿಷ್ಠ ಹಾಗೂ ಅತೀ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಬರ್ಟನ್ ಸ್ಟೇನ್ ವಿಜಯನಗರ ಸಾಮ್ರಾಜ್ಯವು ಸಣ್ಣ ಸಣ್ಣ ಸಂಸ್ಥಾನ ಮತ್ತು ರಾಜ್ಯಗಳಲ್ಲಿ ವಿಭಾಗಗೊಂಡಿದ್ದು ಮತ್ತು ಅವುಗಳ ಮೇಲೆ ಇವರು ಪ್ರಭುತ್ವ ಹೊಂದಿದ್ದರೆಂದು 'ಸೆಗ್ಮಂಟರಿ ಸ್ಟೇಟ್' ಸಿದ್ಧಾಂತವನ್ನು ಮಂಡಿಸುತ್ತಾನೆ.

ಇಂತಹ ಅಧೀನರಾದ ಸಾಮಂತರು ಮತ್ತು ಸೈನಿಕರು ಹಾಗೂ ದಂಡನಾಯಕರು, ನಾಯಕರು (ಕೇಂದ್ರಿಕರಣ ಮತ್ತು ವಿಕೇಂದ್ರಿಕರಣವನ್ನು ಗಮನಿಸಬಹುದು) ವಿಜಯನಗರದ ಅವನತಿ ನಂತರ ಕ್ರಮೇಣ ಸ್ವತಂತ್ರವಾಗಿ ಆಳ್ವಿಕೆ ನಡೆಸಲು ಮುಂದೆ ಬಂದು ಪಾಳೆಗಾರರೆನಿಸಿಕೊಂಡರು. ವಿಜಯನಗರ ಸಾಮ್ರಾಜ್ಯದ ಪತನದ ತರುವಾಯ ರಾಜ್ಯಾಡಳಿತದಲ್ಲಿ ಬಹುಖ್ಯಾತಿ ಪಡೆದವರು ಪಾಳೆಗಾರರಾದರು.

ಕರ್ನಾಟಕದ ಬಗ್ಗೆ ಹೇಳುವುದಾದರೆ ವಿಜಯನಗರದ ಚಕ್ರವರ್ತಿಗಳು ತಮ್ಮ ಶತ್ರುಗಳನ್ನು ಸದೆಬಡೆಯಲು ಹೋದಾಗ ಸಾಮಂತ ದೊರೆಗಳು ಅವರ ನೆರವಿಗೆ ಸೈನ್ಯ ಸಮೇತ ಹೋಗಿ, ಒಂದೊಂದು ಸ್ಥಳದಲ್ಲಿ ಇಳಿದು ಕೊಳ್ಳುತ್ತಿದ್ದುದರಿಂದ ಅವರಿಗೆ ಪಾಳೆಯಗಾರರೆಂಬ ಹೆಸರು ಬಂದಿರಬಹುದು. ಪಾಳೆಗಾರರ ಅಧೀನದಲ್ಲಿಯ ಭೂಪ್ರದೇಶಕ್ಕೆ 'ಪೊಲ್ಲಂ' ಎಂಬ ಹೆಸರಿದ್ದುದರಿಂದ ಇವರಿಗೆ ಪಾಳೆಯಗಾರರೆಂಬ ಹೆಸರಿದ್ದಿತು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ವಿಜಯನಗರದ ಅರಸರು ನೀಡಿದ ಪ್ರೋತ್ಸಾಹದ ಪರಿಣಾಮವಾಗಿ ಅನೇಕ ಪಾಳೆಯ ಪಟ್ಟುಗಳು ಪ್ರಾಬಲ್ಯಕ್ಕೆ ಬಂದವು.

ವಿಜಯನಗರದ ಅವನತಿಯೇ ಜನಸಾಮಾನ್ಯರ ಆಳ್ವಿಕೆಗೆ ನಾಂದಿ ಹಾಡಿದಂತೆ ಪಾಳೆಯ ಪಟ್ಟುಗಳು ಉದಯಿಸಿದವು. ವಿಜಯನಗರದಲ್ಲಿ ಸೈನ್ಯ ಹಾಗೂ ವಿವಿಧ ಹುದ್ದೆಗಳಲ್ಲಿ ಅಮರ

ನಾಯಕ ಮತ್ತು ನಾಯಕರಾಗಿ ಕಾರ್ಯ ನಿರ್ವಹಿಸಿದವರು ಪಾಳೆಯಗಾರರೆಂದು ಸ್ವತಂತ್ರರಾದರು. ವಿಜಯನಗರದ ತರುವಾಯ ಬಳ್ಳಾರಿ ಜಿಲ್ಲೆ ಸೇರಿದಂತೆ ಅನೇಕ ಭಾಗಗಳಲ್ಲಿ ಸಣ್ಣ-ಪುಟ್ಟ ಸಂಸ್ಥಾನಗಳು ಜನ್ಮ ತಾಳಿದವು. ಅವು ಒಬ್ಬೊಬ್ಬ ಪಾಳೆಗಾರ ಮತ್ತು ಮುಖಂಡ ಹಾಗೂ ದೊರೆಯನ್ನು ಮಾಡಿಕೊಂಡು ಆಳ್ವಿಕೆ ನಡೆಸಿದ್ದು ಇತಿಹಾಸ. ಇದೇ ರೀತಿ ಸಂಡೂರು ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಸಣ್ಣ-ಪುಟ್ಟ ಪಾಳೆಗಾರ ಸಂಸ್ಥಾನಗಳು ಆಳ್ವಿಕೆ ನಡೆಸಿದ್ದು ಗಮನಾರ್ಹ. ಅದಕ್ಕೆ ಆಧಾರವೆಂಬಂತೆ ಇಂದಿಗೂ ಈ ತಾಲ್ಲೂಕಿನ ಕೆಲವು ಗ್ರಾಮಗಳಲ್ಲಿ ಪಾಳೆಯಗಾರರ ಕಾಲದಲ್ಲಿ ಕಟ್ಟಲ್ಪಟ್ಟ ಕೋಟೆ-ಕೊತ್ತಲಗಳು, ಬುರುಜು ಇತ್ಯಾದಿ ಅವಶೇಷಗಳು ಇರುವುದನ್ನು ಕಾಣುತ್ತೇವೆ. ಇಲ್ಲಿ ಬೆಳಕಿಗೆ ಬಂದಿರುವ ಹಾಗೂ ಇನ್ನೂ ಬೆಳಕಿಗೆ ಬಾರದಿದ್ದ ಕೆಲವು ಪಾಳೆಗಾರರ ಇತಿಹಾಸದ ಬಗ್ಗೆ ಪ್ರಥಮ ಬಾರಿಗೆ ಪರಿಚಯಿಸಲಾಗುತ್ತಿದೆ.

**ಗುಡೇಕೋಟೆ ಪಾಳೆಗಾರರು**

ಸುತ್ತಮುತ್ತಲೂ ಗುಡ್ಡಗಳು ಇದ್ದು, ಗುಡ್ಡದ ಮೇಲೆ ಕೋಟೆ ಇರುವುದಕ್ಕಾಗಿ ಇದನ್ನು ಗುಡೇಕೋಟೆ ಎಂದು ಕರೆಯುವರು. ಆದರೆ ಈ ಕುರಿತು ಏಕ ಅಭಿಪ್ರಾಯವಿಲ್ಲ. ಗುಡಿಯಕೋಟೆ>ಗುಡಿಗಳಕೋಟೆ> ಗುಡೇಕೋಟೆ ಎಂದು ಮತ್ತು ಬಹಳಷ್ಟು ಗುಡಿ ಗೋಪುರಗಳಿಂದ ಕೂಡಿರುವುದಕ್ಕೂ ಹಾಗೂ ಗುಡ್ಡದ ಮೇಲೆ ಕೋಟೆ ಕಟ್ಟಿಸಿರುವುದರಿಂದಲೂ ಇದಕ್ಕೆ ಗುಡೇಕೋಟೆ ಎಂಬ ಹೆಸರು ಬಂದಿರಬೇಕು. ರಾಬರ್ಟ್ ಬ್ರೂಸ್ ಫೂಟ್‌ನು ಈ ಕೋಟೆಯ ಬಗೆಗೆ ಹಲವು ವಿವರಗಳನ್ನು ನೀಡಿದ್ದು, ಇಡೀ ದಕ್ಷಿಣ ಭಾರತದಲ್ಲಿಯೇ ಈ ಕೋಟೆಗೆ ಬಳಸಿರುವ ಕಲ್ಲುಗಳಷ್ಟು ಗಾತ್ರದ ಕಲ್ಲುಗಳನ್ನು ನಾನು ಎಲ್ಲಿಯೂ ನೋಡಿಲ್ಲವೆಂದು ಹೇಳಿದ್ದಾನೆ.

ಜಟ್ಟಂಗಿರಾಮೇಶ್ವರನು ಈ ಪಾಳೆಗಾರರ ಕುಲದೈವ. ಸಂಡೂರಿನ ಸ್ವಾಮಿಮಲೆಯ ಕುಮಾರಸ್ವಾಮಿಯ ಉಲ್ಲೇಖವು ಮಯೂರವರ್ಮನ ಚಂದ್ರವಳ್ಳಿ ಶಾಸನದಲ್ಲಿ ಕಾಣುತ್ತೇವೆ. ರಾಷ್ಟ್ರಕೂಟರ ಆಳ್ವಿಕೆಯ ಅವಧಿಯಲ್ಲಿ ಈ ಪಾಳೆಗಾರರ ಮನೆತನದ ಕೆಲವು ಶಾಸನಗಳು ದೊರಕಿವೆ.(ಬಳ್ಳಾರಿ, ಚಿತ್ರದುರ್ಗ) ೧ನೇಕೃಷ್ಣನ ಅವಧಿಯಲ್ಲಿ ನಿರ್ಮಿಸಲ್ಪಟ್ಟ ಇದು ಸಂಡೂರಿನ ಕುಮಾರಸ್ವಾಮಿ ಮಂದಿರವು ರಾಷ್ಟ್ರಕೂಟರ ಶೈಲಿಯಲ್ಲಿದೆ. ಈ ಅವಧಿಯಲ್ಲಿ ನೊಳಂಬವಾಡಿಯು ಈ ಅರಸರ ಆಳ್ವಿಕೆಯ ಪರಿಧಿಗೆ ಒಳಪಟ್ಟಿದ್ದು ತಿಳಿದುಬರುವುದು. ಈ ಆಧಾರದಿಂದ ಈ ಗ್ರಾಮವು ಇದರ ಆಳ್ವಿಕೆಗೊಳಪಟ್ಟಿತ್ತು ಎಂದು ತಿಳಿಯುತ್ತದೆ.

ಪ್ರಸ್ತುತ ಗುಡೇಕೋಟೆ ಪ್ರದೇಶವು ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳ ಗಡಿಭಾಗದಲ್ಲಿದೆ. ಈ ಎರಡೂ ಜಿಲ್ಲೆಗಳಲ್ಲಿಯೂ ಹೊಯ್ಸಳರ ಅವಧಿಯ ಅನೇಕ ಶಾಸನಗಳು ದೊರಕಿವೆ. ಗುಡೇಕೋಟೆಯ ಸಮೀಪದಲ್ಲಿರುವ ಸಿದ್ಧಾಪುರ(ಮೊಳಕಾಲ್ಮೂರು.ತಾ) ಗ್ರಾಮದಲ್ಲಿಯೂ ಹೊಯ್ಸಳರ ಅವಧಿಗೆ ಸಂಬಂಧಿಸಿದ (೧೨೧೫)ವೀರಗಲ್ಲು ಇದ್ದು ಅದು ಆ ಅವಧಿಯ ಸಾಮಾಜಿಕ ಪದ್ಧತಿಯನ್ನು ಸಾರುತ್ತದೆ. ಆ ಅವಧಿಯಲ್ಲಿ ಕಂಪ್ಲಿಯು ನೊಳಂಬವಾಡಿ ಪ್ರಾಂತ್ಯದ ರಾಜಧಾನಿಯಾಗಿತ್ತು. ೨ನೇ ಬಲ್ಲಾಳನು ನೊಳಂಬವಾಡಿಯನ್ನು ಅನೇಕ ಬಾರಿ ವಶಪಡಿಸಿಕೊಂಡಿದ್ದನು. ಅಲ್ಲದೆ ತುಂಗಭದ್ರ ನದಿಯನ್ನು ಉತ್ತರದ ಗಡಿಯಾಗಿ ಮಾಡಿಕೊಂಡಿದ್ದನು. ಈ ಮೇಲ್ಕಂಡ ಅಂಶಗಳನ್ನು ಗಮನಿಸುವುದರಿಂದ ಗುಡೇಕೋಟೆ ಪ್ರದೇಶವು ಹೊಯ್ಸಳರ ಆಳ್ವಿಕೆಗೊಳಪಟ್ಟಿತ್ತು ಎಂದು ತೋರುವುದು.

ಗುಡೇಕೋಟೆ ಪಾಳೆಗಾರರು ಕುಮಾರರಾಮನ ವಂಶದವರು ಎಂದು ಹೇಳಿಕೊಂಡಿದ್ದಾರೆ. ಈ ಗುಡೇಕೋಟೆಯ ಗಡಿಯಾಂಕ ಭೀಮನು ಕುಮಾರರಾಮನ ಸ್ನೇಹಿತನಾಗಿದ್ದನು ಎಂದು ತಿಳಿದುಬರುವುದು. ಇದನ್ನು ಗಮನಿಸಿದಾಗ ಗುಡೇಕೋಟೆ ಪ್ರದೇಶವು ಕುಮ್ಮಟದುರ್ಗದ ಅರಸರ ಆಡಳಿತಕ್ಕೊಳಪಟ್ಟಿತ್ತು ಎಂದು ಗುರುತಿಸಬಹುದು. ಈ ಗುಡೇಕೋಟೆ ಪ್ರದೇಶವು ಕೋಗಳಿನಾಡಿಗೆ ಸೇರಿತ್ತು. ಆ ನಂತರ ವಿಜಯನಗರ ಸಾಮ್ರಾಜ್ಯದ ಒಂದು ಸಣ್ಣ ಪ್ರಾಂತ್ಯವಾಗಿತ್ತು. ವಿಜಯನಗರದ ಅರಸರಿಂದ ನಿಯೋಜಿಸಲ್ಪಟ್ಟ ಪ್ರತಿನಿಧಿ ಇಲ್ಲಿಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದನು. ಅಷ್ಟೇ ಅಲ್ಲದೆ ಈ ಪ್ರದೇಶವನ್ನು ಕೃಷ್ಣದೇವರಾಯನ ಅವಧಿಯಲ್ಲಿ ಗುಡೇಕೋಟೆ ಸೀಮೆಗೆ ಕೊಟ್ಟಂತ ವಿಷಯವು ಕೈಫಿಯತ್ತುಗಳಿಂದ ತಿಳಿಯುವುದು.

ಮುಂದೆ ೧೫೬೫ರ ಅವಧಿಯಲ್ಲಿ ನಡೆದ ತಾಳಿಕೋಟೆ ಕದನದ ನಂತರ ಈ ಪ್ರದೇಶವು ಬಿಜಾಪುರದ ೧ನೇ ಅಲಿ ಅದಿಲ್ ಷಾ(೧೫೬೮)ಗೆ ಸೇರುವುದು. ಆನಂತರದಲ್ಲಿ ಈ ಪಾಳೆಗಾರರು ರಾಜಕೀಯ ಪ್ರಾಬಲ್ಯವನ್ನು ಬೆಳೆಸಿಕೊಂಡು ಆದಿಲ್ ಷಾಗಳಿಗೆ ಅಧೀನರಾಗಿ ಈ ಭಾಗದಲ್ಲಿ ಆಳ್ವಿಕೆ ನಡೆಸುವರು. ಬಿಜಾಪುರ ಸುಲ್ತಾನನು ಕ್ರಿ.ಶ.೧೬೪೦ರಲ್ಲಿ ಈ ಪ್ರದೇಶವನ್ನು ಶಿವಾಜಿಗೆ ಬಳುವಳಿಯಾಗಿ ನೀಡಿದ ವಿಚಾರ ಇತಿಹಾಸದಿಂದ ತಿಳಿಯುವುದು. ಚೋರುನೂರು ಗ್ರಾಮದ ವಿರಕ್ತಮಠದ ಆವರಣದಲ್ಲಿರುವ ಕ್ರಿ.ಶ.೧೭ನೆಯ ಶತಮಾನದ ಈ ಶಾಸನವು ಗುಡೇಕೋಟೆ ಸಂಡೂರು ಭಾಗದ ಜನರಿಗೆ ರಾಜಪ್ಪನಾಯಕನ ಆಜ್ಞೆಯ ಮೇರೆಗೆ ಬಮ್ಮಿನಾಯಕನು ಆ ಭಾಗದಲ್ಲಿ ಹೊಸದಾಗಿ ಹುಟ್ಟಿದ ಮಕ್ಕಳ (ಬಾಲತೆರಿಗೆ) ಮತ್ತು ಸತ್ತವರ ಮೇಲೆ ತೆರಿಗೆ ವಿಧಿಸಬಾರದೆಂದು ತಿಳಿಸುತ್ತಾನೆ. ಇದೇ ಗ್ರಾಮದ ಹನುಮಂತ ದೇವಾಲಯದ

ಮುಂದಿರುವ ಕ್ರಿ.ಶ.೧೭೯೦ರ ಶಾಸನವು ಗುಡೇಕೋಟೆ ಮತ್ತು ಸಂಡೂರಿನ ಇಮ್ಮಡಿ ರಾಜಪ್ಪನಾಯಕ ಹೊರಮಲೆ ಸೀಮೆಯ ಜನರಿಗೆ ಒಂದು ಪ್ರಕಟಣೆ ಹೊರಡಿಸಿ ಅದರಂತೆ ಗುಡೇಕೋಟೆಯ ಆಡಳಿತದ ಸಮಯದಲ್ಲಿದ್ದಂತೆ ನೋಡಿಕೊಳ್ಳುವುದಾಗಿ ಆಶ್ವಾಸನೆ ನೀಡಿದ್ದನ್ನು ತಿಳಿಸುತ್ತದೆ. ಈ ಮೇಲ್ಕಂಡ ಎರಡು ಶಾಸನಗಳು ಗುಡೇಕೋಟೆಯ ಪಾಳೆಗಾರನಾದ ಇಮ್ಮಡಿ ರಾಜಪ್ಪನಾಯಕ ಆ ಭಾಗದ ಜನತೆಗೆ ನೀಡಿದ ಆಶ್ವಾಸನೆಯ ವಿಚಾರವನ್ನು ಉಲ್ಲೇಖಿಸುವವು.

ಶಿವಾಜಿಯ ನಿಧನ ನಂತರ ಕ್ರಿ.ಶ.೧೬೮೦ರ ವೇಳೆಗೆ ಇಡೀ ದಕ್ಷಿಣ ಭಾರತವು ಔರಂಗಜೇಬನ ವಶವಾಯಿತು. ಆದರೆ ದಕ್ಷಿಣ ಭಾರತದ ಪ್ರದೇಶದ ಮೇಲೆ ಸಂಪೂರ್ಣ ನಿಯಂತ್ರಣವನ್ನು ಸಾಧಿಸುವುದು ಔರಂಗಜೇಬನಿಗೆ ಅಸಾಧ್ಯವಾಯಿತು. ಈತನ ಆಳ್ವಿಕೆಯ ಅವಧಿಯಲ್ಲಿ ಈ ಪ್ರದೇಶದ ಪಾಳೆಗಾರರು ಹೆಚ್ಚು ಪ್ರಬಲರಾದರು. ಈ ಪಾಳೆಗಾರರು ಸು.೨೦೦ ವರ್ಷಗಳ ಕಾಲ ತಮ್ಮ ಆಳ್ವಿಕೆ ನಡೆಸಿದ್ದಾರೆ. ಮೈಸೂರಿನ ಹೈದರಾಲಿಯು ಗುಡೇಕೋಟೆ ಮೇಲೆ ಆಕ್ರಮಣ ನಡೆಸಿ ತನ್ನದಾಗಿಸಿಕೊಂಡನು. ಮುಂದೆ ಈತನ ಪುತ್ರ ಟಿಪ್ಪುಸುಲ್ತಾನ್ ೧೭೮೬ರಲ್ಲಿ ಆದವಾನಿ, ಹರಪನಹಳ್ಳಿ ಮುಂತಾದ ಪಾಳೆಗಾರರನ್ನು ಸೋಲಿಸಿ ತನ್ನ ರಾಜ್ಯದಲ್ಲಿ ಸೇರಿಸಿಕೊಂಡನು. ಒಟ್ಟಾರೆಯಾಗಿ ಈ ಪ್ರದೇಶವು ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಹೈದರ್–ಟಿಪ್ಪುರವರ ವಶದಲ್ಲಿತ್ತು.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಹೈದರಾಬಾದಿನ ನಿಜಾಮ ಹಾಗೂ ಮರಾಠರು ಒಪ್ಪಂದ ಮಾಡಿಕೊಂಡು ಒಟ್ಟಾಗಿ ಟಿಪ್ಪುವಿನ ಮೇಲೆ ಕ್ರಿ.ಶ.೧೭೯೨ರಲ್ಲಿ ದಾಳಿ ನಡೆಸಿದರು. ಈ ಕದನದಲ್ಲಿ ಟಿಪ್ಪು ಸೋತನು. ಇದರಿಂದಾಗಿ ಹರಪನಹಳ್ಳಿ, ಸಂಡೂರು, ರಾಯದುರ್ಗ ಆಯಾ ಪಾಳೆಯಗಾರರಿಗೆ ಇಂತಿರುಗಿಸಲ್ಪಟ್ಟವು. ಉಳಿದ ಪ್ರದೇಶವು ನಿಜಾಮನ ವಶವಾಯಿತು. ನಂತರ ೧೭೯೯ರಲ್ಲಿ ಟಿಪ್ಪುಸುಲ್ತಾನನ ಮೇಲೆ ಬ್ರಿಟಿಷರು ದಾಳಿ ನಡೆಸಿದರು. ಈ ದಾಳಿಯಲ್ಲಿ ಹೋರಾಡುತ್ತಾ ಟಿಪ್ಪು ಶ್ರೀರಂಗಪಟ್ಟಣದಲ್ಲಿ ಮಡಿದನು. ದಾಳಿಯ ನಂತರದ ಒಪ್ಪಂದದಂತೆ ಗುಡೇಕೋಟೆ ಪ್ರದೇಶವು ಹೈದರಾಬಾದಿನ ನಿಜಾಮನ ವಶವಾಯಿತು.

ಗುಡೇಕೋಟೆ ಪ್ರದೇಶವು ೧೮ನೆಯ ಶತಮಾನದ ಕೊನೆಯ ಭಾಗದಲ್ಲಿ ಹೈದರಾಬಾದ್ ನಿಜಾಮನ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ.ಶ.೧೮೦೦ರಲ್ಲಿ ಸಹಾಯಕ ಸೈನ್ಯ ಪದ್ಧತಿಯನ್ನು ಒಪ್ಪಿಕೊಂಡ ಹೈದರಾಬಾದ್ ನಿಜಾಮನು ಈ ಪ್ರದೇಶವನ್ನು ಸಂಭಾವನೆ ಬಾಬ್ತು ಬ್ರಿಟಿಷರಿಗೆ ಕಾಣಿಕೆ ನೀಡಿದನು. ಮುಂದೆ ಬ್ರಿಟಿಷರು ಈ ಪ್ರದೇಶವನ್ನು ಬಳ್ಳಾರಿ ಜಿಲ್ಲೆಗೆ ಸೇರಿಸಿ, ನಂತರ

ಕೂಡ್ಲಿಗಿ ತಾಲ್ಲೂಕಿಗೆ ಸೇರಿಸಿದರು. ಬಳ್ಳಾರಿ ಜಿಲ್ಲೆಯನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸಿಕೊಂಡರು. ಬಳ್ಳಾರಿ ಜಿಲ್ಲೆಯು ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟಾಗ ಅದರ ಮೊದಲ ಕಲೆಕ್ಟರ್ ಆಗಿ ಥಾಮಸ್ ಮನ್ರೋ ಅಧಿಕಾರ ವಹಿಸಿಕೊಂಡನು. ಈ ಪ್ರದೇಶದಲ್ಲಿಯ ವಿವಿಧ ಭಾಗಗಳಲ್ಲಿ ನಡೆಯುತ್ತಿದ್ದ ಬಂಡಾಯಗಳನ್ನೆಲ್ಲಾ ಹತ್ತಿಕ್ಕುವುದರ ಮೂಲಕ ಆಡಳಿತದಲ್ಲಿ ಏಕರೂಪತೆಯನ್ನು ಜಾರಿಗೆ ತಂದನು.

ಸು.೧೪೭ ವರ್ಷಗಳ ಕಾಲ ಬ್ರಿಟಿಷರು ಬಳ್ಳಾರಿ ಜಿಲ್ಲೆಯನ್ನು ಆಳಿದರು. ಕ್ರಿ ಶ.೧೮೦೦ ರಿಂದ ೧೮೫೮ರವರೆಗೆ ಈಸ್ಟ್ ಇಂಡಿಯಾ ಕಂಪನಿಯೂ ಆನಂತರ ಬ್ರಿಟಿಷ್ ಚಕ್ರಾಧಿಪತ್ಯವು ಬಳ್ಳಾರಿ ಜಿಲ್ಲೆಯನ್ನು ಆಳಿತು. ಸ್ವಾತಂತ್ರ್ಯಗಳಿಸಿದ ನಂತರ ೧೯೪೭ರಲ್ಲಿ ಬಳ್ಳಾರಿ ಪ್ರದೇಶವು ಮೈಸೂರು ರಾಜ್ಯಕ್ಕೆ ಸೇರಿತ್ತು. ಗುಡೇಕೋಟೆಯು ೧೯೫೩ರಲ್ಲಿ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಗ್ರಾಮ ಪಂಚಾಯಿತಿಗಳ ಅಧಿಕಾರ ವಿಕೇಂದ್ರೀಕರಣಗಳಿಂದ ಫಲಿತಾಂಶವನ್ನು ಕಂಡುಕೊಂಡು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ತನ್ನನ್ನು ತಾನು ಗುರುತಿಸಿಕೊಂಡಿದೆ. ಗುಡೇಕೋಟೆ ಪಾಳೆಯಗಾರರ ಕುರಿತು ಹಿರೇಹಾಳು, ದರೋಜಿ, ಅಂತಾಪುರ, ಶ್ರೀ ಕೊಮಾರದೇವರ ಕ್ಷೇತ್ರದ ಕೈಫಿಯತ್ತುಗಳಲ್ಲಿ ಕೆಲವು ವಿಚಾರಗಳು ಕಾಣಸಿಗುತ್ತವೆ.

**ಜರಿಮಲೆ ಪಾಳೆಯಗಾರರು**

ಜರಿಮಲೆ ಪಾಳೆಯಗಾರಿಕೆಯನ್ನು ಸ್ಥಾಪಿಸಿದವನು ಪೆನ್ನಪ್ಪ ಎಂಬುವನು. ಈತನು ವಿಜಯನಗರದ ಅರಸ ಅಚ್ಯುತರಾಯನಲ್ಲಿ ನಿಷ್ಠೆಯಿಂದ ಕೆಲಸ ಮಾಡಿದ್ದಕ್ಕಾಗಿ ಈತನಿಗೆ ಜರಿಮಲೆ ರಾಜ್ಯವು ಬಹುಮಾನವಾಗಿ ದೊರಕಿತು. ವಿಜಯನಗರ ಪತನವಾದ ನಂತರ ಈ ಅರಸ ಸ್ವತಂತ್ರನಾದನು. ಇವರು ಮೊದಲು ಕಂಚಿ ದೇಶದ ನಿವಾಸಿಗಳು. ಸು.೬೦೦–೭೦೦ ವರ್ಷಗಳ ಹಿಂದೆಯೇ ಉತ್ತರದ ಕಡೆಗೆ ಹೊರಟರು. ಮುಂದಿನ ರಾಜ್ಯವೇ ಮೈಸೂರು. ಹಾದಿಯಲ್ಲಿ ಒಂದು ಆಕಳು ಅವರಿಗೆ ಇದ್ದಕ್ಕಿದ್ದ ಹಾಗೆ ಕಾಣಿಸಿಕೊಂಡು ಮಾಯವಾಯ್ತು. ಆಗ ಅವರು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಗಂಗಮ್ಮನ ಹಳ್ಳಿ ದೋಣಿ ಗುಡ್ಡದವರೆಗೆ ಆ ಆಕಳಿನ ಹೆಜ್ಜೆಯನ್ನು ಅನುಸರಿಸಿ ಬಂದರು. ಆ ಬೆಟ್ಟವನ್ನು ಮೇಲೆತ್ತಿ ನೋಡಲು ಸುತ್ತಮುತ್ತ ಹಾಸಿದ ಮರಗಳ ಕಾಡು ಕಾಣಿಸಿತು. ಅಲ್ಲಿಂದ ಜಾಗಟೆಯ ನಾದ ಕೇಳಿ ಬರುತ್ತಿತ್ತು. ಆ ಶಬ್ದವನ್ನು ಅನುಸರಿಸಿ ಈ ಭೂಪರು ಅಲ್ಲಿಗೆ ಹೋಗಿ ನೋಡಲಾಗಿ, ಮಹಾಯೋಗಿ ವರೇಣ್ಯರ

ಶಿಬಿರ ಕಾಣಿಸಿತು. ಸ್ವಾಮಿಗಳು ಒಳಗೆ ಪೂಜೆ ಮಾಡುತ್ತಿದ್ದರು. ಇವರು ಹೊರಗೆ ಸ್ವಾಮಿಗಳ ಆಜ್ಞೆಗಾಗಿ ಕಾಯುತ್ತಿದ್ದರು. ಸ್ವಾಮಿಗಳ ದರ್ಶನ ಪೂಜೆಯ ನಂತರ ಆಯಿತು. ಗುರುಗಳ ಜೊತೆಗೆ ಮಾತನ್ನಾಡುತ್ತಿದ್ದಾಗ ಪಕ್ಕದಲ್ಲಿ ಇದ್ದ ಸುರಭಿ (ಆಕಳು, ಕಾಮಧೇನು) ಕೆಚ್ಚಲಿನಿಂದ ಹಾಲನ್ನು ತನ್ನಷ್ಟಕ್ಕೆ ತಾನೇ ಸುರಿಯಲಾರಂಭಿಸಿತು, ಅದಕ್ಕಾಗಿ ಆ ಸ್ಥಳಕ್ಕೆ ಸುರಭಿ–ಸಿರಬಿ–ಚಿರಬಿ ಎಂಬ ಅಭಿದಾನವಾಯ್ತು. ಕೂಡ್ಲಿಗಿ ತಾಲ್ಲೂಕಿನಲ್ಲಿ ಇಂದಿಗೂ ಈ ಗ್ರಾಮವಿದೆ.

ಈ ಏಳು ಮಂದಿ ವೀರರು ಸ್ವಾಮಿಗಳ ಆದೇಶದಂತೆ ಚಳ್ಳಕೆರೆ ತಾಲ್ಲೂಕಿನ ಮಳೆ ಭೂಪಸಮುದ್ರ ಎಂಬ ಗ್ರಾಮಕ್ಕೆ ಬಂದು ನೆಲೆಸಿದರು. ಆ ಗ್ರಾಮದ ಕಾಡಿನಲ್ಲಿ ಬಿಳಿ ಹಂದಿ ದಾರಿಯಲ್ಲಿ ಹೋಗುವವರಿಗೆ ಬಹಳ ತೊಂದರೆ ಕೊಡುತ್ತಿತ್ತು. ಅದಕ್ಕೆ ಬೇಸರಗೊಂಡ ಜನರು ಆ ಗ್ರಾಮದ ಮುಖಂಡ ಭೈಯಪ್ಪನಿಗೆ ತಿಳಿಸಿದರು. ಭೈಯಪ್ಪ ಅಂಥ ಬಲಿಷ್ಠವಾದ ಹಂದಿಯನ್ನು ಕಂಚಿ ದೇಶದ ವೀರರೇ ಎದುರಿಸಲು ಸಮರ್ಥರೆಂದು ತಿಳಿಸಿದನು. ಗ್ರಾಮದ ಮುಖ್ಯಸ್ಥರೆಲ್ಲಾ ಕೂಡಿ ಆ ವೀರರಲ್ಲಿ ಬೇಡಿಕೊಂಡರು. ಶಿವತತ್ವ ಬೋದನಾರ್ಥವಾಗಿ ಪ್ರವಾಸದಲ್ಲಿದ್ದ ಶ್ರೀಮರುಳ ಸಿದ್ಧಾರ್ಯರನ್ನು ಪುನಃ ಸಂದರ್ಶಿಸಿ, ಅವರ ಆಶೀರ್ವಾದ ಪಡೆದರು. ಆ ಏಳು ಮಂದಿ ವೀರರು ಶ್ರೀಗುರು ವರೇಣ್ಯರು ಅಪ್ಪಣೆ ಕೊಡಿಸಿದಂತೆ ಬೇಟೆಗೆ ಹೊರಟರು. ಆ ಏಳು ಮಂದಿ ಪಾಳೆಗಾರರ ಹೆಸರು ಹೀಗಿವೆ :

೧. ಸಿದ್ದಪ್ಪ ನಾಯ್ಕ ೨. ಲಿಂಗಳನಾಯ್ಕ ೩. ಓಬಳನಾಯ್ಕ ೪. ಮಲ್ಲಿಕಾರ್ಜುನ ನಾಯ್ಕ ೫,೬,೭, ನಾಯ್ಕರ ಹೆಸರು ತಿಳಿದುಬಂದಿಲ್ಲ. ಈ ಏಳು ಮಂದಿ ನಾಯಕರು ಏಳು ನಾಯಿಗಳೊಂದಿಗೆ ಮಳೆ ಭೂಪಸಮುದ್ರದಿಂದ ಬಿಳಿ ಹಂದಿಯನ್ನು ಬೆನ್ನಟ್ಟಿ ಹೋದರು. ಸಂಡೂರು ತಾಲ್ಲೂಕಿನ 'ನೀರ್ಕಲ್ ಕೆರೆಹಳ್ಳಿ' (ಚಿಕ್ಕಕೆರೆನಹಳ್ಳಿ) ಎನ್ನುವ ಗ್ರಾಮದವರೆಗೆ ಆ ಬಿಳಿಹಂದಿ ಓಡಿ ಬಂದಿತು. ಅಲ್ಲೊಂದು ಬೆಟ್ಟದ ಪಕ್ಕದಲ್ಲಿ ಒಂದು ಹಳ್ಳವಿತ್ತು. ಆ ಹಳ್ಳದಲ್ಲಿ ಹಂದಿ ಸ್ನಾನಮಾಡಿ ಬೆಟ್ಟದ ದೊಡ್ಡ ಗುಂಡಿನ ಬದಿ ಮಲಗಿತು. ಈ ಏಳು ನಾಯಕರುಗಳಲ್ಲಿ ಒಬ್ಬನಾದ ಭೂಮರಾಜು ಎನ್ನುವವ ಆ ಹಂದಿಗೆ ಭರ್ಜಿ ಹಾಕಿದನು. ಆಗ ಸಿಂಹದಂತಹ ಗರ್ಜನೆಯನ್ನು ಆ ಹಂದಿ ಮಾಡಿತು.

ಭಯಂಕರವಾದ ಈ ಗರ್ಜನೆಗೆ ಪಕ್ಕದಲ್ಲಿದ್ದ ಗುಂಡು ಸಿಡಿದು ಹೋಯಿತು. ಆ ಗುಂಡನ್ನು ಇಂದಿಗೂ ಹಂದಿ ವಡೆದಕಲ್ಲು ಎನ್ನುವರು. ಆ ಹಂದಿ ಅಲ್ಲಿಂದ ಹೊರಟು ಮುಂದೆ ಕೂಡ್ಲಿಗಿ ತಾಲ್ಲೂಕಿನ ಉಜ್ಜಯಿನಿ ಎಂಬ ಊರಿನ ಕಡೆಗೆ ಓಡಲಾರಂಭಿಸಿತು. ಇವರು ಅದನ್ನು

ಬೆನ್ನತ್ತಿದರು. ಬೇಟೆಯಾಡುತ್ತ ಅವರು ಬೆಂದು ಬಸವಳಿದರು. ತುಂಬಾ ಬಾಯಾರಿಕೆಯಾಯಿತು. ಈಗಿನ ಉಜ್ಜಯಿನಿಯ ದೇವಾಲಯದ ಸ್ಥಳದಲ್ಲಿ ಬಾರಿ ಪೆಳೆ ಬೆಳೆದಿತ್ತು. ಆ ಹಂದಿಯು ಅಲ್ಲಿದ್ದ ಪೊದೆಯಲ್ಲಿ ಹೊಕ್ಕು ಬಯಲಾಯ್ತು, ಧಣಿದ ನಾಯಕರುಗಳು ಅಲ್ಲಿಯೇ ಮರದ ನೆರಳಲ್ಲಿ ತಂಗಿದರು. ಆ ಪೊದೆಯಲ್ಲಿ ಭೂಮರಾಜುವಿನ ನಾಯಿ ಹೊಕ್ಕು ಬಂದಿತು. ನಾಯಿಯ ಮೈ ರಾಡಿಯಾಗಿರುವುದನ್ನು ಭೂಮರಾಜು ಪರಿಶೀಲಿಸಿದ. ನಾಯಿಯ ಮೈ ಮೇಲಿನ ರಾಡಿಯನ್ನು ನೋಡಿ ಈ ಪೊದೆಯಲ್ಲಿ ನೀರಿರಬೇಕೆಂದು ಭೂಮರಾಜು ಊಹಿಸಿದನು. ದಟ್ಟವಾಗಿ ಬೆಳೆದಿದ್ದ ಪೊದೆಯನ್ನು ಕಡಿದು ದಾರಿ ಮಾಡಿಕೊಂಡು ಒಳಹೊಕ್ಕನು. ಅಲ್ಲಿ ಒಂದು ಜಲಸ್ಥಾನ ಕಾಣಿಸಿತು. ಅದೇ ಮರುಳ ಸಿದ್ದೇಶ್ವರ ಲಿಂಗದ ಇಂದಿನ ಮೂಲ ಪೀಠವಾಗಿದೆ.



ಬಾಯಾರಿ ಬಂದಿದ್ದ ಭೂಮರಾಜ ಸಂತೋಷದಿಂದ ಅಲ್ಲಿರುವ ಕುಣಿಯಿಂದ ನೀರನ್ನು ಬೊಗಸೆ ಕೈಗಳಿಂದ ಬೇಗಬೇಗನೆ ಕುಡಿದು ದಾಹ ಪರಿಹಾರಿಸಿಕೊಂಡನು. ತಲೆ ಎತ್ತಿ ಮೇಲೆ ನೋಡಲು ಎದುರುಗಡೆಗೆ ವಟವೃಕ್ಷದ ಟೊಂಗೆಯಲ್ಲಿ ತೊಟ್ಟಿಲೊಂದು ನೇತಾಡುತ್ತಿತ್ತು. ತೇಜಸ್ವಿಯಾದ ಮಹಾಸ್ವಾಮಿಗಳು ಆ ತೊಟ್ಟಿಲಿನಲ್ಲಿ ಕುಳಿತು ಕೈಯಲ್ಲಿ ಮಾವಿನ ಹಣ್ಣನ್ನು ತಿನ್ನುತ್ತಿರುವರು. ಹಣ್ಣು ಪೂರ್ತಿಯಾಗಿ ಕೈಯಲ್ಲಿ ಗೊಟ್ಟ-ಗೊರಟ (ಚತುಷ್ಕ ಬೀಜ) ಮಾತ್ರ ಉಳಿದಿದೆ. ಆ ದಿವ್ಯ ಪುರುಷನಿಗೆ ಭೂಮರಾಜು ನಮಸ್ಕರಿಸಿದನು. ಗುರುಗಳು ಕೈಯಲ್ಲಿದ್ದ ಆ ಮಾವಿನ ಬೀಜವನ್ನೇ ಅವನ ಸೆರಗಿನಲ್ಲಿಟ್ಟು ರಾಜನಾಗು ಎಂದು ಆಶೀರ್ವದಿಸಿ ಕಳಿಸಿದರು.

ಆ ಸ್ಥಳದಲ್ಲಿಯೇ ಭೂಗತವಾಗಿದ್ದ ತಮ್ಮ ಮಠವನ್ನು ಜೀರ್ಣೋದ್ಧಾರ ಮಾಡಿರೆಂದು ಗುರುಗಳು ಆಜ್ಞೆ ಮಾಡಿದರು. ಅಂದು ಅವರು ಆಶೀರ್ವಾದಿಸಿ ಕೊಟ್ಟ ಮಾವಿನ ಗೊಟ್ಟಕ್ಕೆ ಬಂಗಾರದ ಕವಚವನ್ನು ಹಾಕಿ ವಂಶಪರಂಪರೆಯಾಗಿ ಈ ಪಾಳೆಗಾರರ ಮನೆತನದಲ್ಲಿ ಉಳಿಸಿಕೊಂಡು ಬಂದಿರುವರು. ಗುರುಗಳು ಸಹ ಭೂಮರಾಜನ ಸಮೇತ ಮುಂದೆ ಹಾಗೆಯೇ ದಯಮಾಡಿಸಿದರು. ಅವರು ಬಂದದ್ದು ಇಂದಿನ ಜರಿಮಲೆ ಬೆಟ್ಟಕ್ಕೆ. ಇದು ಕೂಡ್ಲಿಗಿ ತಾಲ್ಲೂಕಿನಲ್ಲಿದೆ. ಕೂಡ್ಲಿಗಿಯಿಂದ ೧೦ ಮೈಲು ದೂರದಲ್ಲಿದೆ. ಗುರುಗಳ ಇಚ್ಛೆಯಂತೆ ಈ ಸ್ಥಳಕ್ಕೆ ಜರಿಮಲೆ ಎಂದೇ ಹೆಸರಿಟ್ಟು ತಮ್ಮ ಪಾಳೆಯಪಟ್ಟನ್ನು ನಿರ್ಮಿಸಿದರು. ಈ ಪಾಳೆಯಪಟ್ಟಿಗೆ ಭೂಮರಾಜನೇ ಪಾಳೆಗಾರನಾದ. ಸ್ವಾಮಿಗಳು ಅಂದು ಸೂಚಿಸಿದ ದೇವಾಲಯದ ಜೀರ್ಣೋದ್ಧಾರವನ್ನು ಮಾಡಿದರು.

ಚಿತ್ರದುರ್ಗದ ಮೇಲೆ ಶ್ರೀರಂಗಪಟ್ಟಣದ ಹೈದರಾಲಿಯು ಯುದ್ಧವನ್ನು ಸಾರಿದನು. ಚಾಣಾಕ್ಷನಾದ ಮತ್ತು ದೂರದರ್ಶಿಯಾದ ದಿವಾನ್ ಪೂರ್ಣಯ್ಯನು ಕದನದಲ್ಲಿ ಗೆಲ್ಲಲು ಜರಿಮಲೆ ಅರಸರ ಸಹಾಯ ಪಡೆಯುವಂತೆ ಸಲಹೆ ನೀಡಿದನಂತೆ. ಹೈದರಾಲಿಗೆ ಈ ಸಲಹೆ ಸರಿಕಂಡದ್ದರಿಂದ ಜರಿಮಲೆ ದೊರೆಗಳ ಸಹಾಯಕ್ಕಾಗಿ ಬಂದವನು ಅರೂದಿ ದಿಬ್ಬದ ಗ್ರಾಮದ ಸಮೀಪ ಠಾಣ್ಯ ಹೂಡಿದನು. ಈತನ ಅಭಿಮತವನ್ನು ಪರಿಚಾರಕರು ಓಲೆಗಳ ಮೂಲಕ ಅರಸುಗಳಿಗೆ ತಿಳಿಸಿದರು. ಅರಸರುಗಳು ಕದನದಲ್ಲಿ ಸಹಾಯ ಮಾಡಲು ಒಪ್ಪಿದರು. ಜರಿಮಲೆ ಪಾಳೆಗಾರರ ಸಹಾಯದಿಂದ ಹೈದರಾಲಿ ಚಿತ್ರದುರ್ಗವನ್ನು ವಶಪಡಿಸಿಕೊಂಡನು.

ಇಂಥ ಬಲಿಷ್ಠರಾದ ವೀರರನ್ನು ಹಾಗೆ ಬಿಟ್ಟರೆ ಪಾಳೆಗಾರರೆಂಬ ಅಭಿಮಾನದಿಂದ ತನಗೆ ತೊಂದರೆ ಮಾಡುವರೆಂದು ಹೈದರಾಲಿ ಇವರನ್ನು ಶ್ರೀರಂಗಪಟ್ಟಣದ ಸೆರೆಮನೆಯಲ್ಲಿ ಈ ಏಳು ಮಂದಿ ನಾಯಕರನ್ನು ಸೆರೆಯಲ್ಲಿಟ್ಟನು. ಅಂದಿನ ಕರಾರಿನ ಹಾಗೆ ಇಂದಿನವರೆಗೂ ಹೈದರಾಲಿ ಆದಿಯಾಗಿ ಈ ಮನೆತನದವರಿಗೆ ಮಾಸಾಶನ ರೂ.೧೩೩.೩ ಪೈಸೆ ಬರುವುದು. ಇದಕ್ಕೆ ಆಧಾರ ಅವರಲ್ಲಿರುವ ತಾಮ್ರಶಾಸನಗಳೇ ಪ್ರಮುಖವಾಗಿವೆ. ಆನೆಗೊಂದಿ ಅರಸರು ಈ ನಾಯಕರಿಗೆ ಸಂಬಂಧಿಗಳಾಗಿದ್ದಂತೆ ತಿಳಿದುಬರುವುದು. ಈ ಪಾಳೆಗಾರಿಕೆಯು ಅವನತಿ ಹೊಂದಲು ಕಾರಣಗಳನ್ನು ಆ ಮನೆತನದ ಸಿದ್ಧಪ್ಪನಾಯಕ (ಈಗಿನ ಅರಸ) ಈ ರೀತಿ ತಿಳಿಸುವರು.

ಜರಿಮಲೆ ಪಾಳೆಗಾರರಿಂದಲೇ, ಹೈದರಾಲಿ ಚಿತ್ರದುರ್ಗವನ್ನು ವಶಪಡಿಸಿಕೊಂಡನು. ಅದರ ಸವಿನೆನಪಿಗಾಗಿ ಜರಿಮಲೆಯ ನಾಲ್ಕು ಮಂದಿ ಭೂಪರಿಗೆ ಮೈಸೂರು ಸಂಸ್ಥಾನದ ೧೩೩ ಹಳ್ಳಿಗಳನ್ನು ಜಹಗೀರಾಗಿ ಹಂಚಿದಂತೆ ತಿಳಿದುಬರುವುದು. ಅವುಗಳೆಂದರೆ : ಸಂಡೂರು, ಗುಡೇಕೋಟೆ, ವೀರನದುರ್ಗ (ಕೂಡ್ಲಿಗಿ ತಾಲ್ಲೂಕು) ಭೈರದೇವರ ಗುಡ್ಡ (ಉಜ್ಜಯಿನಿ ಸಮೀಪ) ಗೂಡ ಗೋಪಾಲನೆಂಬ ಸಿಪಾಯಿ ಪ್ರತಿದಿನ ಆನೆಗೊಂದಿ ರಾಜ್ಯದಿಂದ ಕಮಲದ ಹೂವನ್ನು ಪೂಜೆಗಾಗಿ ತಂದು ಕೊಡುತ್ತಿದ್ದನು.

ಅರಸರಿಗೆ ಈತನ ಕೆಲಸ ಬಹಳ ಮೆಚ್ಚುಗೆಯಾಗಿ, ನಿನಗೆ ಏನಾದರೂ ವರ ಬೇಕೆಂದರೆ ಕೇಳು ಎಂದರು. ಆ ಸಿಪಾಯಿ ಮೊದಲಿಗೆ ಬೇಡವೆಂದು, ನಂತರ ಕೆಲ ಮಂದಿ ಕುತಂತ್ರಿಗಳು ಕಿವಿಯೂದಿದ್ದರಿಂದ ಮೂರು ಮುಕ್ಕಾಲುಗಳಿಗೆ ನಿಮ್ಮ ದರಬಾರಿನ ಅಧಿಪತ್ಯವನ್ನು ನನಗೆ ಕೊಡಬೇಕೆಂದು ಕೇಳಿದನಂತೆ. ಅದಕ್ಕೆ ಅರಸರು ಆಗಲಿ ಎಂದರು. ಆ ಸಮಯಕ್ಕೆ ಅವನ ಹುಚ್ಚು ಕಾರ್ಯಭಾರ ನಡೆದು ಸಂಸ್ಥಾನ ನಾಶವಾಯಿತು ಎಂದು ಈಗಿನ ಪಾಳೆಗಾರರು ತಿಳಿಸುತ್ತಾರೆ.

ಮಾವಿನ ಗೊರಟಕ್ಕೆ ಮಾಡಿಸಿದಂತ ಚಿನ್ನದ ಹೊದಿಕೆ, ಸುರಗಿ, ರುದ್ರಾಕ್ಷಿ, ವಿಚಿತ್ರವಾದ ಆಯುಧಗಳು ಮತ್ತು ಮರುಳ ಸಿದ್ದೇಶ್ವರ ಲಿಂಗದ ಮೂರ್ತಿ ಮುಂತಾದವು ಇವರ ಮನೆತನದಲ್ಲಿ ಇಂದಿಗೂ ಉಳಿದು ಬಂದಿವೆ.

**ವಡ್ಡು-ದರೋಜಿ ಪಾಳೆಯಗಾರರು**

ವಡ್ಡು-ದರೋಜಿ ಗ್ರಾಮಗಳು ಸಂಡೂರು ತಾಲ್ಲೂಕಿನಲ್ಲಿರುವ ಪ್ರಾಚೀನ ಗ್ರಾಮಗಳಾಗಿವೆ. ವಿಜಯನಗರೋತ್ತರದ ಅವಧಿಯ ಪಾಳೆಯಪಟ್ಟುಗಳಲ್ಲಿ ಈ ಎರಡು ಗ್ರಾಮಗಳ ಪ್ರಾದೇಶಿಕ ಚರಿತ್ರೆಯು ಮಹತ್ವದ್ದಾಗಿತ್ತು. ಈ ಪ್ರದೇಶಗಳಲ್ಲಿ ಕುಮಾರರಾಮನ ವಂಶಸ್ಥರು ಆಳ್ವಿಕೆ ನಡೆಸಿರುವುದು ಗಮನಾರ್ಹ. ಹೊಸಪೇಟೆ-ಬಳ್ಳಾರಿ ರಸ್ತೆಯ ಎಡಭಾಗದಲ್ಲಿ ದರೋಜಿ ಗ್ರಾಮವಿದ್ದರೆ, ತೋರಣಗಲ್ಲಿಗೆ ಹತ್ತಿರದಲ್ಲಿ ಹಾಗೂ ಹೊಸಪೇಟೆ-ಬಳ್ಳಾರಿ ರಸ್ತೆಯ ಬಲಭಾಗಕ್ಕೆ ವಡ್ಡು ಗ್ರಾಮ ಕಾಣಸಿಗುತ್ತದೆ. ಈ ಮೇಲ್ಕಂಡ ಎರಡು ಗ್ರಾಮಗಳ ಪಾಳೆಗಾರಿಕೆಯ ಕುರಿತಂತೆ ಹೆಚ್ಚಿನ ಆಕರಗಳು ಲಭಿಸುವುದಿಲ್ಲ.

ಆದರೆ ದೊರೆತ ಅಲ್ಪ ಮಾಹಿತಿಯಲ್ಲಿಯೇ ಈ ಅರಸರ ಇತಿಹಾಸವನ್ನು ಈ ರೀತಿ ಚಿತ್ರಿಸಬಹುದು. ವಡ್ಡರು ಇಳಿದ ಕಾರಣ ದರೋಜಿ ಕೆರೆ ಹುಟ್ಟಿ ಒಳಗೆ ಎರಡು ಹರದಾರಿ ಮೇಲೆ ದಕ್ಷಿಣಕ್ಕೆ ವಡ್ಡು ಎಂದು ಹೆಸರಿಟ್ಟು ಗ್ರಾಮ ಕಟ್ಟಿಸಿ ಹನುಮಂತ ದೇವರ ಪ್ರತಿಷ್ಠಾಪನೆ ಮಾಡಿ ಹೋಗಲಾಗಿ ವೊಡ್ಡರು ಇಳಿದು ಇದ್ದ ಕಾರಣ ವಡ್ಡು ಎಂದು ಹೆಸರಾಯಿತೆಂದು ತಿಳಿದುಬರುವುದು. ವಡ್ಡು ಗ್ರಾಮ ನಿರ್ಮಾಣವಾದ ನಂತರ ಬೊಮ್ಮಂತರಾಜನ ಏಳು ಜನ ಮಕ್ಕಳ ಪೈಕಿ ಕೊನೆಯವನಾದ ಚಿನ್ನಯರಾಜ ವಡ್ಡು-ದರೋಜಿ ಗ್ರಾಮಗಳಲ್ಲಿ ಆಳ್ವಿಕೆ ನಡೆಸಿದ ವಿವರವಿದೆ. ವಡ್ಡು-ದರೋಜಿಯನ್ನು ಚಿನ್ನಯರಾಜನು ಆಳುವಾಗ ಸಂಡೂರಿನಲ್ಲಿನ ತ್ರಿಶಂಕುರಾಯ ಕಟ್ಟಿಸಿದ ಕೆರೆ (ಸೋಮನಹಳ್ಳಿ ಕೆರೆ) ಕೋಡಿ ಬಿದ್ದಾಗ ನಾರಿಹಳ್ಳ ಗಂಡಿ ಆಚೆಗೆ ಹೊರಗಂಡಿಯಿಂದ ನರಸಿಂಹಗಂಡಿಗೆ ಮೂರು ಹರದಾರಿ ಬಂನಹಳ್ಳಿ(ಬೂವನಹಳ್ಳಿ) ಆ ಕೆರೆ ಒಡೆದು, ದರೋಜಿ ಕೆರೆ ಒಡೆದು ಹೋಗಿತ್ತು.

ಕೆರೆ ಒಡೆದಾಗ ಅದರ ಮೇಲೆ ಹಳ್ಳದರಾಯನೆಂಬ (ಹನುಮಂತ ದೇವರು) ದೇವರು ಹಳ್ಳದ ಪಕ್ಕದಲ್ಲಿತ್ತು. ಚಿನ್ನಯರಾಜನಿಗೆ ಸ್ವಪ್ನದಲ್ಲಿ ತಿಳಿದ ಸಂಗತಿಯನ್ನು ಹೋಗಿ ನೋಡಲಾಗಿ ಅಲ್ಲಿ ದೇವರಿತ್ತು. ಅದಕ್ಕೆ ಹಳ್ಳದರಾಯನೆಂದು ಹೆಸರಿಟ್ಟು ಪಕ್ಕದಲ್ಲಿರುವ ಮಡುವಿಗೆ

ಹಳ್ಳದರಾಯನ ಮಡುವು ಎಂದು ಕರೆಯಲಾಯಿತು. ಇಂದಿಗೂ ಈ ದೇವಸ್ಥಾನವನ್ನು ನಾವು ಇಲ್ಲಿ ಇರುವುದನ್ನು ಕಾಣುತ್ತೇವೆ.

ಬೇಡರ ಮರುಳೆನವರ (ಮಳೆಲಾರು) ಚಿನ್ನಯರಾಜನ ಮಗ ಬಸಳನಾಯಕ ವಡ್ಡು-ದರೋಜಿ ಆಳುವಾಗ ಒಂದು ದಿನ ಬೇಟೆಯಾಡುತ್ತಾ ಹೋಗಲಾಗಿ ಪೂರ್ವದಲ್ಲಿ ನೇಮಿಯವರ ಸರದಾರ ಕಟ್ಟಿಸಿದ ಕೆರೆಯು ಒಡೆದು ಬಹಳ ದಿವಸವಾಗಿತ್ತು. ಇವನು ಜೀರ್ಣೋದ್ಧಾರ ಮಾಡಿದನು. ಬಸಳನಾಯಕನ ವಡಕು ಬಸವಣ್ಣ ದೇವರ ಗುಡಿಗೆ ಪೂರ್ವ ಭಾಗಕ್ಕಿತ್ತು. ಇವರು ಆಳ್ವಿಕೆ ನಡೆಸುತ್ತಿದ್ದಾಗ ಮೊಗಲರು ಆಕ್ರಮಿಸಿದ್ದರಿಂದ ಮರುಳನವರ ಪಾಳೆಯಗಾರರು ಗುಡೇಕೋಟೆ, ಜರಿಮಲೆ, ಬಾಣರಾವಿ, ವಡ್ಡು ಇತರೆಡೆಗಳಲ್ಲಿ ಇದ್ದರು.

ಈ ರಾಜ್ಯಕ್ಕೆ ಕೃಷ್ಣರಾಯ, ಅಚ್ಯುತರಾಯ ಮತ್ತು ಅಳಿಯರಾಮರಾಯರ ಅನಂತರ ಆನೆಗೊಂದಿ ಅರಸರ ಪ್ರೋತ್ಸಾಹವಿದ್ದಂತೆ ತಿಳಿದುಬರುತ್ತದೆ. ಮೊಗಲರು, ಚಿತ್ರದುರ್ಗದ ಅರಸರು, ಹೈದರಾಲಿ ಮತ್ತು ಘೋರ್ಪಡೆ ಮೊದಲಾದವರು ಈ ರಾಜ್ಯವನ್ನು ತಮ್ಮದಾಗಿಸಿಕೊಳ್ಳಲು ಪ್ರಯತ್ನಿಸಿದ್ದನ್ನು ಕಾಣುತ್ತೇವೆ.

ಟಿಪ್ಪು ಸುಲ್ತಾನನು ಆದವಾನಿ, ಆನೆಗೊಂದಿ, ಕನಕಗಿರಿಗಳಿಗೆ ಮುತ್ತಿಗೆ ಹಾಕಿದ ನಂತರ ಈ ಕಡೆ ಬರಲಾರಂಭಿಸಿದ. ಆ ಸಮಯದಲ್ಲಿ ದರೋಜಿ ಕೆರೆಯೊಳಗೆ ಇಳಿದು ಕೊಂಡಿದ್ದರಿಂದ ಆನೆಗೊಂದಿ, ಕನಕಗಿರಿ, ಸೀಮೆಗಳನ್ನು ಜಹಗಿರಿಯಾಗಿ ಬಬರ ಜಂಗಗೆ ಕೊಟ್ಟರು. ಹರಪನಹಳ್ಳಿಗೆ ಹೋಗುವಾಗ ಈ ಕೆರೆ ವಡಕು ಬಿದ್ದು ಸಂಡೂರು ಹಳ್ಳ, ಬ್ರಂಹ್ಮ ಸಮುದ್ರಹಳ್ಳ, ಅವಿನಮಡುವಿನ ಹಳ್ಳಗಳು ಕೂಡಿ ಕೆರೆ ವಡಕು ಬಂದಿದ್ದರಿಂದ ಜಹಗೀರಿದಾರ ಬಬರ ಜಂಗಗೆ ಕೆರೆ ಕಟ್ಟಿಸಲು ಹೇಳುವನು. ಆ ಅಧಿಕಾರಿ ರಾಮಾಜಿ ಕಿಲ್ಲೆದಾರ ಪಿರಖಾನಗೆ ಈ ಕೆರೆಯನ್ನು ಸುಂದರವಾಗಿ ಕಟ್ಟಿಸುವಂತೆ ಟಿಪ್ಪು ಹೇಳಿ ಹರಪನಹಳ್ಳಿಗೆ ಸೈನ್ಯದೊಂದಿಗೆ ಹೋದ ಸಂಗತಿ ತಿಳಿದುಬರುತ್ತದೆ. ಸ್ಥಳೀಯರು ಸಹ ಇದನ್ನೇ ಹೇಳುತ್ತಾರೆ.

ಆದರೆ ವಾಸ್ತವವಾಗಿ ಈ ಕೆರೆಯನ್ನು ಚಿನ್ನಯರಾಜನೇ ಕಟ್ಟಿಸಿರಬೇಕು ಎನಿಸುವುದು. ಒಡೆದ ಈ ಕೆರೆಯನ್ನು ತರುವಾಯ ಜೀರ್ಣೋದ್ಧಾರ ಕಾಮಗಾರಿ ಕೆಲಸ ಮಾಡಿಸಿರಬೇಕು. ಆನೆಗೊಂದಿ ಅರಸ ತಿರುಮಲರಾಯರು ಕೃಷ್ಣಾನದಿ ಕಡೆಯಿಂದ ಒಂದು ಕೆರೆಯನ್ನು ಪೂರ್ಣಗೊಳಿಸಿ ಮೂರು ವರ್ಷ ಆಳಿದರು. ಆಗ ಸ್ಥಳೀಯ ರಾಜನ ಬಗ್ಗೆ ವಿವರ ಸಿಗಲಿಕ್ಕಿಲ್ಲ ಎಂದು ಕಾಣುತ್ತದೆ.

ನಾರಿಹಳ್ಳ, ಅವಿನಮಡುವಿನಹಳ್ಳ, ವಡ್ರಹಳ್ಳಿಯ ಬ್ರಹ್ಮಂಸಮುದ್ರಹಳ್ಳ ಈ ಮೂರು ಹಳ್ಳಗಳಿಗೆ ತುಂಗಭದ್ರಾ ಸೇತುವೆ ಪೂರ್ವದಲ್ಲಿ ವಡಕಿನ ಬಾಯೊಳಗೆ ದರೋಜಿ ಹತ್ತಿರ ವಡ್ಡು ಕಟ್ಟುತ್ತಾರೆ. ಹೀಗೆ ಆನೆಗೊಂದಿಯ ತಿಮ್ಮಪ್ಪರಾಜ ಒಂದು ವರ್ಷ ಆಳಿದ ನಂತರ ಮಹಮದಲಿ ಬೇಗ ಅಮಲದಾರನು ಹಜಾರುಯಿಂದಾ ದರೋಜಿ ಕೆರೆ ಕಾಮಗಾರಿ ಒಳಗೆ ೧೭೯೫ ರಾಕ್ಷಸ ಸಂವತ್ಸರದಲ್ಲಿ ಪೂರೈಕೆಯಾಯಿತು. ಹಿರೇ ವೆಂಕಟಪತಿರಾಯರ ಕಾಲದಲ್ಲಿ ಮರುಳನವರ ವಂಶದ ಅಳಿಯ ಮದಕರಿನಾಯಕ ವಡ್ಡುಗೆ ನೆಲೆಯೂರಿದ ದರೋಜಿಗೆ ಆನಂತರ ಬಂದಾಗ ಆನೆಗೊಂದಿ ದೊರೆಯ ಸಲಹೆಯಂತೆ ಮದಕರಿ ಚಿತ್ರದುರ್ಗಕ್ಕೆ ವಾಪಸ್ಸಾದ.

ಈ ಸಂದರ್ಭದಲ್ಲಿ ಚಿನ್ನಯರಾಜನ ಆಳ್ವಿಕೆಯಲ್ಲಿ ಅವನ ರಾಜ್ಯಕ್ಕೆ (ವಡ್ಡು-ದರೋಜಿ) ಈ ಹಳ್ಳಿಗಳು ಸೇರಿದ್ದವು. ಅವುಗಳೆಂದರೆ ತೋರಣಗಲ್ಲು, ಗೋನಾಹಳ್ಳಿ, ಗಂಗಲಾಪುರ, ಬವನಹಳ್ಳಿ, ಶ್ರೀರಂಗಾಪುರ, ಗಾದಿಗನೂರು, ಕುರೆಕುಪ್ಪೆ, ಗೌರಿಪುರ, ವೇಮನಹಳ್ಳಿ, ಬಸಾಪುರ, ಧರ್ಮಸಾಗರ, ತಾಳೂರು, ಬನ್ನಿಹಟ್ಟಿ, ಇಂಗಳಗಿ, ಕೋಟಗನ ಹಾಳ, ನಾಗಲಾಪುರ ಮತ್ತು ಜೋಗ ಇತ್ಯಾದಿ. ಈ ವಡ್ಡಿನ ಗಡಿ ಪ್ರದೇಶಗಳು : ಇಂದ್ರ ದಿಕ್ಕಿಗೆ ಹತ್ತಿಗನಾಳು( ಮೇರೆ), ಆಗ್ನೇಯಕ್ಕೆ ಕರಡಿಕೊಳಲು, ಯಮ-ಮಾಗವಗೊಳ, ಪಿಚಲಕುಂಟೆ, ವರುಣ-ಆನೆಗುಂಡು, ನೈಋತ್ಯಕ್ಕೆ ತಾಳೂರು, ವಾಯುವ್ಯ ದಿಕ್ಕಿಗೆ ಬಸಾಪುರ, ಕುಬೇರ ದಿಕ್ಕಿಗೆ ಕುರೆಕುಂಪೆ ಮತ್ತು ಈಶಾನ್ಯಕ್ಕೆ ತೋರಣಗಲ್ಲುಗಳಿವೆ. ವಡ್ಡು ಗ್ರಾಮದ ಪಕ್ಕದಲ್ಲಿ ನಾರಿಹಳ್ಳ ಹರಿಯುತ್ತದೆ.

ಇದು ನರಸಿಂಹದೇವರ ಗಂಡಿಯಿಂದ ಸೊಂಡೂರು ಮೂಲಕ ಭೀಮನಗಂಡಿ, ಎತ್ತಿನಹಟ್ಟಿ, ಬಳಸಿಕೊಂಡು ಗೌರೀಪುರದ ಬಳಿಯಿಂದ ದರೋಜಿ ಕೆರೆಯನ್ನು ಸೇರುತ್ತದೆ. ಇಂದು ವಡ್ಡು ಗ್ರಾಮ ಹಾಳಾದ ಪಟ್ಟಣವಾಗಿದೆ. ಅಳಿದುಳಿದ ಕೋಟೆಯ ಅವಶೇಷಗಳು ತಾಳೂರು ಗ್ರಾಮದ ರಸ್ತೆ ಭಾಗದಲ್ಲಿ (ಹೊಲಬು) ಕಂಡುಬರುತ್ತವೆ. ಚಿನ್ನಯರಾಜನ ನಂತರ ವಡ್ಡುವಿನ ಇತಿಹಾಸದಲ್ಲಿ ಸಮರ್ಥ ಅರಸ ಬರಲಿಲ್ಲ. ಚಿನ್ನಯರಾಜನ ವಂಶವು ರಾಮಪ್ಪನಾಯಕನಿಗೆ ಕೊನೆಯಾಯಿತು. ತರುವಾಯ ಸಂಡೂರಿನ ಬಿಸಾಳನಾಯಕ ಎತ್ತಿನಹಟ್ಟಿಯನ್ನು ಜಹಗೀರು ಕೊಟ್ಟನು. ಇದನ್ನು ವಾಪಸ್ಸು ಪಡೆದಾಗ ರಾಮಪ್ಪನಾಯಕನಿಗೆ ಆನೆಗೊಂದಿ ನರಪತಿಗಳಾದ ವೆಂಕಟಪತಿರಾಯರ ಬಳಿಗೆ ಹೋದಾಗ ಗಾದಿಗನೂರು, ಗುಂದಿಗೇರಿ, ವದ್ದಿಗೇರಿ, ಕಾಕುಬಾಳುಗಳನ್ನು ಉಂಬಳಿ ಕೊಡುತ್ತಾನೆ.

ಇವನ ಮಗ ಅಪ್ಪನಾಯಕ ಅಧಿಕಾರದಲ್ಲಿದ್ದನು. ಇವನ ಸಾಧನೆಗಳ ಬಗೆಗೆ ತಿಳಿದುಬಂದಿಲ್ಲ. ಅಪ್ಪನಾಯಕನ ಮಗ ಜೆಟೆಂಗನಾಯಕ ಅಧಿಕಾರಕ್ಕೆ ಬಂದ. ಇವನು ಕಂಪ್ಲಿಯಲ್ಲಿ ತಳವಾರಿಕೆ ಮಾಡುತ್ತಿದ್ದ. ಈ ಅರಸ ಮಡಿದಾಗ ಮಗ ಬಸಾಳನಾಯಕ ತಳವಾರಿಕೆ ಜವಾಬ್ದಾರಿ ವಹಿಸಿಕೊಳ್ಳುವನು. ವಡ್ಡಿನ ಗೌಡ, ಶಾನಭೋಗ ಹನುಮಂತಗೌಡ, ಮೊದಲಾದವರು ಕೈಫಿಯತ್ತಿನ ವಿವರವನ್ನು ನೀಡಿದ್ದಾರೆ. ಇಂದು ವಡ್ಡಿನಲ್ಲಿ ಅನೇಕ ಪ್ರಾಚ್ಯಾವಶೇಷಗಳು (ಕೋಟೆ) ಕಂಡುಬರುವವೆ ಹೊರತು ಚರಿತ್ರೆ ಮಸುಕಾಗಿದೆ.

ಈ ಗ್ರಾಮದಲ್ಲಿ ಏಳು ಹುಡೆವು ಬುರುಜುಗಳಲ್ಲದೆ ಕೋಟೆ-ಪೇಟೆಗಳಿದ್ದವು. ಇರುವ ಸುರಂಗಮಾರ್ಗ ಮುಚ್ಚಿ ಹೋಗಿದೆ. ಇಲ್ಲಿಗೆ ಹತ್ತಿರದಲ್ಲಿದ್ದ ಬರ್ಮಪ್ಪ ಎಂದು ಹೇಳುವ ವೀರಗಲ್ಲಿದೆ. ಬಹುಶಃ ಇದು ವಡ್ಡು-ದರೋಜಿಯನ್ನು ಆಳಿದ ಪಾಳೆಯಗಾರ ಚಿನ್ನಯರಾಜನ ಸ್ಮಾರಕವೇ ಆಗಿರಬೇಕು. ಒಟ್ಟಿನಲ್ಲಿ ವಡ್ಡು ಮತ್ತು ದರೋಜಿಗಳನ್ನು ವಿಜಯನಗರ ಅವಧಿಯ ನಂತರ ಆನೆಗೊಂದಿ ಅರಸರ ಅಧೀನದಲ್ಲಿದ್ದುಕೊಂಡು ಆಳ್ವಿಕೆ ನಡೆಸಿದಂತ ಬೇಡ ನಾಯಕರುಗಳಲ್ಲಿ ಬೊಮ್ಮಂತರಾಜನ ವಂಶಸ್ಥರು ತಮ್ಮ ರಾಜಕೀಯ ನೆಲೆಗಳನ್ನಾಗಿ ಮಾಡಿಕೊಂಡು ಬಳ್ಳಾರಿಯ ಪಶ್ಚಿಮ ಭೂಭಾಗದ ಮೇಲೆ ಒಡೆತನ ಸ್ಥಾಪಿಸಿದ್ದರು. ವಿಜಯನಗರೋತ್ತರ ಸಂದರ್ಭದಲ್ಲಿ ಇಂಥ ಸಂಸ್ಥಾನಿಕರು ಮತ್ತು ಕಿರುಪಾಳೆಯಗಾರರು ನಿರ್ಣಾಯಕ ಪಾತ್ರವಹಿಸಿದ್ದು ಗಮನಾರ್ಹ.

**ಹೈದರಾಲಿ ಮತ್ತು ಟಿಪ್ಪುಸುಲ್ತಾನ**

ಕ್ರಿ.ಶ.೧೬೭೮ರಲ್ಲಿ ಬಳ್ಳಾರಿ ಸುತ್ತಮುತ್ತ ಪ್ರದೇಶ ಬಿಜಾಪುರ ಸುಲ್ತಾನನಿಂದ ಶಿವಾಜಿಯ ಆಳ್ವಿಕೆಗೆ ಒಳಪಟ್ಟಿತು. ಈ ಪ್ರದೇಶದ ಸುತ್ತಮುತ್ತ ಇದ್ದ ಪಾಳೆಗಾರರ ಸಹಾಯದಿಂದ ಬಿಜಾಪುರ ಸುಲ್ತಾನನ ವಶದಲ್ಲಿದ್ದ ಈ ಪ್ರದೇಶವನ್ನು ಶಿವಾಜಿ ವಶಪಡಿಸಿಕೊಂಡು ತನ್ನ ವಿಸ್ತರಣಾ ಮಾರ್ಗವನ್ನು ಸ್ವಚ್ಛ ಮಾಡಿಕೊಂಡ. ಆದರೂ ಕೆಲವು ಭಾಗ ಸುಲ್ತಾನನ ಅಧೀನದಲ್ಲಿತ್ತು. ಮುಂದೆ ೧೬೮೭ರಲ್ಲಿ ಔರಂಗಜೇಬನ ಕಾಲದಲ್ಲಿ ಈ ಭಾಗ ಮರಾಠರ ವಶವಾಯಿತು.

ಮುಂದೆ ಕ್ರಿ.ಶ.೧೭೬೮ರಲ್ಲಿ ಹೈದರಾಲಿ ಜಸಂತ್ ಜಂಗ್‌ನನ್ನು ಸೋಲಿಸಿ ಬಳ್ಳಾರಿಯನ್ನು ಮೈಸೂರು ಸಂಸ್ಥಾನಕ್ಕೆ ಸೇರಿಸಿಕೊಂಡನು. ೧೭೮೬ರಲ್ಲಿ ಈತನ ಮಗ ಟಿಪ್ಪು ಸುಲ್ತಾನನು ರಾಜ್ಯವನ್ನು ವಿಸ್ತರಿಸುತ್ತಾ ಆದವಾನಿಯನ್ನು ವಶಪಡಿಸಿಕೊಂಡನು. ನಂತರ ಮೈಸೂರು ದುರ್ಬಲಗೊಂಡಾಗ ಅದನ್ನು ಕಾಪಾಡಲು ಬಂದ ಹೈದರಾಲಿ ಮತ್ತು ಆತನ ಮಗ ಟಿಪ್ಪು

ಸುಲ್ತಾನರ ರಾಜ್ಯದಲ್ಲಿ ಸಂಡೂರು ಇತ್ತು ಎಂಬುದಕ್ಕೆ ಕ್ರಿ ಶ.೧೭೬೮ರಲ್ಲಿ ಬಳ್ಳಾರಿಯನ್ನು ಪ್ರವೇಶಿಸಿದ ಹೈದರಾಲಿಯಿಂದ ನಿರ್ಮಾಣ ಕಾರ್ಯ ಪ್ರಾರಂಭವಾಗಿ ಟಿಪ್ಪು ಸುಲ್ತಾನನಿಂದ ಸಂಪೂರ್ಣಗೊಂಡ ಸಣ್ಣ ಕೋಟೆ (ಕೃಷ್ಣಾನಗರದಲ್ಲಿ) ಯೊಂದು ಇಂದಿಗೂ ಇರುವುದನ್ನು ಕಾಣುತ್ತೇವೆ. ಹೈದರಾಲಿ ಮತ್ತು ಟಿಪ್ಪುವಿನ ಅವಧಿಯು (೧೭೬೨-೧೭೯೯) ಕರ್ನಾಟಕದ ಬಹುಭಾಗಕ್ಕೆ ಒಂದು ರೀತಿಯ ಏಕತೆಯನ್ನು ತಂದು ಕೊಡುವುದರಲ್ಲಿ ಸಫಲವಾಗಿತ್ತು.

**ಬ್ರಿಟಿಷರ ಆಳ್ವಿಕೆ (ಆಗಮನ)**

೧೭೯೦ರಲ್ಲಿ ಬ್ರಿಟಿಷರ ಆಗಮನ ಸಂಡೂರಿಗೆ ಮೊಟ್ಟ ಮೊದಲ ಬಾರಿಗೆ ಆಯಿತು. ಅಂದಿನ ಭಾರತದ ಗವರ್ನರ್ ಜನರಲ್‌ನಾಗಿದ್ದ ಲಾರ್ಡ್‌ಕಾರ್ನ್‌ವಾಲಿಸ್ ಹಾಗೂ ಮರಾಠರು ಮತ್ತು ನಿಜಾಮರೊಡನೆ ಕೂಡಿ ಟಿಪ್ಪು ಸುಲ್ತಾನನ ವಿರುದ್ಧ ಕರಾರು ಒಪ್ಪಂದ ಮಾಡಿಕೊಂಡನು. ಆ ಕರಾರು ಏನೆಂದರೆ ಟಿಪ್ಪು ಸಂಪಾದಿಸಿಕೊಂಡಿರುವಂತಹ ರಾಜ್ಯಗಳ ಮೇಲೆ ಈ ಮೂವರೂ ಸೇರಿ ಹೋರಾಟ ಮಾಡಿ ಜಯಿಸಿಕೊಂಡ ಭಾಗಗಳನ್ನು ಸಮವಾಗಿ ಹಂಚಿಕೊಳ್ಳಬೇಕಾಗಿತ್ತು ಎನ್ನುವಂತದ್ದು. ಅದೇ ರೀತಿಯಾಗಿ ೧೭೯೨ರಲ್ಲಿ ಟಿಪ್ಪುಸುಲ್ತಾನನು ಸೋತಾಗ ಒಪ್ಪಂದದಂತೆ ಸಂಡೂರಿನ ಸೇನಾಪತಿ ಸಂಡೂರಿಗೆ ಒಡೆಯನಾದ. ಕ್ರಿ.ಶ.೧೮೧೭ರಲ್ಲಿ ಬೆಸ್ಸಿನ್ ಒಪ್ಪಂದದಂತೆ ಸಂಡೂರು ಬ್ರಿಟಿಷ್‌ರ ವಶಕ್ಕೆ ಒಳಪಟ್ಟಿದ್ದರೂ ಸಹ ಕ್ರಿ ಶ.೧೮೧೮ರಲ್ಲಿ ಪುನಃ ಘೋರ್ಪಡೆ ವಂಶದವರಿಗೆ ಸಂಡೂರಿನ ಅಧಿಕಾರವನ್ನು ಬಿಟ್ಟುಕೊಡಲಾಯಿತು.

**ಪೇಶ್ವೆಗಳು**

**ಘೋರ್ಪಡೆ ಅರಸು ಮನೆತನ**

ಸಂಡೂರಿನ ಘೋರ್ಪಡೆ ರಾಜಮನೆತನ ಸಂಸ್ಥಾನವಾಗಿ ಚರಿತ್ರೆಯ ಸಂದರ್ಭದಲ್ಲಿ ಸಂಡೂರಿನ ಪಾಳೆಗಾರರೆಂದೇ ಪ್ರಸಿದ್ಧಿ ಪಡೆದಿರುವರು. ಇವರ ಮೂಲಪುರುಷ ಸುಜನಸಿಂಗ್ ಅಥವಾ ಸಜ್ಜನಸಿಂಗ್ ಎಂದು ಇತಿಹಾಸದ ಮೂಲಗಳು ತಿಳಿಸುತ್ತವೆ. ಈತನು ರಾಜಸ್ಥಾನದಲ್ಲಿ ಆಳುತ್ತಿದ್ದ ಸಿಸೋದಿಯ ವಂಶದವನು. ದೆಹಲಿಯ ಸುಲ್ತಾನ ಅಲ್ಲಾವುದ್ದೀನ್ ಖಿಲ್ಜಿ ೧೩೩೩ರಲ್ಲಿ ಚಿತ್ತೋರನ್ನು ಆಕ್ರಮಿಸಿ ವಶಪಡಿಸಿಕೊಂಡಾಗ ಅಲ್ಲಿಂದ ದಕ್ಷಿಣದ ಕಡೆಗೆ ವಲಸೆ ಬಂದ ಈತ ಮಹಾರಾಷ್ಟ್ರದಲ್ಲಿ ನೆಲೆಸಿದನು. ೧೩೫೦ರಲ್ಲಿ ಈತನು ಮರಣಿಸಿದ ನಂತರದ ತಲೆಮಾರಿನವರು ಆಗ ದಕ್ಷಿಣ ಭಾರತದಲ್ಲಿ ತಲೆಯೆತ್ತಿದ್ದ ಬಹುಮನಿ ಸುಲ್ತಾನರ ಆಶ್ರಯದಲ್ಲಿ ಸೇನಾಪತಿಗಳಾಗಿ

ಸೇವೆಗೈಯುತ್ತಾ ಬಂದರು. ಅವರಲ್ಲಿ ೪-೫ ತಲೆಮಾರುಗಳ ನಂತರ ಇಂದ್ರಸೇನನ ಹೆಸರು ಮುಖ್ಯವಾಗುತ್ತದೆ. ಆತನಿಗೆ ಇಬ್ಬರು ಮಕ್ಕಳು ಕರಣಸಿಂಗ್ ಮತ್ತು ಶುಭಕೃಷ್ಣ.

ಕರಣಸಿಂಗ್ ದೇವಗಿರಿ ಭಾಗದಲ್ಲಿದ್ದ. ಮಹಾರಾಷ್ಟ್ರದಲ್ಲಿದ್ದ ವಿಶಾಲಗಡವು ಬಹಮನಿ ಸುಲ್ತಾನನಿಗೆ ಒಂದು ಆಹ್ವಾನವಾಗಿತ್ತು. ಆತನು ೧೪೫೩ರಲ್ಲಿ ಅದನ್ನು ಮುತ್ತಿಗೆ ಹಾಕಿ ಜಯಿಸದೆ ಹೋಗಿದ್ದನು. ನಂತರ ೧೪೭೦ರಲ್ಲಿ ಆತನ ಮಂತ್ರಿ ಮಹಮ್ಮದ್ ಗವಾನನು ತನ್ನ ಸೇವೆಯಲ್ಲಿದ್ದ ಕರಣಸಿಂಗ್ ಮತ್ತು ಆತನ ಮಗ ಭೀಮಸಿಂಗ್ ಇವರೊಡನೆ ಆ ಕೋಟೆಯನ್ನು ಮತ್ತೆ ಮುತ್ತಿದ. ಆಗ ಕರಣಸಿಂಗ್ ಮತ್ತು ಭೀಮಸಿಂಗರು 'ಉಡ'ದ ಸಹಾಯದಿಂದ ಆ ಅಭೇದ್ಯ ಕೋಟೆಯನ್ನು ಹತ್ತಿ ಅದನ್ನು ಪ್ರವೇಶಿಸಿ ಬಾಗಿಲನ್ನು ತೆರೆದು ತಮ್ಮ ಸೈನ್ಯ ಒಳ ಬರಲು ಅವಕಾಶ ಮಾಡಿಕೊಟ್ಟು ವಿಜಯಕ್ಕೆ ಕಾರಣ ಕರ್ತರಾದರು.

ಆ ಪ್ರಯತ್ನದಲ್ಲಿ ತಂದೆ ಕರಣಸಿಂಗ್ ಮಡಿದನು. ಮಗನಾದ ಭೀಮಸಿಂಗ್ ಬಹುಮನಿ ಸುಲ್ತಾನನು ೧೪೭೧ರಲ್ಲಿ ಸನ್ನದನ್ನು ನೀಡಿ 'ರಾಜಾ ಘೋರ್ಪಡೆ ಬಹದ್ದೂರ್' ಎಂಬ ಪದವಿಯನ್ನಿತ್ತು ಮುಧೋಳದೊಡನೆ ಸುತ್ತಲಿನ ೮೪ ಹಳ್ಳಿಗಳನ್ನು ಜಹಗೀರಾಗಿ ಕೊಟ್ಟು ಗೌರವಿಸಿದನು. ಹೀಗಾಗಿ ಇವರ ವಂಶ ಘೋರ್ಪಡೆ (ಘೋರ್ಪಡೆ ಎಂದರೆ 'ಉಡ' ಎಂದು ಅರ್ಥ) ಎಂದೇ ಅಂದಿನಿಂದ ಪ್ರಸಿದ್ಧವಾಯಿತು. ಮುಂದೆ ಘೋರ್ಪಡೆ ವಂಶವನ್ನು ಕ್ರಿ.ಶ.೧೬೦೦ರ ಸುಮಾರಿನಲ್ಲಿ ಗುರುತಿಸಲು ಸಾಧ್ಯವಾಗುತ್ತದೆ. ಶಿವಾಜಿಯ ತಂದೆ ಶಾಹಜಿ ಬಿಜಾಪುರ ಸುಲ್ತಾನರಲ್ಲಿ ಕೆಲಸ ಮಾಡುತ್ತಿದ್ದು ಆತನ ಹತ್ತಿರ ಘೋರ್ಪಡೆ ವಂಶದ ಮಹಲೋಜಿ ಅಥವಾ ಮಾಲೋಜಿಯು ಸೇನಾಪತಿಯಾಗಿದ್ದ ಎಂದು ತಿಳಿದುಬರುತ್ತದೆ.

ಮುಂದೆ ಬಹಿರ್ಜಿ ಹಿಂದೂರಾಯನೇ ಸಂಡೂರಿನ ಘೋರ್ಪಡೆಯ ಮನೆತನದ ಸ್ಪಷ್ಟವಾದ ಪೂರ್ವಜ. ಬಹಿರ್ಜಿ ಹಿಂದೂರಾವ್ ಘೋರ್ಪಡೆ ಕೊಂಕಣ ಗೋವಾಗಳಲ್ಲಿ ಹಿಡಿತ ಹೊಂದಿದ್ದ. ಸಂಡೂರು ಗುತ್ತಿಗಳೂ ಆತನ ವಶದಲ್ಲಿದ್ದವು. ಪೋರ್ಚುಗೀಸರ ಗೆಳೆತನವನ್ನು ಸಂಪಾದಿಸಿದ್ದ. ಆತನ ಮುದ್ರೆಯಲ್ಲಿ "ಮಾಮಲಾ ಕತ್ಮದಾರ್ ಶಂಶೇರ್ ಬಹದ್ದೂರ್ ಹಿಂದೂರಾವ್ ಘೋರ್ಪಡೆ ಛತ್ರಪತಿಯ ಸೇನಾಪತಿ" ಎಂದು ಲಿಖಿತವಾಗಿತ್ತು. ತನ್ನ ಮಾತಿನಂತೆಯೇ ಕತ್ತಿಯಲ್ಲೂ ಖಂಡಿತವಾಗಿ ಎಂದು ಪ್ರಸಿದ್ಧನಾಗಿದ್ದ. ಆತನ ಇಷ್ಟ ದೇವತೆ ಷಣ್ಮುಖನಾಗಿದ್ದ. ಬಹಿರ್ಜಿ ಹಿಂದೂರಾಯನು ತೀರಿದ ನಂತರ ಮಗ ಸಿದ್ಧೋಜಿರಾವ್ ಘೋರ್ಪಡೆಯು ಜರಿಮಲೆ ಪಾಳೆಗಾರರು ವಶಪಡಿಸಿಕೊಂಡಿದ್ದ ಸಂಡೂರು ಕಣಿವೆ ಪ್ರದೇಶವನ್ನು

೧೭೧೩ರಲ್ಲಿ ಮತ್ತೆ ವಶಪಡಿಸಿಕೊಂಡನು. ಅವರು ಮತ್ತೆ ೧೭೨೮ರಲ್ಲಿ ಆಕ್ರಮಿಸಿದಾಗ ಸೋಲಿಸಿ ಕಳಿಸಿದ ಗುತ್ತಿಯಂತೂ ಆತನ ವಶದಲ್ಲೇ ಇತ್ತು. ಸಿದ್ದೋಜಿ ೧೭೩೧ರಲ್ಲಿ ತೀರಿದ ಮೇಲೆ ಆತನ ಮಗ ಮುರಾರಿರಾವ್ ಘೋರ್ಪಡೆ ಗುತ್ತಿ-ಸಂಡೂರು ಪ್ರದೇಶದ ಆಡಳಿತ ವಹಿಸಿಕೊಂಡ. ಆತನ ಸಹೋದರ ದೌಲತ್ ರಾವ್ ಗಜೇಂದ್ರಗಡದಲ್ಲಿ ಆಡಳಿತ ವಹಿಸಿಕೊಂಡ.

ಕ್ರಿ.ಶ.೧೭೭೫-೭೬ರ ದಾಳಿಯಲ್ಲಿ ಹೈದರಾಲಿಯು ಗುತ್ತಿಯನ್ನು ಹಿಡಿದು ಮುರಾರಿರಾಯನನ್ನು ಕೊಪ್ಪಳ ದುರ್ಗಕ್ಕೆ ಕಳಿಸಿದನು. ಅವನು ಕಾರಾಗೃಹದಲ್ಲಿಯೇ ಕಾಲವಾದನು. ಮುರಾರಿರಾವ್‌ಗೆ ಇದ್ದ ಇಬ್ಬರು ಪುತ್ರರು ತಂದೆ ಮರಣಕ್ಕಿಂತ ಮೊದಲೇ ಮಡಿದರು. ಒಟ್ಟಿನಲ್ಲಿ ೧೭೩೧ ರಿಂದ ೧೭೭೬ರವರೆಗೆ ಸಂಡೂರು ಗುತ್ತಿಗಳನ್ನು ಆಳಿದ ಮುರಾರಿರಾಯನು ಘೋರ್ಪಡೆ ವಂಶದಲ್ಲೇ ಅತ್ಯಂತ ಶಕ್ತಿಶಾಲಿ ಅಧಿಪತಿ ಎನ್ನಬಹುದು. ಗುತ್ತಿಯನ್ನೇ ಕೇಂದ್ರವನ್ನಾಗಿ ಮಾಡಿಕೊಂಡ ಈತನ ನೆನಪನ್ನು ಗುತ್ತಿಕೋಟೆ ಮಾಡಿಕೊಡುವಂತಿದೆ. ಈತನು 'ಗುತ್ತಿ ಪಣಮ್' ಎಂಬ ಸ್ವಂತ ಚಿನ್ನದ ನಾಣ್ಯಗಳನ್ನು ಬಳಕೆಗೆ ತಂದಿದ್ದ. ರಣ ತಾಂತ್ರಿಕವಾದ ಅಭೇದ್ಯವಾದ ಕೋಟೆ ಗುತ್ತಿಯದಾಗಿದ್ದರೆ, ಪ್ರಕೃತಿ ವರದಾನವಾಗಿ ಸುತ್ತುವರಿದ ಲೋಹಾದ್ರಿಯೇ ಅಭೇದ್ಯ ಕೋಟೆಯಾಗಿತ್ತು.

ಸಂಡೂರಿಗೆ ಈತನ ಅಶ್ವಸೈನ್ಯ ಮತ್ತು ಪದಾತಿಸೈನ್ಯ ಸಾಹಸಗಳಿಗೆ ಆ ಕಾಲದಲ್ಲಿ ಪ್ರಸಿದ್ಧವಾಗಿದ್ದವು. ಮುರಾರಿರಾಯನಿಗೆ ಮಕ್ಕಳಿಲ್ಲದ್ದರಿಂದ ತನ್ನ ಚಿಕ್ಕಜ್ಜ ದತ್ತವಾಡದ ಮಾಲೋಜಿರಾಯನ ಮರಿ ಮೊಮ್ಮಗ ಶಿವರಾಯನನ್ನು ದತ್ತು ತೆಗೆದುಕೊಂಡಿದ್ದ. ಆತನು ಸಂಡೂರಿಗೆ ಬಂದು ನೆಲೆಸಿದನು. ಆ ವೇಳೆಗಾಗಲೇ ಟಿಪ್ಪುಸುಲ್ತಾನನು ಬಳ್ಳಾರಿ ಮತ್ತು ಸಂಡೂರಿನ ಕೃಷ್ಣಾನಗರ ಕೋಟೆಗಳನ್ನು ಕಟ್ಟಿಸಿದ್ದನು. ಟಿಪ್ಪುವನ್ನು ಸಂಡೂರಿನಿಂದ ಹೊರಗಟ್ಟುವ ಯುದ್ಧದಲ್ಲಿ ೧೭೮೫ರಲ್ಲಿ ಮಡಿದನು. ಆಗ ಆತನ ತಮ್ಮ ವೆಂಕಟರಾಯ ಶಿವರಾಯನ ಮಗ ೨ ವರ್ಷದ ಸಿದ್ದೋಜಿಯನ್ನು ರಕ್ಷಿಸುತ್ತ ಟಿಪ್ಪುವಿನೊಡನೆ ಒಪ್ಪಂದ ಮಾಡಿಕೊಂಡನು.

ಈ ಮಗು ಸಿದ್ದೋಜಿಯೂ ತನ್ನ ೧೩ನೇ ವಯಸ್ಸಿನಲ್ಲೇ ತೀರಿಕೊಂಡನು. ಮತ್ತೊಮ್ಮೆ ದತ್ತವಾಡದಿಂದಲೇ ಖಂಡೇರಾಯನ ಮಗ ೨ನೇ ಶಿವರಾಯನನ್ನು ಸಂಡೂರಿಗೆ ದತ್ತು ತೆಗೆದುಕೊಳ್ಳಲಾಯಿತು. ಈತನೂ ವೆಂಕಟರಾಯನೂ ಸೇರಿ ಸಂಡೂರನ್ನು ಪ್ರಬಲಗೊಳಿಸಿದರು. ಕ್ರಿ.ಶ.೧೭೯೦ರಲ್ಲಿ ಟಿಪ್ಪುವಿನ ಸೈನ್ಯವನ್ನು ಸೋಲಿಸಿ ಪುನಃ ಸಂಡೂರು ಸಂಸ್ಥಾನವನ್ನು ತನ್ನ ಸ್ವಾಧೀನಕ್ಕೆ ಪಡೆದನು. ಕ್ರಿ.ಶ.೧೭೯೨ರಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಗೂ

ಟಿಪ್ಪುಸುಲ್ತಾನನಿಗೂ ಶಾಂತಿ ಒಪ್ಪಂದವಾಗಿ ಘೋರ್ಪಡೆ ವಂಶದವರಿಗೆ ಈ ಸಂಸ್ಥಾನ ಉಳಿಯಿತು. ಕ್ರಿ. ಶ.೧೭೯೬ರಲ್ಲಿ ಸಿದ್ಧೋಜಿರಾವನು ಕಾಲವಾದನು. ಆಗ ಸಂಬಂಧಿಯಾದ ಖಂಡೇರಾಯನ ಹಿರಿಯ ಪುತ್ರ ಶಿವರಾಯನು ಮಡಿದ ಅರಸನ ಪತ್ನಿಗೆ ದತ್ತು ಪುತ್ರನಾದನು. ಇವನು ಕ್ರಿ.ಶ.೧೮೦೦ರವರೆಗೂ ಸಂಡೂರಿನ ಅರಸನಾಗಿದ್ದನು. ನಂತರ ಬಂದವರು ಬ್ರಿಟಿಷರೊಡನೆ ಮಧುರ ಸಂಬಂಧವನ್ನು ಹೊಂದಿದ್ದು ಕ್ರಿ.ಶ.೧೯೪೭ರವರೆಗೂ ಸಂಡೂರಿನ ಅರಸನಾಗಿ ಮುಂದುವರಿದರೂ ಅವರಲ್ಲಿ ೧೮೪೦ರಲ್ಲಿ ಶಿವರಾಯನು ತೀರಿಕೊಂಡನು. ಆದರೆ ಆತನಿಗೆ ಮಕ್ಕಳಿಲ್ಲದ್ದರಿಂದ ಆತನ ತಮ್ಮ ಭುಜಂಗರಾಯನ ಮಗ ವೆಂಕಟರಾಯ ಅಧಿಕಾರ ವಹಿಸಿಕೊಂಡನು.

ಈ ವೆಂಕಟರಾಯನು ೧೮೬೧ರಲ್ಲಿ ಮರಣಿಸಿದ ನಂತರ ಅವನ ಮಗ ಶಿವಷಣ್ಮುಖರಾಯ ಅಧಿಕಾರ ವಹಿಸಿಕೊಂಡನು. ಇಂಗ್ಲೀಷ್ ಸರಕಾರದಿಂದ 'ರಾಜಾ' ಎಂಬ ಅಭಿದಾನ ದೊರೆಯಿತು. ದತ್ತು ಅಧಿಕಾರವು ಮಾನ್ಯ ಮಾಡಲ್ಪಟ್ಟಿತು. ಶಿವಷಣ್ಮುಖರಾಯನ ನಂತರ ಆತನ ತಮ್ಮ ೧೮೭೮ರಲ್ಲಿ ರಾಜನಾದನು. ಆತನ ತರುವಾಯ ೧೮೯೩ರಲ್ಲಿ ರಾಮಚಂದ್ರ ವಿಠಲರಾವನ ಮಗ ವೆಂಕಟರಾವ್‌ನು ಅರಸನಾದನು. ವೆಂಕಟರಾವ್ ೧೯೨೭ರಲ್ಲಿ ತೀರಿದಾಗ ಆತನಿಗೆ ಮಕ್ಕಳಿರಲಿಲ್ಲ. ಆಗ ಮತ್ತೊಮ್ಮೆ ಘೋರ್ಪಡೆ ವಂಶದ ಶಾಖೆ ಬದಲಾಯಿತು. ಇಲ್ಲಿಯವರೆಗೆ ಆಳಿದ ಶಾಖೆ ಬದಲಾಗಿ ೧೫೦ ವರ್ಷಗಳ ಹಿಂದೆ ಗುತ್ತಿ-ಸಂಡೂರು-ಗಜೇಂದ್ರಗಡಗಳನ್ನಾಳಿದ್ದ ಮುರಾರಿರಾವ್ ಘೋರ್ಪಡೆಯ ತಲೆಮಾರಿನ ಗಜೇಂದ್ರಗಡದ ಶಾಖೆಗೆ ಬದಲಾಯಿತು.

ಗುತ್ತಿಯ ಮುರಾರಿರಾವ್ ಘೋರ್ಪಡೆಯ ತಮ್ಮ ದೌಲತ್ ರಾವ್ ಗಜೇಂದ್ರಗಡದಲ್ಲಿದ್ದು ಆತನ ವಂಶ ಅಲ್ಲೇ ಮುಂದುವರಿದ್ದಿತ್ತು. ಆ ವಂಶದ ಭುಜಂಗರಾವ್ ತಾರಾಬಾಯಿಯವರ ಮಗ ಶ್ರೀಯಶವಂತರಾವ್ ಘೋರ್ಪಡೆಯವರು ೧೯೨೮ರಲ್ಲಿ ಸಂಡೂರಿನ ಸಂಸ್ಥಾನದ ರಾಜರಾಗಿ ಅಧಿಕಾರ ವಹಿಸಿಕೊಂಡರು. ಇವರ ನಂತರ ಇವರ ಹಿರಿಯ ಮಗ ಎಂ.ವೈ.ಘೋರ್ಪಡೆಯವರು ಅಧಿಕಾರ ಸ್ವೀಕರಿಸಿದರು. ೧೯೫೪ರಲ್ಲಿ ಕಾಂಗ್ರೇಸ್ ಪಕ್ಷವನ್ನು ಸೇರಿ ಪಂಚಾಯಿತಿ ಅಧ್ಯಕ್ಷ ಸ್ಥಾನದಿಂದ ಪ್ರಾರಂಭಿಸಿ ಕರ್ನಾಟಕ ಸರಕಾರದ ಮಾನ್ಯಮಂತ್ರಿಗಳಾಗಿ ದೀರ್ಘಕಾಲ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ೧೯೫೭ ರಿಂದ ೧೯೭೨ರವರೆಗೆ ನಿರಂತರವಾಗಿ ಈ ಕ್ಷೇತ್ರದ ವಿಧಾನ ಸಭಾಸದಸ್ಯರಾಗಿ ಆಯ್ಕೆಯಾಗಿ ೧೯೭೨ ರಿಂದ ೧೯೭೭ರವರೆಗೆ ಅರ್ಥ ಮಂತ್ರಿಯಾಗಿ ಸೇವೆ ಸಲ್ಲಿಸಿದರು. ೧೯೮೬ರಲ್ಲಿ ಲೋಕಸಭಾ ಸದಸ್ಯರಾಗಿ ಆಯ್ಕೆಯಾದರು.

೧೯೯೦ ರಿಂದ ಕರ್ನಾಟಕದ ಗ್ರಾಮೀಣಾಭಿವೃದ್ಧಿ ಪಂಚಾಯತ್ ರಾಜ್ಯಗಳ ಮಂತ್ರಿಗಳಾಗಿ ಸೇವೆಸಲ್ಲಿಸುತ್ತಾ ಬಂದಿದ್ದಾರೆ. ಇಂದು ರಾಜಕೀಯ ಕ್ಷೇತ್ರದಿಂದ ದೂರವಾದ ಇವರು ಸಂಡೂರಿನಲ್ಲಿಯೇ ತಮ್ಮ 'ಸೊಂಡೂರು ರೇಷಿಡೆನ್ ಷಿಯಲ್ ಸಂಸ್ಥೆ' ಪದವಿ ಪೂರ್ವ ವಿದ್ಯಾಲಯದಲ್ಲಿ ವಿದ್ಯಾರ್ಥಿಗಳಿಗೆ ಬೋಧನೆ ಮಾಡುತ್ತಾ ತಮ್ಮ ಕೊನೆಯ ಜೀವನವನ್ನು ಸಾಗಿಸುತ್ತಿದ್ದಾರೆ.

**ಘೋರ್ಪಡೆ ಮಹಾರಾಜರ ವಂಶಾವಳಿ**

ಬೈರ್ ಜಿ (ಹಿಂದೂರಾವ್)

(ಗುತ್ತಿ ಸಂಸ್ಥಾನ ಸ್ಥಾಪಕ-ಗಜೇಂದ್ರ ಗಡದ ಮನೆ)

↓ ↓

ಮುರಾರಿರಾವ್ (ರಣರಂಗದಲ್ಲಿ ಮಡಿದನು) | ಸಿದ್ದೋಜಿರಾವ್ (ಸಂಡೂರನ್ನು ಗೆದ್ದುಕೊಂಡವನು)

↓

ಮುರಾರಿರಾವ್

(ಇವನನ್ನು ಗುತ್ತಿಯ ಮುಖ್ಯಸ್ಥನೆಂದು ನಾಮಕರಣ ಮಾಡಲಾಯಿತು)

↓

ಶಿವರಾವ್

↓

ಸಿದ್ದೋಜಿರಾವ್

↓

ಶಿವರಾವ್

(ಖಂಡೇರಾಯನಮಗ)

↓

ವೆಂಕಟರಾವ್

↓ ↓

ಶಿವಷಣ್ಮುಖರಾವ್ (ಗಂಡು ಸಂತಾನವಿಲ್ಲದೆ ಮರಣ). | ವಿಠ್ಠಲರಾವ್ (೧೮೭೯ ಅಣ್ಣನ ನಿಧನ ನಂತರ ಪಟ್ಟಕ್ಕೆ ಬಂದನು)

↓

ವೆಂಕಟರಾವ್

(೧೮೯೨-೧೯೨೭)

↓

ಯಶವಂತರಾವ್

(೧೩-೧೧-೧೯೦೮ರಂದು ಜನನ, ೧೯೨೮ ಜೂನ್ ವೆಂಕಟರಾವ್ ನಿಧನ ನಂತರ ಪಟ್ಟಕ್ಕೆ ಬಂದನು)

**ಸಂಡೂರು-ದೇಶಿಯ ಸಂಸ್ಥಾನ**

ಭಾರತವು ೧೫-೮-೧೯೪೭ರಲ್ಲಿ ಸ್ವತಂತ್ರಗಳಿಸಿದರೂ ಸಹ ಸಂಡೂರು ಸಂಸ್ಥಾನಕ್ಕೆ ಮಾತ್ರ ಸ್ವತಂತ್ರ ಲಭಿಸಿರಲಿಲ್ಲ. ಆಗ ಈ ಸಂಸ್ಥಾನವು ೩೩ ಹಳ್ಳಿಗಳ ವ್ಯಾಪ್ತಿಯನ್ನು ಹಾಗೂ ಕೇವಲ ೧೫ ಸಾವಿರ ಜನಸಂಖ್ಯೆಯನ್ನು ಒಳಗೊಂಡಿತ್ತು. ಈ ಸಂಸ್ಥಾನವನ್ನು ಪ್ರವೇಶಿಸಲು ಅಂದು ಕೇವಲ ಎರಡು ಮಾರ್ಗಗಳಿದ್ದವು. ಅವು ಎಂದರೆ ಗಂಡಿನರಸಿಂಹಸ್ವಾಮಿ ಮಾರ್ಗ ಮತ್ತೊಂದು ಬಳ್ಳಾರಿ ಮಾರ್ಗ. ಸ್ವಾತಂತ್ರ್ಯ ಹೋರಾಟಗಾರರಾದ ಟಿ.ಬಿ.ಕೇಶವರಾಯರ ಹೇಳಿಕೆಯಂತೆ ಸ್ವಾತಂತ್ರ್ಯ ಚಳುವಳಿಯ ಅವಧಿಯಲ್ಲಿ ಸಂಡೂರು ಸಂಸ್ಥಾನದಿಂದ ಹೊರಕ್ಕೆ ಅಥವಾ ಹೊರಗಡೆಯಿಂದ ಸಂಸ್ಥಾನದೊಳಗೆ ಯಾರೂ ಪ್ರವೇಶಿಸದಂತೆ ನಿರ್ಬಂಧ ವಿಧಿಸಲಾಗಿತ್ತು.

ಮಹಾರಾಜರ ಸರಕಾರವು ದಮನಕಾರಿ ನೀತಿಗಳನ್ನು ಅನುಸರಿಸುತ್ತಿದ್ದರೂ ಆಳ್ವಿಕೆಯ ಸುದ್ದಿಯೂ ಹೊರಗೆ ಹೋಗುವಂತಿರಲಿಲ್ಲ. ಬ್ರಿಟೀಷ್ ಕರ್ನಾಟಕದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಯಲ್ಲಿ ಈ ಸಂಸ್ಥಾನದ ಪ್ರಜೆಗಳು ಭಾಗವಹಿಸುವಂತಿರಲಿಲ್ಲ. ಡಾ.ಎಸ್.ಬಿ.ಷರಾಫ್‌ರ ನೇತೃತ್ವದಲ್ಲಿ ಸಂಡೂರು ಅರಸರ ವಿರುದ್ಧ ೧೯೩೦-೩೧ರಲ್ಲಿ ಚಳುವಳಿ ನಡೆಸಲಾಯಿತು. ಇದರ ಪರಿಣಾಮ ಷರಾಫರು ಸಂಸ್ಥಾನದ ಜೈಲುವಾಸ ಅನುಭವಿಸಬೇಕಾಯಿತು. ಇಡೀ ಭಾರತದಲ್ಲಿ ಸಂಸ್ಥಾನಿ ಅರಸರ ಆಡಳಿತದ ವಿರುದ್ಧ ನಡೆಯುತ್ತಿದ್ದ ಆಂದೋಳನವು ಸಂಡೂರು ಸಂಸ್ಥಾನಕ್ಕೂ ಹರಡಿತು. ಸಂಡೂರು ಸಂಸ್ಥಾನದ ಮಹಾರಾಜರ ಆಳ್ವಿಕೆಯ ವಿರುದ್ಧ ಯತ್ನಟ್ಟಿ (ತಾರಾನಗರ) ಮತ್ತು ಹೊಸಳ್ಳಿ (ಭುಜಂಗನಗರ)ಗಳಲ್ಲಿ ಜನರು ಸಿಡಿದೆದ್ದರು.

ಇಡೀ ಸಂಸ್ಥಾನದಲ್ಲಿ ಈ ಎರಡು ಗ್ರಾಮಗಳು ಮಹಾರಾಜರಿಗೆ ತಲೆನೋವಾಗಿದ್ದವು. ೧೯೩೭ರಲ್ಲಿ ಕುಮಾರಸ್ವಾಮಿ ದೇವಸ್ಥಾನದ ೧೩ ಗ್ರಾಮಗಳಿಗೆ ಸೇರಿದ್ದ ಜಮೀನನ್ನು(ಸು.೪೦೦೦ ಎಕರೆ) ಮಹಾರಾಜರು ತಮ್ಮದೆಂದು ಘೋಷಿಸಿಕೊಂಡಾಗ ಯತ್ನಟ್ಟಿಯ ಎಂ.ಶರಭಯ್ಯನವರು ರೈತರನ್ನು ಸಂಘಟಿಸಿ ಆಂದೋಳನ ನಡೆಸಿದ್ದಕ್ಕಾಗಿ ಜೇಲು ಶಿಕ್ಷೆ ಅನುಭವಿಸಿದರು.

ಒಟ್ಟಿನಲ್ಲಿ ಈ ಸಂಸ್ಥಾನದ ಮಹಾರಾಜರ ವಿರುದ್ಧ ಹೋರಾಟ ನಡೆಸುತ್ತಿದ್ದ ಮನೆತನಗಳೆಂದರೆ ಷರಾಫ್ ಮನೆತನ ಮತ್ತು ಬೋಜ ಮನೆತನ ಹಾಗೂ ಪೋತನೀಸ್ ಮನೆತನಗಳು. ಈ ಮನೆತನಗಳ ಹಿರಿಯರೆಲ್ಲರೂ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ಕೊಟ್ಟೂರು ಮತ್ತು ಕೂಡ್ಲಿಗಿಗಳಲ್ಲಿ ನಡೆಯುತ್ತಿದ್ದ ಸಭೆ-ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು.

ಸಂಸ್ಥಾನದಿಂದ ಹೊರಗೆ ಮತ್ತು ಸಂಸ್ಥಾನದೊಳಗೆ ಪ್ರವೇಶ ಸಂಚಾರಕ್ಕೆ ನಿಷೇಧ ಹೇರಲಾಗಿದ್ದರಿಂದ ಯಜಮಾನ್ ಶಾಂತರುದ್ರಪ್ಪನವರು ಬಳ್ಳಾರಿ ಭಾಗದಿಂದಲೇ ಹೋರಾಟ ನಡೆಸಿದರು. ಕ್ರಾಂತಿಕಾರಿ ಕರಪತ್ರಗಳನ್ನು ಸಂಸ್ಥಾನದೊಳಗೆ ಹಂಚಿದರು. ಇಂತಹ ವಿದ್ರೋಹದಲ್ಲಿ ನಿರತರಾಗಿದ್ದ ಶಾಂತರುದ್ರಪ್ಪನವರಿಗೆ ಹಣ–ಅಧಿಕಾರದ ಆಮಿಷಗಳನ್ನು ತೋರಿಸಿ ಬಾಯಿ ಮುಚ್ಚಿಸಲು ಮಹಾರಾಜರು ಪ್ರಯತ್ನಿಸಿದರು.

ಭಾರತದ ಗಣರಾಜ್ಯದಲ್ಲಿ ಸಂಡೂರು ಸಂಸ್ಥಾನವನ್ನು ವಿಲೀನಗೊಳಿಸಲಿಕ್ಕಾಗಿ ನಡೆದ ಹೋರಾಟದಲ್ಲಿ ಭಾಗವಹಿಸಿದ ಈ ತಾಲ್ಲೂಕಿನ ಹೋರಾಟಗಾರರಲ್ಲಿ ಪ್ರಮುಖರಾದ ಯತ್ನಟ್ಟಿ (ತಾರಾನಗರ)ಯ ಯಜಮಾನ್ ಶಾಂತರುದ್ರಪ್ಪ, ಅಂಗಡಿ ಶರಭಯ್ಯ, ಉಳ್ಳಾಗಡ್ಡಿ ಕರಿಯಪ್ಪ, ಬಾವಿಕಟ್ಟೆ ಮರಿಬಸಪ್ಪ, ಕೃಷ್ಣನಗರದ ಎಲಿಗಾರ ತಿಮ್ಮಪ್ಪ, ಭುಜಂಗನಗರದ (ಹೊಸಳ್ಳಿ) ಗುರುಶಾಂತಯ್ಯ, ಅರಳುಕಲ್ ಕುಮಾರಪ್ಪ, ನಾಗಲಾಪುರದ ಸಿದ್ಧರಾಮಯ್ಯ, ಎಸ್.ವೈ.ಸೋಮನಗೌಡರು, ನಾಗನಗೌಡ, ಪೋತನೀಸ್ ರಾಮರಾಯ, ಮಹಾಲಿಂಗಪ್ಪ, ಕಾಲೆ ಸುಬ್ಬಣ್ಣ, ಬೋಜ ಅಡಿವೆಪ್ಪ ಗಿರಿಮಲ್ಲಪ್ಪ ಇವರೆಲ್ಲರೂ ಸಂಡೂರು ಮಹಾರಾಜರಿಗೆ ಸೇರಿದ್ದ 'ಸಂಡೂರು ಸ್ಟೇಟ್ ಸೇಲ್'ನಲ್ಲಿ ಶಿಕ್ಷೆ ಅನುಭವಿಸಿದರು. ಅಂತು ೧೯೪೮ರಲ್ಲಿ ಸಂಸ್ಥಾನದಲ್ಲಿ ಪ್ರಜಾಪರಿಷತ್ತು ಜಾರಿಗೆ ಬಂದಿತು. ಅದರ ಅಧಿವೇಶನ ಯತ್ನಟ್ಟಿಯಲ್ಲಿ ಜರುಗಿತು.

ಕರ್ನಾಟಕ ರಾಜ್ಯದ ಧುರೀಣರುಗಳಾದ ಕೊಲ್ಲಾಪುರದ ರತ್ನಪ್ಪ ಕುಂಬಾರ, ತಲ್ಲೂರು ರಾಯನಗೌಡ, ಶಾಂತಿನಾಥ ಇಂಗಳೆ, ಮಹದೇವಪ್ಪ ಪಟ್ಟಣ, ಬಳ್ಳಾರಿ ಯಜಮಾನ್ ಶಾಂತರುದ್ರಪ್ಪ ಮುಂತಾದವರು ಅಧಿವೇಶನದಲ್ಲಿ ಭಾಗವಹಿಸಿದ್ದರು. ಸಂಡೂರು ಸಂಸ್ಥಾನವು ಭಾರತದಲ್ಲಿ ವಿಲೀನವಾಗಬೇಕೆಂದು ಯತ್ನಟ್ಟಿಯಲ್ಲಿ ನಡೆದ ಪ್ರಜಾಪರಿಷತ್ ನಿರ್ಣಯ ಮಾಡಿತು. ಈ ಎಲ್ಲಾ ಬೆಳವಣಿಗೆಗಳ ನಡುವೆ ಸರ್ದಾರ್ ಪಟೇಲರ ನೀತಿಗನುಗುಣವಾಗಿ ಸಂಡೂರು ಸಂಸ್ಥಾನವು ಭಾರತ ಗಣರಾಜ್ಯದಲ್ಲಿ ಏಪ್ರಿಲ್ ೧, ೧೯೪೯ರಂದು ವಿಲೀನ ಒಪ್ಪಂದಕ್ಕೆ ಸಹಿಹಾಕಿತು.

ಆಗ ಸಂಡೂರಿಗೆ ಕೂಡ್ಲಿಗಿ ತಾಲ್ಲೂಕಿನ ಚೋರನೂರು ಮತ್ತು ಹೊಸಪೇಟೆ ತಾಲ್ಲೂಕಿನ ತೋರಣಗಲ್ಲು ಎರಡು ಹೋಬಳಿಗಳನ್ನು ಸೇರಿಸಿ ೧೯೫೦ರಲ್ಲಿ ತಾಲ್ಲೂಕು ಕೇಂದ್ರವನ್ನಾಗಿ ಮಾಡಲಾಯಿತು. ಈ ಸಂಸ್ಥಾನವು ಭಾರತದ ಗಣರಾಜ್ಯದಲ್ಲಿ ವಿಲೀನಗೊಂಡ ನಂತರ ಅದು ಯಾವ ಪ್ರಾಂತ್ಯಕ್ಕೆ ಸೇರಬೇಕೆಂಬ ಪ್ರಶ್ನೆ ಉದ್ಭವವಾಯಿತು. ಆಗ ಮಹಾರಾಜರು ಈ

ಸಂಸ್ಥಾನವನ್ನು ಮದ್ರಾಸ್ ಪ್ರಾಂತ್ಯಕ್ಕೆ ಸೇರಿಸುವ ಬದಲಾಗಿ ಮೈಸೂರು ಪ್ರಾಂತ್ಯಕ್ಕೆ ಸೇರಿಸಬೇಕೆಂಬುದಾಗಿ ತಿಳಿಸಿ ಅದಕ್ಕೆ ಈ ಕಾರಣಗಳನ್ನು ಮುಂದಿಟ್ಟರು. ಸಂಡೂರು ಮತ್ತು ಮೈಸೂರು ಸಂಸ್ಥಾನಗಳ ಗಡಿಗಳು ಪರಸ್ಪರ ಹೊಂದಿಕೊಂಡಿದ್ದು, ಈ ಎರಡೂ ಸಂಸ್ಥಾನಗಳ ಪ್ರಜೆಗಳ ನಡುವೆ ಭಾಷಿಕ ಮತ್ತು ಸಾಂಸ್ಕೃತಿಕ ಸಂಬಂಧಗಳಿವೆ. ಹಾಗೂ ಖನಿಜ ಸಂಪತ್ತಿಗೆ ಸಂಬಂಧಿಸಿದಂತೆ ಈ ಎರಡೂ ಸಂಸ್ಥಾನಗಳ ಪರಸ್ಪರ ಗಣಿಗಾರಿಕೆ ಅಭಿವೃದ್ಧಿ ಪಡಿಸಬಹುದು ಎಂದು. ಒಟ್ಟಿನಲ್ಲಿ ಸಂಡೂರು ಸಂಸ್ಥಾನವು ಭಾರತದ ಗಣರಾಜ್ಯಕ್ಕೂ, ನಂತರ ಮೈಸೂರು ಪ್ರಾಂತ್ಯಕ್ಕೂ ಸೇರಿಕೊಂಡು ಇಂದು ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದೆ.

ಸಂಡೂರಿನ ಮಹಾರಾಜರು ತಮ್ಮ ಪ್ರಜೆಗಳಿಗೆ ಯಾವುದೇ ರೀತಿಯ ಸ್ವತಂತ್ರವನ್ನು ನೀಡಿರಲಿಲ್ಲ. ಅವರ ಬೇಡಿಕೆಗಳನ್ನು ಈಡೇರಿಸದೆ ಅವರನ್ನು ಶೋಷಣೆಗೆ ಒಳಪಡಿಸುತ್ತಿದ್ದರು ಮತ್ತು ಸಂಸ್ಥಾನದ ನಿಯಮಗಳ ವಿರುದ್ಧ ಬಂಡೆದ್ದ ಪ್ರಜೆಗಳನ್ನು ಶಿಕ್ಷಿಸುತ್ತಿದ್ದರು. ಇದನ್ನು ಸೂಕ್ಷ್ಮವಾಗಿ ಗಮನಿಸಿದರೆ, ಅಂದಿನ ಬ್ರಿಟೀಷ್ ಆಡಳಿತ ಅಧಿಕಾರಿಗಳಿಗೆ ನಿಷ್ಠೆಯಿಂದ ಇದ್ದಂತಹ ಅನೇಕ ಸಂಸ್ಥಾನಿಕರಿಗೆ ಅದು ಅನಿವಾರ್ಯವಾಗಿ ಇರಬೇಕು ಎಂದು ಎನಿಸದಿರದು.

ಅದರಂತೆಯೇ ಘೋರ್ಪಡೆ ಸಂಸ್ಥಾನಿಕರು ಸಹ ಆ ಕಾಲದ ಬ್ರಿಟೀಷ್ ಆಡಳಿತ ನಿಯಮಗಳಿಗೆ ಬದ್ಧರಾಗಿದ್ದರು. ಇದರಿಂದಾಗಿ ದೇಶಭಕ್ತಿ ಸ್ಥಳೀಯರಿಂದ, ಗಾಂಧಿವಾದಿಗಳಿಂದ ಆಗಾಗ ಆಕ್ಷೇಪಗಳಿಗೆ ಒಳಗಾಗುತ್ತಿದ್ದರು. ಸಾರ್ವಜನಿಕರು ಅನೇಕ ಅನುಮಾನಗಳಿಂದ ನೋಡ ತೊಡಗಿದರು. ಇದು ಅವರ ಮತ್ತು ಮನೆತನದವರ ನಡುವಿನ ಅಂತರವನ್ನು ಹೆಚ್ಚಿಸಲು ಕಾರಣವಾಯಿತು.

**ಕೊನೆ ಟಿಪ್ಪಣಿಗಳು**

೧. ವಾಸುದೇವ ಬಡಿಗೇರ, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಪು.ಸಂ ೬-೧೦

೨. ಅದೇ ಪು.ಸಂ.೪೭

೩. ಜಗದೀಶ ಕೆರೆನಳ್ಳಿ, ಲೋಹಾದ್ರಿಯ ಮಡಿಲು, ಸ್ಮರಣ ಸಂಚಿಕೆ, ಸಂಡೂರು ತಾಲ್ಲೂಕಿನ ಭೌಗೋಳಿಕ ಪರಿಚಯ, ಪು.ಸಂ.೧-೨

೪. ಮೃತ್ಯುಂಜಯ ರುಮಾಲೆ, ಸ್ಕಂದ-ಶ್ರೀಗಂಧ, ಸ್ಮರಣ ಸಂಚಿಕೆ, ಸೊಂಡೂರು : ಒಂದು ಪರಿಚಯ, ಪು.ಸಂ.೪

೫. ಅದೇ ಪು.ಸಂ.೧೧

೬. ವಾಸುದೇವ ಬಡಿಗೇರ, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ, ಪು.ಸಂ. ೧-೨

೭. ಅದೇ ಪು.ಸಂ ೯

೮. ಎಸ್.ಎಂ.ನಾಗಭೂಷಣ, ಸೊಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ, ಕರ್ನಾಟಕ ಇತಿಹಾಸ ದರ್ಶನ, ಪು.ಸಂ ೧೭೭

೯. ಸಿ.ಮಹದೇವ, ಹೊಸಪೇಟೆ ತಾಲ್ಲೂಕು ದರ್ಶನ, ಪು.ಸಂ ೬

೧೦. ಅದೇ ಪು.ಸಂ ೨

೧೧. ಕೆ.ಬಿ.ಶಿವತಾರಕ್, ಕರ್ನಾಟಕ ಪುರಾತತ್ವ ನೆಲೆಗಳು, ಪು.ಸಂ ೩೬೨-೩೬೩

೧೨. ಅದೇ ಪು.ಸಂ ೧೧

೧೩. ಜೆ.ಎಂ.ನಾಗಯ್ಯ, ವಡ್ಡಾರಾಧನೆ ಸೂಚಿಸುವ ಬಸದಿ ಮತ್ತು ಸೊಂಡೂರು, ಕರ್ನಾಟಕ ಇತಿಹಾಸ ದರ್ಶನ ಪು.ಸಂ೧೮೪

೧೪. ಎಸ್.ಎಂ.ಅಪ್ಪನಗೌಡರು, ಸ್ಕಂದ-ಶ್ರೀಗಂಧ, ಸ್ಮರಣ ಸಂಚಿಕೆ, ಬಳ್ಳಾರಿ ಜಿಲ್ಲೆಯ ಖನಿಜ ಸಂಪತ್ತು, ಪು.ಸಂ ೬೬

೧೫. ಪ್ರಭು ಪ್ರಕಾಶನ, ನೆನಪಿನ ಸಂಚಿಕೆ, ಸಂಡೂರು ಕೆಲವು ಐತಿಹಾಸಿಕ ಘಟನೆಗಳು, ಜೆ.ಎಂ.ನಾಗಯ್ಯ, ಪು.ಸಂ ೩೯–೪೦

೧೬. ಅದೇ ಪು.ಸಂ ೪೧–೪೨

೧೭. ಕರ್ನಾಟಕ ರಾಜ್ಯ ಗ್ಯಾಜಿಟಿಯರ್ ಭಾಗ–೧, ಸೂರ್ಯನಾಥ ಯು.ಕಾಮತ್, ಪು.ಸಂ ೧೬೪–೧೬೫

೧೮. ಟಿ.ಜಿ. ಚಂದ್ರಶೇಖರಪ್ಪ, ಭಾರತದ ಇತಿಹಾಸ (ಆರಂಭದಿಂದ ಕ್ರಿ.ಶ.೧೫೨೬ರ ವರೆಗೆ) ಪು.ಸಂ ೧೧–೧೨

೧೯. ಅದೇ ಪು.ಸಂ ೧೩–೧೫

೨೦. ಸಿ.ನಾಗಭೂಷಣ, ದಶಮಾನ, ನೆನಪಿನ ಸಂಚಿಕೆ, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಹಿರಿಮೆ, ಪು.ಸಂ ೩೪–೩೫

೨೧. ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ–೧, ಸಂಡೂರು, ಪು.ಸಂ ೨೦೧

೨೨. ವಿರೂಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೆಗಾರರು, ಪು.ಸಂ ೫–೮

೨೩. ಅದೇ ಪು.ಸಂ ೯–೧೭

೨೪. ಎಂ.ಎಂ.ಕಲ್ಬುರ್ಗಿ, ಕರ್ನಾಟಕದ ಕೈಫಿಯತ್ತುಗಳು, ಪು.ಸಂ ೪೦೯

## ಅಧ್ಯಾಯ-೩

## ಪ್ರವಾಸಿ ತಾಣಗಳು

೩.೧ ಪ್ರಾಕೃತಿಕ ತಾಣಗಳು

೩.೨ ಧಾರ್ಮಿಕ ತೀರ್ಥಗಳು

೩.೩ ದೇವಾಲಯಗಳು

೩.೪ ಔದ್ಯೋಗಿಕ ಸ್ಥಳಗಳು

೩.೫ ಅರಮನೆ, ಕೋಟೆ

೩.೬ ಕೆರೆಗಳು

## ಅಧ್ಯಾಯ-೩

## ಪ್ರವಾಸಿ ತಾಣಗಳು

### ೩.೧ ಪ್ರಾಕೃತಿಕ ತಾಣಗಳು

**ಹುಬ್ಬಳಗುಂಡಿ (ಉಬ್ಬಳಗುಂಡಿ) : ಯಾಣ**

ಸಂಡೂರಿನಿಂದ ೩೫ಕಿ.ಮೀ ಸಮೀಪದಲ್ಲಿರುವ ಉಬ್ಬಳಗುಂಡಿಯಲ್ಲಿ ಉತ್ತರ ಕನ್ನಡದ ಯಾಣವನ್ನು ನೆನಪಿಗೆ ತರುವ ಪ್ರಕೃತಿ ಸೌಂದರ್ಯದ ಚೆಲುವ ಪ್ರದೇಶವಿದೆ. ಬೃಹತ್ ಗಿಡ-ಮರಗಳ ಸಮೂಹವು ಆಕಾಶವನ್ನು ಚುಂಬಿಸುವಂತೆ ಆರು ಶಿಲಾ ಶಿಖರಗಳು ಮೈಕೊಡವಿ ನಿಂತಿವೆ. ಶಿಖರಗಳ ಮಧ್ಯೆ ಜುಳುಜುಳು ಹರಿಯುವ ಜಲಧಾರೆ ಸುತ್ತಲಿನ ಪರಿಸರದ ಸೊಬಗನ್ನು ಹೆಚ್ಚಿಸಿದೆ. ಪಕ್ಕದಲ್ಲಿಯೇ ವೀರಭದ್ರನ ದೇವಾಲಯವೂ ಇದೆ. ಯಾಣದಲ್ಲಿರುವ ಶಿಖರಗಳು ಕಪ್ಪು ಶಿಲೆಯಾದರೆ, ಇಲ್ಲಿನ ಶಿಖರಗಳು ಕೆಂಪು ಬಣ್ಣದಲ್ಲಿವೆ. ಚಾರಣಿಗರಿಗೆ ಇದು ಹೇಳಿ ಮಾಡಿಸಿದ ಸ್ಥಳವಾಗಿದೆ. ಬೆಟ್ಟವನ್ನು ಹತ್ತುವ ಸಾಹಸಿಗಳು ಇಲ್ಲಿಗೆ ಹೆಚ್ಚಾಗಿ ಬರುತ್ತಾರೆ. ಶಿಲೆಗಳ ಆಕಾರಗಳೂ ವೈವಿಧ್ಯಮಯವಾಗಿವೆ. ಒಂದೊಂದು ಮಗ್ಗಲಿನಿಂದ ಒಂದೊಂದು ರೀತಿಯಲ್ಲಿ ಗೋಚರಿಸುತ್ತವೆ. ನೇರವಾಗಿ ನೋಡಿದರೆ ಒಂದು ವ್ಯಕ್ತಿಯ ಕೈ ಕಾಲುಗಳನ್ನು ಮಡಚಿ ಕುಳಿತಿರುವಂತೆ ಕಾಣಿಸುತ್ತದೆ. ಮಾನವನ ಮುಖವು ಮುನಿಸಿನಿಂದ ತಿರುಗಿದ ವ್ಯಕ್ತಿಯಂತೆ ಮತ್ತೊಂದು ಕಡೆಯಿಂದ ಕಾಣುತ್ತದೆ. ಸಂಡೂರಿನಿಂದ ಇಲ್ಲಿಗೆ ಬಸ್ಸಿನ ಸೌಕರ್ಯವಿದೆ.

**ಸೀ ಸಂಡೂರು ಇನ್ ಸೆಪ್ಟೆಂಬರ್**

ಮುಂಗಾರಿಕ ಅಭಿಷೇಕಕ್ಕೆ "ಗಣಿನಾಡು ಸಂಡೂರು" ಮುಗ್ಧ ಮಗುವಿನಂತೆ ಮೈಯೊಡ್ಡಿದೆ. ಸುತ್ತಲಿನ ಗುಡ್ಡ, ಬೆಟ್ಟಗಳು ಮಳೆಯ ಸಿಂಚನದೊಂದಿಗೆ ಪುಳಕಿತಗೊಂಡಿವೆ. ಮೈತುಂಬ ಹಸಿರುಟ್ಟು ಮದುಮಗಳಂತೆ ಕಂಗೊಳಿಸುತ್ತಿವೆ. ಗಣಿಗಾರಿಕೆಯ ಸದ್ದು ಕಡಿಮೆಯಾಗಿರುವ ಈ ಸಂದರ್ಭದಲ್ಲಿ ಸಂಡೂರಿನ ಗುಡ್ಡಗಳಲ್ಲಿ 'ಹಸಿರುಗಾರಿಕೆ' ಮುನ್ನಲೆಗೆ ಬಂದಿದೆ. ಬಿಸಿಲಿಗೆ ಹೆಸರಾಗಿರುವ ಬಳ್ಳಾರಿ ಜಿಲ್ಲೆಯಲ್ಲಿ ಹಸಿರನ್ನಿಟ್ಟುಕೊಂಡು ನಳನಳಿಸುತ್ತಿದ್ದ ಸಂಡೂರಿನ ಬೆಟ್ಟ ಗುಡ್ಡಗಳ ಹಸಿರು ಸೌಂದರ್ಯವನ್ನು ಕಣ್ಣಾರೆ ಕಂಡ ಮಹಾತ್ಮಗಾಂಧಿ ಅವರು "ಸೀ ಸಂಡೂರು ಇನ್ ಸೆಪ್ಟೆಂಬರ್" ಎಂದು ಹೇಳಿದರು. ಸಂಡೂರಿನ ಬೆಟ್ಟಗಳು ಜೂನ್‌ನಿಂದ ಜನವರಿವರೆಗೆ ಹಸಿರಿನಿಂದ ಕಂಗೊಳಿಸುತ್ತವೆ.

ಜೂನ್‌ನಲ್ಲಿ ಮುಂಗಾರು ಮಳೆ ಆರಂಭವಾಗುತ್ತಿದ್ದಂತೆ ಗುಡ್ಡಗಳಲ್ಲಿನ ಗಿಡ ಮರಗಳು ಹೊಸ ಚಿಗುರಿನಿಂದ ನವಚೈತನ್ಯ ಪಡೆಯುತ್ತವೆ. ಸಂಡೂರು ಸುತ್ತಲಿನ ಕಾಡುಗಳಲ್ಲಿ ಶ್ರೀಗಂಧ, ರಕ್ತಚಂದನ, ಬೀಟೆ, ಹೊನ್ನೆ, ಬಿದಿರು ಸೇರಿ ನೂರಾರು ಪ್ರಭೇದಗಳ ಗಿಡಮರಗಳಿವೆ.

ಯಶವಂತನಗರ ಸಮೀಪದ ಔಷಧ ಸಸ್ಯ ಕೇಂದ್ರದ ಸುತ್ತಲಿನ ಗುಡ್ಡಗಳು, ನಾರಿಹಳ್ಳ ಜಲಾಶಯ ಸಮೀಪದ ಬೆಟ್ಟಗಳು, ಹಸಿರ ಪತ್ತಲುಗಳನ್ನೇ ಪೇರಿಸಿಟ್ಟಂತೆ ಗೋಚರಿಸುತ್ತಿವೆ. ಈ ಪ್ರದೇಶದಲ್ಲಿ ಚಿರತೆ, ನವಿಲು, ಕಾಡುಹಂದಿ, ನರಿ, ಕಾಡು, ಬೆಕ್ಕು, ನಾನಾ ಪ್ರಾಣಿಗಳು ಹಾಗೂ ಹೆಬ್ಬಾವುಗಳೂ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿವೆ. ಆಗಾಗೆ ಕಾಡಿನಿಂದ ಹೊರಗೆ ಬಂದು ದಾರಿಯಲ್ಲಿ ಚಲಿಸುವವರಿಗೆ ಚುಟುಕು ದರ್ಶನ ನೀಡುತ್ತವೆ. ಸುಪ್ರೀಂ ಕೋರ್ಟ್ ತಡೆಯೊಂದಿಗೆ ಗಣಿಗಾರಿಕೆಯ ಅಟಾಟೋಪ ಸ್ವಲ್ಪ ಪ್ರಮಾಣದಲ್ಲಿ ಕಡಿಮೆಯಾಗಿದೆ. ಗಣಿಗಾರಿಕೆ ಅಬ್ಬರ ಇಳಿಕೆಯೊಂದಿಗೆ ಕಾಡು ಮೇಡುಗಳಲ್ಲಿ ಕಣ್ಣು ಹಾಯಿಸಿದಷ್ಟು ದೂರ ಹಸಿರು ಚಿಮ್ಮುತ್ತಿದೆ.

**ರಾಮಘಡ**

ಸಂಡೂರು ಪಟ್ಟಣದಿಂದ ೧೮ಕಿ.ಮೀ ದೂರದಲ್ಲಿರುವ ರಾಮಘಡ ಅಂದಿನ ಕಾಲದಲ್ಲಿ ಪ್ರಖ್ಯಾತ ಗಿರಿಧಾಮವಾಗಿತ್ತು. ಇದು ಹೊಸಪೇಟೆ ಪಟ್ಟಣದಿಂದ ಸುಮಾರು ೨೦ಕಿ.ಮೀ ದೂರದಲ್ಲಿದೆ. ಸಂಡೂರಿನ ಪರಿಸರದಲ್ಲಿ ಅತ್ಯಂತ ವಿಶೇಷವಾದ ಸ್ಥಳವೆಂದರೆ ರಾಮಘಡ ಪ್ರದೇಶ. ಕಡಿದಾದ ಬೆಟ್ಟ ಗುಡ್ಡಗಳಿಂದ, ಸಸ್ಯರಾಶಿಯಿಂದ ತುಂಬಿದ ಸಮುದ್ರ ಮಟ್ಟದಿಂದ ಮೂರು ಸಾವಿರ ಅಡಿಗೂ ಹೆಚ್ಚು ಎತ್ತರದಲ್ಲಿರುವ ರಾಮಘಡ ಅರಣ್ಯ ಪ್ರದೇಶ "ಬಳ್ಳಾರಿ ಜಿಲ್ಲೆಯ ಊಟಿ" ಎಂದು ಪ್ರಸಿದ್ದವಾಗಿದೆ. ಅದೇ ಹೆಸರಿನ ಕೋಟೆ, ಪ್ರಸ್ಥಭೂಮಿಯ ದಕ್ಷಿಣ ತುದಿಯಲ್ಲಿದೆ ಕಲ್ಲುಗಳ ಅಗಾಧ ಕರಿಯರ ಗೋಡೆಗಳ ರೂಪದಲ್ಲಿ ಹಳೆಯ ಕೋಟೆ ಉಳಿದಿದೆ ಸ್ಥಳೀಯ ಸಂಪ್ರದಾಯದ ಪ್ರಕಾರ ಇದು ಮಹಾನ್ ನಾಯಕನಾದ ಕಂಪಲಿಯ ರಾಜಕುಮಾರ ಕುಮಾರರಾಮರಿಂದ ನಿರ್ಮಿಸಲ್ಪಟ್ಟಿದೆ.

ರಾಮಘಡ ಕೋಟೆಯಲ್ಲಿ ಕುಮಾರರಾಮನನ್ನು ಬಂದಿಯಾಗಿ ಇಡಲಾಗಿತ್ತು. ಆ ಕಾರಣದಿಂದ ಈ ಗಿರಿ ಪ್ರದೇಶಕ್ಕೆ 'ರಾಮನಮಲೈ' ಮತ್ತು 'ರಾಮನದುರ್ಗ' ಎಂಬ ಹೆಸರು ಬಂದಿತ್ತು .ಇಲ್ಲಿನ ರಾಮದೇವ ದೇವಸ್ಥಾನಕ್ಕೆ ಕುಮಾರರಾಮನ ಹೆಸರನ್ನು ಇಡಲಾಗಿದೆ. (ಇವರು ಈ ಪ್ರದೇಶವನ್ನು ಮಂತ್ರಿ ಬೈಚಪ್ಪ ನಾಯಕರಿಂದ ಸ್ವಲ್ಪ ಸಮಯದವರೆಗೆ ಮರೆಮಾಡಿದರು ಮತ್ತು ಅವನ ಜೀವವನ್ನು ರಕ್ಷಿಸಲು) ಎಂದು ಹೆಸರಿಸಲಾಯಿತು. ಈ ಸ್ಥಳದಲ್ಲಿ ಕಂಡುಬರುವ

ಶಾಸನವು ಇದನ್ನು ದೃಢಪಡಿಸಿದೆ. ಇದು ಸಮಕಾಲೀನ ದಾಖಲೆಯಾಗಿಲ್ಲದಿದ್ದರೂ, ರಾಮನಾಥ ಒಡೆಯಾ (ಅಂದರೆ ಕುಮಾರರಾಮ) ಅವರ ಭವ್ಯವಾದ ತ್ಯಾಗದ ಮೆಚ್ಚುಗೆಯಿಂದ ಅವರ ನೆನಪಿಗಾಗಿ ದೇವಸ್ಥಾನವನ್ನು ನಿರ್ಮಿಸಲಾಗಿದೆ ಎಂದು ಸ್ಪಷ್ಟವಾಗಿ ಹೇಳುತ್ತದೆ. ಕ್ರಿ.ಶ.೧೫೫೦ರಲ್ಲಿ ಕೃಷ್ಣದೇವರಾಯ ಆಳ್ವಿಕೆಯ ಸಂದರ್ಭದಲ್ಲಿ ಈ ಶಿಲಾ ಶಾಸನವನ್ನು ಬರೆಸಲಾಗಿದೆ. ಈ ಶಾಸನವು ಕಂಡುಬಂದಿರುವ ಪ್ರಸ್ತುತ ರಾಮದೇವರ ದೇವಸ್ಥಾನವನ್ನು ಹಳೆಯ ದೇವಾಲಯದ ಅವಶೇಷಗಳಿಂದ ಪುನಃ ನಿರ್ಮಿಸಲಾಗಿದೆ.

೧೮೪೭ರಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಸಂಡೂರನ್ನು ಪ್ರವೇಶಿಸಿದಾಗ ಸಂಡೂರಿನ ಆಡಳಿತಗಾರರು ಇಲ್ಲಿ ಬಂದು ವ್ಯವಸ್ಥಿತವಾದ ಬಂಗಲೆ ಕಟ್ಟಿಸಿದಂತೆ ತಿಳಿದುಬರುತ್ತದೆ. ಬ್ರಿಟೀಷ್ ಅಧಿಕಾರಿಗಳು ಮತ್ತಿತರರು ೧೮೫೫ ರಿಂದ ೧೯೧೮ರವರೆಗೆ ತಂಗಿದ್ದರೆಂದೂ ತಿಳಿದುಬರುತ್ತದೆ. ಬ್ರಿಟೀಷ್ ಅಧಿಕಾರಿಗಳ ಪುರಾತನ ವಸತಿ ಗೃಹಗಳು, ಸೇನಾ ತುಕಡಿಗಳಿದ್ದ ಸ್ಥಳವಾಗಿದೆ. ಘೋರ್ಪಡೆ ರಾಜವಂಶದ ಬೇಸಿಗೆ ವಿಶ್ರಾಂತಿ ಗೃಹವು ಇಲ್ಲಿದ್ದು, ಸೂರ್ಯಾಸ್ತದ ಸ್ಥಳವು ಆಗುಂಬೆಯನ್ನು ನೆನಪಿಸುತ್ತದೆ.

'ರಾಜವೃಕ್ಷ'ವೆನಿಸಿದ ಶ್ರೀಗಂಧ ಸ್ವಾಮಿಮಲೈ ಮತ್ತು ಈ ಬೆಟ್ಟಗಳಲ್ಲಿ ಸಾಕಷ್ಟು ಬೆಳೆದಿದ್ದವು. ಕಳೆದ ನೂರು ವರ್ಷಗಳಿಂದ ಕಾಡಿನ ಮರಗಳನ್ನು ಕಡಿದು, ಕಬ್ಬಿಣದ ಅದಿರು ಗಣಿಗಾರಿಕೆ ಪ್ರಾರಂಭವಾಗಿ ರಾಮಘಡ ತನ್ನ ಮೊದಲಿನ ವೈಭವವನ್ನು ಕಳೆದುಕೊಳ್ಳುತ್ತಿದೆ.

**ನಾರಿಹಳ್ಳ**

ಹೊರಜಗತ್ತಿಗೆ 'ಮಾನಸ ಸರೋವರ' ಎಂದು ಪ್ರಸಿದ್ಧವಾದ ಸಂಡೂರಿನ ಮುಖ್ಯ ಆಕರ್ಷಕ ಸ್ಥಳ ನಾರಿಹಳ್ಳ ಬಳ್ಳಾರಿ ಬಿಸಿಲ ಝಳಕ್ಕೆ ಖ್ಯಾತಿ, ಆದರೆ ಬಳ್ಳಾರಿ ಇನ್ನೊಂದು ಭಾಗ ಸಂಡೂರು ಕಣಿವೆ ತಂಪಿನ ತಾಣ ತಂಪಾದ ಹವೆಯಿಂದ ಪ್ರಸಿದ್ಧವಾಗಿರುವ ಸಂಡೂರು ಸಮೀಪದ ನಾರಿಹಳ್ಳ ಜಲಾಶಯ ಪ್ರವಾಸಿಗರ ಸದಾ ಸೆಳೆಯುವ ಸ್ಥಳ. ಅದಿರು ತುಂಬಿಕೊಂಡ ಬೆಟ್ಟಗಳ ಮಧ್ಯೆ ಇರುವ ಈ ಜಲಾಶಯ ಜಲವಿಹಾರಕ್ಕೆ ಬಹಳ ಹೆಸರುವಾಸಿ, ಸುತ್ತಲು ಸುಂದರ ದೃಶ್ಯಗಳೊಂದಿಗೆ ಆಹ್ಲಾದಕರ ಹವೆ ಹೊಂದಿರುವ ಈ ಜಲಾಶಯ ವಿಹಾರ ಧಾಮವಾಗಿ ಅಭಿವೃದ್ಧಿ ಹೊಂದಿದೆ. ಈ ಜಲಾಶಯ ಜಲಕ್ರೀಡೆ ದೋಣಿ ವಿಹಾರಕ್ಕೆ ಹೇಳಿ ಮಾಡಿಸಿದಂತಿದೆ.

**ನೀಲಕುರಂಜಿ**

ಸಂಡೂರಿನ ಪ್ರಾಕೃತಿಕ ತಾಣಗಳಲ್ಲಿ ಒಂದಾಗಿರುವಂತದ್ದು ನೀಲಕುರಂಜಿ ಹೂ. ಈ ನೀಲಕುರಂಜಿ ೧೨ ವರ್ಷಕ್ಕೊಮ್ಮೆ ಬಿಡುವಂತ ಸುಂದರ ಹೂವಾಗಿದೆ. ಈ ಬಾರಿ ೨೦೧೮ರ ಸೆಪ್ಟೆಂಬರ್ ತಿಂಗಳಲ್ಲಿ ಅರಳಿದ ನೀಲಕುರಂಜಿ ಹೂ ಪ್ರವಾಸಿಗರನ್ನು ಆಕರ್ಷಣೆ ಮಾಡಿಕೊಂಡು ಕಾಡಿನಲ್ಲಿ ಮೋಹಕ ಲೋಕವನ್ನು ಸೃಷ್ಟಿಸಿತ್ತು.

**ಔಷಧಿ ಸಸ್ಯ ಸಂರಕ್ಷಣಾ ಕೇಂದ್ರ**

ಪುರಾಣ ಪುಣ್ಯಕ್ಷೇತ್ರಗಳಿಗೆ, ಐತಿಹಾಸಿಕ ತಾಣಗಳಿಗೆ ಹೆಸರಾದ ಸಂಡೂರು ಪ್ರಾಕೃತಿಕ ಸಂಪತ್ತಿಗೂ ಹೆಸರಾಗಿದೆ. ಯಶವಂತನಗರದ ಸಮೀಪದಲ್ಲಿ ಔಷಧಿ ಸಸ್ಯ ಸಂರಕ್ಷಣೆ ಕೇಂದ್ರವಿದೆ. ಅರಣ್ಯ ಇಲಾಖೆಯವರು ಧನ್ವಂತರಿವನ, ನವಗ್ರಹವನಗಳನ್ನು ನಿರ್ಮಿಸಿದ್ದು ಸುಮಾರು ೧೦೦೦ಕ್ಕೂ ಹೆಚ್ಚು ಅಪರೂಪದ ಗಿಡ, ಮರ, ಬಳ್ಳಿಗಳಿಂದ ಕೂಡಿದ ಈ ವನಪ್ರದೇಶವು ಜೀವ ವೈವಿಧ್ಯದ ತಾಣವಾಗಿದ್ದು, ಬಗೆಬಗೆಯ ಗಿಡ, ಮರ, ಬಳ್ಳಿ, ಪ್ರಾಣಿ–ಪಕ್ಷಿಗಳ ಜಗತ್ತು, ಜೀವಜಾಲದ ಪೋಷಕ ಕೇಂದ್ರವಾಗಿದೆ. ಬಿಸಿಲಿಗೆ ಬಸವಳಿದ ಜನಕ್ಕೆ ನೆಮ್ಮದಿ ನೀಡಿ ಉಲ್ಲಾಸ ತರುವ ಅರಣ್ಯ ಪ್ರದೇಶ ಇಲ್ಲಿದ್ದು, ಬೆಲೆಬಾಳುವ ಶ್ರೀಗಂಧ, ರಕ್ತಚಂದನ, ಮತ್ತಿ, ದಿಂಡಿಲು, ಧೂಪ, ತಾರೆ, ಬಿಲ್ವ ಮರಗಳಿವೆ. ಚಿರತೆ, ಜಿಂಕೆ, ತೋಳ, ಕಾಡುಹಂದಿ, ಕಾಡುಬೆಕ್ಕು, ಕರಡಿ, ಮುಂಗುಸಿ, ಉಡ, ಹೆಬ್ಬಾವು, ಅಪರೂಪದ ಕಪ್ಪುಹದ್ದು, ನವಿಲು, ಕಾಡುಕೋಳಿ ಮೊದಲಾದ ವನ್ಯಜೀವಿಗಳಿವೆ.

**ದರೋಜಿ ಕರಡಿಧಾಮ**

ಸಂಡೂರಿನಿಂದ ಸುಮಾರು ೪೮ಕಿ.ಮೀ ದೂರದಲ್ಲಿದೆ. ಕರಡಿಗಳ ಸಂರಕ್ಷಣೆಗೆಂದೇ ವಿಶೇಷವಾಗಿ ಸಂರಕ್ಷಿಸಲ್ಪಟ್ಟ ಪ್ರಸಿದ್ಧ ದರೋಜಿ ಕರಡಿಧಾಮ ಅಥವಾ ವನ್ಯಜೀವಿಧಾಮ ಇರುವುದು ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ದರೋಜಿ ಗ್ರಾಮದಿಂದ ಹಿಡಿದು ಹೊಸಪೇಟೆ ತಾಲ್ಲೂಕಿನ ರಾಮಸಾಗರದವರೆಗೂ ಹರಡಿ ನಿಂತಿರುವ ಕಲ್ಲುಬಂಡೆಗಳ ಬೆಟ್ಟಗುಡ್ಡಗಳನ್ನು ಹೊಂದಿರುವ ಕರಡಿಗಳ ನೆಲೆವೀಡು. ಇದು ಸುಮಾರು ೧೫೦ಕ್ಕೂ ಹೆಚ್ಚು ಕರಡಿಗಳಲ್ಲದೇ ಚಿರತೆ, ಜಿಂಕೆ, ಕಾಡುಹಂದಿ, ಮುಳ್ಳುಹಂದಿ, ತೋಳ, ನವಿಲು ಮೊದಲಾದ ಪ್ರಾಣಿಪಕ್ಷಿಗಳನ್ನು ನಾವು ಇಲ್ಲಿ ಕಾಣಬಹುದು. ಪ್ರಕೃತಿ ಪ್ರಿಯರೂ ಮಾಜಿಮಂತ್ರಿಗಳೂ ಆದ

ಎಂ.ವೈ.ಘೋರ್ಪಡೆಯವರ ಆಸಕ್ತಿಯಿಂದ ೧೯೯೪ರಲ್ಲಿ ಸುಮಾರು ೫೫೮೭.೩೦ ಹೆಕ್ಟೇರ್ ಅರಣ್ಯವನ್ನು ದರೋಜಿ ಕರಡಿಧಾಮವೆಂದು ಘೋಷಿಸಲಾಯಿತು. ಏಷಿಯಾ ಖಂಡದಲ್ಲೇ ಪ್ರಥಮವಾಗಿ ಕರಡಿಗಳ ಸಂರಕ್ಷಣೆಗಾಗಿ ಸ್ಥಾಪಿಸಲಾದ ನಾಡಿನ ಪ್ರಸಿದ್ಧ ವನ್ಯಜೀವಿ ತಾಣವು ಇದಾಗಿದೆ.

**೩.೨ ಧಾರ್ಮಿಕ ತೀರ್ಥಗಳು**

ಸಂಡೂರು ತಾಲ್ಲೂಕಿನಲ್ಲಿ ಹಲವಾರು ತೀರ್ಥಕ್ಷೇತ್ರಗಳು ಮತ್ತು ಮಠಗಳು ಕಂಡುಬರುತ್ತವೆ. ಪ್ರಾಕೃತಿಕವಾಗಿ ಬೆಟ್ಟಗುಡ್ಡಗಳಿಂದ ಕೂಡಿದ ಈ ಪ್ರದೇಶದಲ್ಲಿ ಸಹಜವಾಗಿಯೇ ಅನೇಕ ನೀರಿನ ಝರಿಗಳು, ಹಳ್ಳಕೊಳ್ಳಗಳು ಉಂಟಾಗಿವೆ. ಇವನ್ನು ಆಯಾ ಸ್ಥಳಗಳ ತೀರ್ಥಗಳೆಂದು ಕರೆಯುತ್ತಾರೆ. "ತೀರ್ಥ" ಎಂಬುದಕ್ಕೆ ನಿಘಂಟುವಿನಲ್ಲಿ ಪವಿತ್ರಜಲ, ಪುಣ್ಯಕ್ಷೇತ್ರ ಎಂಬ ಅರ್ಥವನ್ನು ನೀಡುತ್ತದೆ. ಈ ತಾಲ್ಲೂಕಿನಲ್ಲಿ ಗಿರಿ-ಕಂದರಗಳಿಂದ ಕೂಡಿದ್ದು, ಹೆಚ್ಚು ಮಳೆ ಬೀಳುವ ಪ್ರದೇಶವಾಗಿದ್ದು, ಅನೇಕ ಹಳ್ಳ-ಕೊಳ್ಳಗಳಿಂದ ಕೂಡಿದ ಈ ಪ್ರದೇಶದಲ್ಲಿ ಅನೇಕ ಪವಿತ್ರ ಜಲವನ್ನು ಹೊಂದಿರುವ ಔಷಧಿ ಗುಣವನ್ನು ಹೊಂದಿದ ತೀರ್ಥಕ್ಷೇತ್ರಗಳು ಸಹ ಸಾಕಷ್ಟಿವೆ. ಆದರೆ ಈಗ ಗಣಿಗಾರಿಕೆಯ ಪ್ರಭಾವದಿಂದ ಅನೇಕ ತೀರ್ಥಗಳು ಕಣ್ಮರೆಯಾಗುತ್ತಿವೆ. ಇಂದಿಗೂ ಕೆಲವು ತೀರ್ಥಕ್ಷೇತ್ರಗಳು ಉಳಿದಿರುವುದನ್ನು ಕಾಣಬಹುದು ಅವುಗಳು ಈ ಕೆಳಗಿನಂತಿವೆ.

**ಹರಿಶಂಕರ ತೀರ್ಥ**

ಈ ತೀರ್ಥವು ಕುಮಾರಸ್ವಾಮಿ ದೇವಸ್ಥಾನಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು ೪-೫ ಕಿಲೋಮೀಟರ್ ಮೊದಲೇ ಬಲಪಕ್ಕದಲ್ಲಿ ಕಾಣಸಿಗುತ್ತದೆ. ಶಿವನು ತಪಸ್ಸಿಗೆ ಕುಳಿತಾಗ ಮನ್ಮಥನು ಆತನ ತಪಸ್ಸನ್ನು ಭಂಗ ಮಾಡುತ್ತಾನೆ. ಆಗ ಶಿವನು ತನ್ನ ಫಾಲನೇತ್ರದಿಂದ ಮನ್ಮಥನನ್ನು ಸುಟ್ಟು ಭಸ್ಮ ಮಾಡುತ್ತಾನೆ. ಆಗ ವಿಷ್ಣುವು, ಪರಶಿವನನ್ನು ಕಂಡು ತನ್ನ ಮಗ ಎಸಗಿದ ಕೃತ್ಯವನ್ನು ಮನ್ನಿಸಿ ಪುನಃ ತನ್ನ ಮಗನನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿಕೊಂಡನು. ಅದಕ್ಕೆ ಶಿವನು, ವಿಷ್ಣುವಿಗೆ ಲೋಹಾಚಲಕ್ಕೆ ಹೋಗಿ ತಪಸ್ಸನ್ನು ಆಚರಿಸುವಂತೆ ಹಾಗೂ ನಿನ್ನ ಇಷ್ಟಾರ್ಥವನ್ನು ಸಿದ್ಧಿಗೊಳಿಸುವುದಾಗಿ ತಿಳಿಸಿದನು. ಅದೇ ಪ್ರಕಾರ ವಿಷ್ಣುವು ಲೋಹಾಚಲಕ್ಕೆ ಬಂದು ತನ್ನ ಗಧೆಯಿಂದ ಹೊಡೆದು ಒಂದು ತೀರ್ಥವನ್ನು ನಿರ್ಮಿಸಿದನು. ಆ ತೀರ್ಥದಲ್ಲಿ ತ್ರಿಕಾಲ ಸ್ನಾನ ಮಾಡಿ ಈಶ್ವರನನ್ನು ಕುರಿತು ಪ್ರಾರ್ಥನೆ ಕೈಗೊಂಡನು. ಅಂದು ವಿಷ್ಣುವು ಈ ತೀರ್ಥವನ್ನು ನಿರ್ಮಾಣ ಮಾಡಿದ್ದರ ಪ್ರತೀಕವಾಗಿ

ಇಂದಿಗೂ ಈ ಸ್ಥಳದಲ್ಲಿ ತೀರ್ಥವಿದೆಯೆಂದೂ, ಶಿವನ ಸ್ಮರಣಾರ್ಥವಾಗಿ ದೇವಾಲಯ ಕಟ್ಟಿಸಿ ಶಿವಲಿಂಗ ಪ್ರತಿಷ್ಠಾಪಿಸಿದಂತೆಯು ತಿಳಿದುಬರುತ್ತದೆ. ಈ ತೀರ್ಥಕ್ಕೆ ಬೆಟ್ಟದ ಮೇಲಿನಿಂದ ಸದಾಕಾಲ (ಸತತವಾಗಿ) ನಂದಿಯ ಬಾಯಿಯಿಂದ ನೀರು ಸುರಿಯುತ್ತಿರುತ್ತದೆ. ಇಲ್ಲಿ ಒಂದು ರಾಷ್ಟ್ರಕೂಟರ ಕಾಲದ ದೇವಾಲಯವಿದ್ದು, ಗರ್ಭಗೃಹದಲ್ಲಿ ಶಿವಲಿಂಗವಿದೆ.

ಈ ತೀರ್ಥದ ಕುರಿತು ಮತ್ತೊಂದು ಕಥೆಯ ಪ್ರಕಾರ ವಡ್ಡಾರಾಧನೆಯ ಕೃತಿಯಲ್ಲಿ ಬರುವ ಕಾರ್ತಿಕಋಷಿಯ ಕಥೆಯಂತೆ ಕಾರ್ತಿಕಋಷಿ ಪ್ರತಿಮಾಯೋಗದಲ್ಲಿ ಧ್ಯಾನ ಆಸಕ್ತನಾಗಿದ್ದಾಗ ಅವನ ದೇಹದ ಮೇಲೆ ಸುರಿದ ನೀರು ಇಲ್ಲಿ 'ಸರ್ವೌಷದ'ವಾಗಿ ಪರಿಣಮಿಸಿ ತೀರ್ಥಕ್ಷೇತ್ರ ಆಗಿರಬಹುದು ಎನ್ನುವ ನಂಬಿಕೆಯೂ ಇರುವುದು. ಒಟ್ಟಿನಲ್ಲಿ ಈ ತೀರ್ಥ ಪ್ರದೇಶವು ವನವಿಹಾರಕ್ಕೆ ಸೂಕ್ತವಾದ, ಪ್ರಶಾಂತವಾದ ಮತ್ತು ಪರಿಶುದ್ಧವಾದ ನೀರು ಸಿಗುವ ಸ್ಥಳವಾಗಿದೆ. ಇಲ್ಲಿಯ ನೀರು ಪರಿಶುದ್ಧವಾದ ಖನಿಜಾಂಶಗಳಿಂದ ಕೂಡಿರುವ ಆರೋಗ್ಯಕರವಾದ ಔಷಧದಂತೆ ಇರುವವು ಎಂದು ಬ್ರಿಟೀಷ್ ಅಧಿಕಾರದಲ್ಲಿ ಮುಂಬೈ ಸರಕಾರದಿಂದ ಪ್ರಶಂಸೆ ಪಡೆದುಕೊಂಡಿದೆ.

**ಅಗಸ್ತ್ಯ ತೀರ್ಥ**

ಕುಮಾರಸ್ವಾಮಿ ಬೆಟ್ಟದ ಕುಮಾರಸ್ವಾಮಿ ದೇವಾಲಯದ ಮುಂದೆ ಇರುವ ತೀರ್ಥವನ್ನು 'ಅಗಸ್ತ್ಯತೀರ್ಥ' ಎಂದು ಕರೆಯುತ್ತಾರೆ. ಈ ತೀರ್ಥವು ಅಗಸ್ತ್ಯ ಋಷಿಗಳಿಂದ ನಿರ್ಮಾಣ ಆಗಿರುವುದು ಎಂಬ ಪ್ರತೀತಿ ಇದೆ. ಋಗ್ವೇದ, ಮಹಾಭಾರತ, ಪುರಾಣಗಳಲ್ಲಿ ಅಗಸ್ತ್ಯ ಮುನಿಯ ಹೆಸರು ಕಾಣಸಿಗುತ್ತದೆ. ಪರಮೇಶ್ವರನ ಆಜ್ಞೆಯಂತೆ ಅಗಸ್ತ್ಯನು ಲೋಹಾಚಲಕ್ಕೆ ಬಂದು ತೀರ್ಥ ನಿರ್ಮಾಣ ಮಾಡಿ, ಅದರಲ್ಲಿ ತ್ರಿಕಾಲ ಸ್ನಾನ ಮಾಡಿ, ಷಣ್ಮುಖ ದ್ವಾದಶಕ್ಷರ ಮಂತ್ರದ ಪುನಃರುಚ್ಚರಣೆ ಮಾಡತೊಡಗಿದನು. ಆಗ ಕುಮಾರಸ್ವಾಮಿಯು ಪ್ರತ್ಯಕ್ಷನಾಗಿ ಇಲ್ಲಿಯೇ ವಾಸವಾಗಿ ಕೆಲವು ಕಾಲದ ನಂತರ ನೀನು ಕೇಳಿದ ಆತ್ಮಪೂಜೆಯ ವಿಧಿಯನ್ನು ಉಪದೇಶಿಸಿ ತನ್ನ ಇಷ್ಟಾರ್ಥವನ್ನು ಪೂರ್ಣಗೊಳಿಸುವೆನು ಎಂದನು. ಈ ತೀರ್ಥವು ಎಲ್ಲ ತೀರ್ಥಗಳಿಗಿಂತ ಪರಮ ಪವಿತ್ರವಾಗಲಿ ಎಂದನು.

ಅಂದಿನಿಂದ ಈ ತೀರ್ಥಕ್ಕೆ ಸ್ವರ್ಗಾಪವರ್ಗವೆಂದು ಹೆಸರು ಬಂದಿತು. ಭಕ್ತಾದಿಗಳು ಈ ತೀರ್ಥದಲ್ಲಿ ಮಿಂದರೆ ಪಾಪಗಳಿಂದ ಮತ್ತು ಸರ್ವರೋಗಗಳಿಂದ ಮುಕ್ತರಾಗುವರು ಎಂದೂ, ಈ ತೀರ್ಥವು ಗಂಗಾ ನದಿಯಂತಹ ಪುಣ್ಯ ನದಿಗಿಂತಲೂ ಶತಾಂಶ ಶ್ರೇಷ್ಠದ್ದು ಹಾಗೂ ಈ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಶತಾಂಶ ಪುಣ್ಯ ಲಭಿಸುವುದು ಎಂಬ ಪ್ರತೀತಿ ಇದೆ. ಈ

ತೀರ್ಥದ ದಂಡೆಯ ಮೇಲೆ ಅಗಸ್ತ್ಯಮುನಿಯ ಒಂದು ಚಿಕ್ಕ ದೇವಾಲಯವಿದ್ದು, ಅದರಲ್ಲಿ ಕುಬ್ಜನಂತೆ ಕಾಣುವ ದೊಡ್ಡ ಹೊಟ್ಟೆ, ಚಿಕ್ಕ ಕೈ ಕಾಲುಗಳು, ಕೈಯಲ್ಲಿ ದಂಡ ಹಿಡಿದು ನಿಂತಿರುವ ಚಿಕ್ಕ ಮೂರ್ತಿ ಇದೆ. ಇದನ್ನೇ ಸ್ಥಳೀಯರು ಅಗಸ್ತ್ಯಋಷಿ ಎಂದು ಕರೆಯುತ್ತಾರೆ.

**ನವಿಲುಸ್ವಾಮಿ ತೀರ್ಥ**

ಕುಮಾರಸ್ವಾಮಿ ದೇವಾಲಯದಿಂದ ಸು.೩.ಕಿ.ಮೀ. ಅಂತರದಲ್ಲಿ ದಕ್ಷಿಣ ಭಾಗಕ್ಕೆ ಕೊಳ್ಳ ಪ್ರದೇಶದಲ್ಲಿ ಈ ತೀರ್ಥ ಕಾಣಸಿಗುತ್ತದೆ. ಸುತ್ತಲೂ ಬೆಟ್ಟದಿಂದ ಆವರಿಸಿದ ತಗ್ಗಾದ ಪ್ರದೇಶದಲ್ಲಿ ಈ ತೀರ್ಥಕ್ಕೆ ಬೆಟ್ಟದಿಂದ ಸದಾಕಾಲ ನೀರು ಹರಿದುಬರುತ್ತದೆ. ಇಲ್ಲಿ ೩೬ ಕಂಬಗಳಿಂದ ಮೂರು ದ್ವಾರಗಳಿಂದ ಕೂಡಿದ, ಮಧ್ಯ ಚಿಕ್ಕ ಗೋಪುರವನ್ನು ಹೊಂದಿದ ಚೌಕಾಕಾರದ ಗುಡಿಯೊಂದು ಅಲ್ಲಿದ್ದು, ಒಳಗಡೆ ಮಯೂರ ವಾಹನವಾದ ಕಾರ್ತಿಕೇಯನ ಪ್ರತಿಮೆಯಿದೆ. ಕಲ್ಯಾಣ ಚಾಲುಕ್ಯರ ಕಾಲದ್ದು, ಅದನ್ನು ಈಗ ನವಿಲುಸ್ವಾಮಿಯ ದೇವಾಲಯ ಹಾಗೂ ನವಿಲು ತೀರ್ಥವೆಂದು ಕರೆಯಲಾಗುತ್ತದೆ. ಮೊದಲು ಗರ್ಭಗುಡಿಯ ಒಳಗೆ ಸುಂದರವಾದ ಕಾರ್ತಿಕೇಯನ ಪ್ರತಿಮೆ ಇತ್ತೆಂದು ಅದು ಹಾಳಾದಾಗ ಅದೇ ರೀತಿಯ ಮತ್ತೊಂದು ಪ್ರತಿಮೆಯನ್ನು ಪ್ರತಿಷ್ಠಾಪಿಸಲಾಯಿಸು ಎಂದು ತಿಳಿದುಬರುತ್ತದೆ.

ಈ ದೇವಾಲಯದ ಮುಂದುಗಡೆ ಜೀರ್ಣೋದ್ಧಾರಕ್ಕೆ ಸಂಬಂಧಿಸಿದ ವಿಷಯನ್ನು ಒಳಗೊಂಡ ಎರಡು ಶಾಸನಗಳು ಕಂಡುಬರುತ್ತವೆ. ಈ ದೇವಾಲಯವು ವಿಜಯನಗರದ ಅರಸರಿಂದ ನಿರ್ಮಿಸಲ್ಪಟ್ಟಿರುವ ದೇವಾಲಯದಂತೆ ಕಾಣುತ್ತದೆ. ಅಲ್ಲದೆ ಇದರ ಮುಂದಿನ ಹೊಂಡವನ್ನು ಮತ್ತು ಮಂಟಪವನ್ನು ವಿಜಯನಗರದ ಅರಸ ಬುಕ್ಕರಾಯನು ಮಾಡಿಸಿದನೆಂದೂ ಅಲ್ಲಿಯ ಶಾಸನಗಳು ಸ್ಪಷ್ಟವಾಗಿ ತಿಳಿಸುತ್ತವೆ. ಶ್ರೀಎಚ್.ದೇವೀರಪ್ಪನವರು ವಡ್ಡಾರಾಧನೆಯಲ್ಲಿ ಶಿವಕೋಟ್ಯಾಚಾರ್ಯನು ಹೇಳಿರುವ ನವಿಲುಸ್ವಾಮಿಯ ಇದ್ದಿರುವಿಕೆಯು ಕುಮಾರಸ್ವಾಮಿ ಗುಡಿಯ ಹಿಂಭಾಗದ ತಗ್ಗಾದ ತಂಪು ಪ್ರದೇಶದಲ್ಲಿ ಎಂದಿರುವುದು ಗಮನಾರ್ಹ.

ನವಿಲು ರೂಪಿನ ದೇವತೆ ಕಾರ್ತಿಕ ಋಷಿಯನ್ನು ಎತ್ತಿಕೊಂಡು ಬಿಟ್ಟಿದ್ದು ಇಂದಿನ ನವಿಲುಸ್ವಾಮಿ ಆಗಿರಬಹುದು. ಡಾ.ಡಿ.ಎಲ್.ನರಸಿಂಹಾಚಾರ್ ಊಹಿಸಿರುವುದನ್ನು, ದೇವೀರಪ್ಪನವರ ಹೇಳಿಕೆಯನ್ನು ಹೋಲಿಸಿ ನೋಡಬಹುದು. ಈ ದೇವಸ್ಥಾನವು ಶಕವರ್ಷ ೬೪೧ (ಕ್ರಿ.ಶ.೭೦೯)ರಲ್ಲಿ ಸ್ಥಾಪಿಸಿದಂತೆ ತಿಳಿದುಬರುತ್ತದೆ. ಸ್ಥಳೀಯ ಕಥೆಯ ಪ್ರಕಾರ ಪಾರ್ವತಿ ದೇವಿಯು ಕುಮಾರನಿಗೆ ಮದುವೆ ಮಾಡಬೇಕೆಂಬ ಕಾರಣದಿಂದ ಕನ್ಯೆಯನ್ನು ನೋಡಿ ಬಂದಳು.

ಕುಮಾರನು ತನ್ನ ತಾಯಿಯನ್ನು ಕನ್ಯೆ ಹೇಗಿದ್ದಾಳೆ ಎಂದು ಕೇಳಿದನು. ಅದಕ್ಕೆ ತಾಯಿ ನನ್ನಂತೆಯೇ ಇದ್ದಾಳೆ ಎಂದಳು. ಅದಕ್ಕೆ ಕುಮಾರನು ನಿನ್ನಂತೆಯೇ ಇದ್ದರೆ ಆಕೆ ನನಗೆ ತಾಯಿ ಸಮಾನಳು. ಆದ್ದರಿಂದ ನನಗೆ ಮದುವೆ ಬೇಡ, ಅಲ್ಲದೇ ನಾನು ಯಾವ ಸ್ತ್ರೀಯರ ಮುಖವನ್ನು ನೋಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದ ಅಂದಿನಿಂದ ಕುಮಾರನ ದರ್ಶನ ಸ್ತ್ರೀಯರಿಗೆ ನಿಷೇಧವಾಯಿತು ಎಂದು ತಿಳಿದುಬರುತ್ತದೆ. ಇದರಿಂದ ಮರುಗಿದ ಪಾರ್ವತಿದೇವಿ ಅಬಲೆಯರಿಗೂ ನಿನ್ನ ದರ್ಶನ ಸಿಗುವಂತೆ ಉಪಾಯ ಮಾಡಬೇಕೆಂದು ಕೇಳುತ್ತಾಳೆ. ಅದಕ್ಕಾಗಿ ಮಹಿಳೆಯರಿಗೆ ದರ್ಶನ ನೀಡುವ ಸಲುವಾಗಿ ನವಿಲುಸ್ವಾಮಿಯಾಗಿ ಕಾಣಿಸಿಕೊಳ್ಳುತ್ತಾನೆ ಎಂಬುದು ಪ್ರತೀತಿ. ಆತನು ನೆಲೆಸಿದ ಈ ಸ್ಥಳದಲ್ಲಿ ಇರುವ ಈ ತೀರ್ಥಕ್ಕೆ ನವಿಲುಸ್ವಾಮಿ ತೀರ್ಥ ಎಂದು ಹೆಸರು ಬಂದಿದೆ.

**ನರಸಿಂಹತೀರ್ಥ**

ಈ ತೀರ್ಥವು ಸಂಡೂರು ಗ್ರಾಮದಿಂದ ದಕ್ಷಿಣಕ್ಕೆ ಇದ್ದು, ಧರ್ಮಾಪುರದಿಂದ ಮುಂದೆ ಸು.೨ಕಿ.ಮೀ. ಎಡಪಕ್ಕದಲ್ಲಿ ಕಾಲುದಾರಿಯ ಮೂಲಕ ಹೋದರೆ ಈ ದೇವಸ್ಥಾನವು ಸಿಗುತ್ತದೆ. ಓಬಳಗಂಡಿಯ ಅಂಚಿನ ಮೇಲ್ಭಾಗದಲ್ಲಿರುವ ಈ ದೇವಸ್ಥಾನ ಸಾಕಷ್ಟು ವರ್ಷಗಳಿಂದಲೂ ಪೂಜೆಗೆ ಒಳಗಾಗುತ್ತ ಬಂದಿದೆ. ಮಾರ್ಚ್ ತಿಂಗಳಲ್ಲಿ ಮೂರು ದಿನಗಳವರೆಗೆ ನಡೆಯುವ ಇಲ್ಲಿಯ ಜಾತ್ರೆಯಲ್ಲಿ ಸುತ್ತಮುತ್ತಲಿನಿಂದಲೂ ಸಾಕಷ್ಟು ಜನರು ಬಂದು ಸೇರುತ್ತಾರೆ. ಈ ಸಂದರ್ಭದಲ್ಲಿ ಪೂಜಾರಿ ಐದು ದಿನ ಉಪವಾಸ ಇದ್ದು, ಹಣ್ಣು-ಹಾಲು ತೆಗೆದುಕೊಳ್ಳುತ್ತಾನೆ. ಜಾತ್ರೆಯ ದಿನ ದೊಡ್ಡ ಬೇಟೆಯ ಮರವನ್ನು ಬಲಿ ಕೊಡುತ್ತಾರೆ.

ಇಲ್ಲಿ ಬೇಟೆ ಮರ ಎಂದರೆ ಪ್ರಾಣಿಯ ಬದಲು ಮರವನ್ನು ಬಲಿ ಕೊಡುತ್ತಾರೆ. ಅದು 'ತದಕಿ' ಮರ. ಈ ಮರವನ್ನು ಮೈಯಲ್ಲಿ ದೇವರು ಬಂದ ವ್ಯಕ್ತಿ ಈ ಮರವನ್ನು ಕೇವಲ ಸಲಾಕೆಯಿಂದ ಬೇರು ಸಹಿತ ಕೀಳುತ್ತಾನೆ. ಕೀಳಿದ ಮರವನ್ನು ದೇವಾಲಯಕ್ಕೆ ತರುವಾಗ ಮರದ ಕೊರಡಿನಲ್ಲಿ ಮಲಗಿದ ಪೂಜಾರಿಗೆ ಬಸವಿಯ ಜನಾಂಗದ ಇಬ್ಬರು ಹೆಂಗಸರು ಚಾಮರವನ್ನು ಬೀಸುತ್ತ ಕರೆದುಕೊಂಡು ಹೋಗುತ್ತಾರೆ. ಪೂಜಾರಿಗೆ ಎಚ್ಚರವಾದ ನಂತರ ತೇರು ಎಳೆಯಲಾಗುತ್ತದೆ. ಈಗಲೂ ಈ ಸಂಪ್ರದಾಯ ಆಚರಣೆಯಲ್ಲಿದೆ. ಸುಮಾರು ಒಂದು ನೂರು ಮೀಟರ್ ಗಿಂತಲೂ ಹೆಚ್ಚು ಎತ್ತರವಾದ ಎರಡು ಬಂಡೆಗಳ ಅಭಿಮುಖ ಸ್ಥಿತಿಯ ಓಬಳಗಂಡಿ ಮತ್ತು ಶ್ರೀನರಸಿಂಹಸ್ವಾಮಿ ದೇವಸ್ಥಾನ ಇಂದಿಗೂ ವನವಿಹಾರಕ್ಕೆ ಸೂಕ್ತವಾದ ಪ್ರದೇಶವಾಗಿದೆ.

### ಭೀಮತೀರ್ಥ

ಈ ತೀರ್ಥವು ಸಂಡೂರಿನಿಂದ ಬಳ್ಳಾರಿಗೆ ಹೋಗುವ ಮಾರ್ಗ ಮಧ್ಯದಲ್ಲಿದೆ. ಸಂಡೂರು ಗ್ರಾಮದಿಂದ ಸುಮಾರು ೨.ಕಿ.ಮೀ ಅಂತರದಲ್ಲಿದ್ದು ಕೃಷ್ಣಾನಗರದ ಬೆಟ್ಟದ ಹಿಂದಿನ ಸಂದಿನಲ್ಲಿ ಇದೆ. ಈ ತೀರ್ಥ ನಿರ್ಮಾಣದ ಕುರಿತು ಪೌರಾಣಿಕ ಹಿನ್ನೆಲೆ ಹೀಗಿದೆ. ದ್ವಾಪರಯುಗದಲ್ಲಿ ಪಂಚಪಾಂಡವರು ವನವಾಸದಲ್ಲಿದ್ದ ಸಂದರ್ಭದಲ್ಲಿ ಲೋಹಾಚಲವಾಸಿಯಾದ ಶ್ರೀ ಕುಮಾರಸ್ವಾಮಿ ದೇವಾಲಯಕ್ಕೆ ಬಂದು ಸ್ವಾಮಿದರ್ಶನ ಪಡೆದುಕೊಂಡು ಅಲ್ಲಿ ತಾವು ಬಂದಿದ್ದರ ಸ್ಮರಣಾರ್ಥವಾಗಿ ತಮ್ಮ ಹೆಸರಿನಿಂದ ಪಂಚಲಿಂಗಗಳನ್ನು ಪ್ರತಿಷ್ಠೆ ಮಾಡಿದರು. ಇಂದಿಗೂ ಇವರುಗಳ ಹೆಸರಿನಿಂದ ಕರೆಯುವ ಪಂಚಲಿಂಗಗಳು ಕುಮಾರಸ್ವಾಮಿ ದೇವಸ್ಥಾನದ ಆವರಣದಲ್ಲಿವೆ. ಕುಮಾರಸ್ವಾಮಿಯ ದರ್ಶನ ಪಡೆದುಕೊಂಡು ಬೆಟ್ಟದಿಂದ ಇಳಿದು ಬರುತ್ತಿರುವಾಗ ಧರ್ಮರಾಜನು ತಮ್ಮನಾದ ಭೀಮನಿಗೆ ಹೇಳುತ್ತಾನೆ.

ನನಗೆ ತುಂಬಾ ಬಾಯಾರಿಕೆಯಾಗುತ್ತಿದೆ ನಿನ್ನ ಗಧೆಯಿಂದ ಈ ಬಂಡೆಯನ್ನು ಹೊಡೆದು ಜಲವನ್ನು ತೆಗೆಯಬಾರದೆ ಎಂದು ಕೇಳಿದ ತಕ್ಷಣ ಭೀಮನು ಅಣ್ಣನ ಆಜ್ಞೆಯಂತೆ ಗಧೆಯಿಂದ ಬಂಡೆಯನ್ನು ಹೊಡೆದು ಜಲ ತೆಗೆದನು. ಹೀಗೆ ಧರ್ಮರಾಜನ ತಮ್ಮ ಭೀಮನಿಂದ ನಿರ್ಮಿತವಾದ ಈ ತೀರ್ಥವು ಇತರ ತೀರ್ಥಗಳಂತೆ ಪ್ರಸಿದ್ಧವಾಗಬೇಕು ಎಂದು ಕುಮಾರಸ್ವಾಮಿಯಲ್ಲಿ ಪ್ರಾರ್ಥಿಸಿಕೊಂಡನು. ಅಂದಿನಿಂದ ಈ ತೀರ್ಥವು ಭೀಮತೀರ್ಥ ಎಂದು ಪ್ರಸಿದ್ಧವಾಗಿದ್ದು, ಇದು ಇಂದು ವನವಿಹಾರಕ್ಕೆ ಯೋಗ್ಯವಾದ ಸ್ಥಳವಾಗಿದೆ.

### ಭೈರವತೀರ್ಥ

ಈ ತೀರ್ಥವು ಸಂಡೂರಿನಿಂದ ಬಳ್ಳಾರಿಗೆ ಹೋಗುವ ಮಾರ್ಗದ ಮಧ್ಯದಲ್ಲಿ ಅಂದರೆ ತಾರಾನಗರ ಗ್ರಾಮದಿಂದ ಸು.೬ಕಿ.ಮೀ ಅಂತರದಲ್ಲಿದೆ. ಈ ತೀರ್ಥಕ್ಕೆ ತನ್ನದೇ ಆದ ಪೌರಾಣಿಕ ಹಿನ್ನೆಲೆ ಇದೆ. ತಾರಕಾಸುರನನ್ನು ಶ್ರೀ ಕುಮಾರಸ್ವಾಮಿಯು ಸಂಹಾರ ಮಾಡಿದನೆಂದು ತಾರಕಾಕ್ಷ ದಾಳಿ ಮಾಡಲು ಪರಶಿವನ ಆದೇಶದಂತೆ ಭೈರವನು ಲೋಹಾಚಲಕ್ಕೆ ಬಂದು ತ್ರಿಶೂಲ ಆಯುಧದಿಂದ ತಾರಕಾಸುರನ ಪುತ್ರನಾದ ತಾರಕಾಕ್ಷನನ್ನು ಸಂಹಾರ ಮಾಡಿದನು. ದಾನವನ ತೊಂದರೆಯಿಂದ ಮುಕ್ತರಾದ ಅಲ್ಲಿಯ ಜನರು ಭೈರವನನ್ನು ಇಲ್ಲಿ ಸದಾ ವಾಸ ಮಾಡುವಂತೆ ಪ್ರಾರ್ಥಿಸಿದರು. ಬೆಟ್ಟದ ಪೂರ್ವದಿಕ್ಕಿನಲ್ಲಿ ತೀರ್ಥವನ್ನು ನಿರ್ಮಾಣ ಮಾಡಿ ಅಲ್ಲಿ ನೆಲೆಸಿದನು. ಇಲ್ಲಿಯ ದೇವಾಲಯದಲ್ಲಿ ಈಶ್ವರ ಲಿಂಗವಿದೆ. ಈ ತೀರ್ಥವು ಸುಂದರವಾದ ಪ್ರಕೃತಿಯ ಮಧ್ಯೆ

ಇದ್ದು, ಪರಿಶುದ್ಧವಾದ ವಾತಾವರಣವನ್ನು ನೀರನ್ನು ಪಡೆದಿದೆ. ಈ ಪ್ರದೇಶವೂ ವನವಿಹಾರಕ್ಕೆ ಯೋಗ್ಯವಾಗಿದೆ.

**೩.೩ ದೇವಾಲಯಗಳು**

ವಾಸ್ತುಶಾಸ್ತ್ರ ಎಂದರೆ ವಸತಿ ನಿರ್ಮಾಣಶಾಸ್ತ್ರ ಎಂದು ಅರ್ಥ. ವಾಸ್ತುಶಿಲ್ಪಕ್ಕೆ ಸಾಂಸ್ಕೃತಿಕವಾಗಿ ಹೆಚ್ಚಿನ ಮಹತ್ವವಿದೆ. ಹಿಂದೆ ಇವು ಹಳ್ಳಿಗರ ಜೀವ ನಾಡಿಗಳಾಗಿದ್ದವು. ದೇವಾಲಯಗಳು ಅವರಿಗೆ ವಿದ್ಯಾಕೇಂದ್ರಗಳಾಗಿ, ವಿವಿಧ ರೀತಿಯ ಮನರಂಜನೆಯ, ವಿನೋದಾದಿಗಳ ಆಗರವಾಗಿ, ಕುಶಲಕಲೆಗಳ ಸಾಧನಗಳಾಗಿ, ಮತಧರ್ಮಗಳ ನೆಲೆ ದಾಣವಾಗಿ, ದೀನ ದಲಿತರ ಆಶ್ರಯ ಕಲ್ಪತರುವಾಗಿ ಹಲವು ಹತ್ತು ಕಾರ್ಯ ಕ್ಷೇತ್ರಗಳ ಶಾಂತಿ ಧಾಮವಾಗಿ ಇದ್ದುದು ಶಾಸನಾಧಾರಗಳಿಂದ ತಿಳಿದುಬರುತ್ತವೆ. ದೇವಾಲಯಗಳನ್ನು ಕುರಿತು ಅವು ಇರುವ ಗ್ರಾಮ, ಸ್ಥಳ, ಸ್ಮಾರಕ, ಅವಧಿ, ಶೈಲಿ, ಅಭಿಮುಖ, ಸ್ಥಿತಿ, ಪಂಥ ಈ ಹಿನ್ನೆಲೆಯಲ್ಲಿ ಇಲ್ಲಿ ಕಾಣುತ್ತೇವೆ.

**ಗ್ರಾಮ : ಸಂಡೂರು** **ಶೈಲಿ : ಬಾದಾಮಿ ಚಾಲುಕ್ಯ**

**ಸ್ಥಳ : ಕುಮಾರಸ್ವಾಮಿಯ ಬೆಟ್ಟ.** **ಅಭಿಮುಖ : ಪೂರ್ವ**

**ಸ್ಮಾರಕ : ಕುಮಾರಸ್ವಾಮಿ ದೇವಾಲಯ** **ಸ್ಥಿತಿ : ಉತ್ತಮ**

**ಕಾಲ : ಕ್ರಿ.ಶ.ಸು.೧೦ನೆಯ ಶತಮಾನ.** **ಪಂಥ : ಶೈವ**

**ಸಂರಕ್ಷಣೆ : ಕೇಂದ್ರ ಪುರಾತತ್ವ ಇಲಾಖೆ**

ಸಂಡೂರಿನಿಂದ ೧೫ಕಿ.ಮೀ. ದೂರದಲ್ಲಿದೆ. ಕುಮಾರಸ್ವಾಮಿ ದೇವಾಲಯದ ಪ್ರವೇಶದ ಎಡ ಹಸ್ತಿಹಸ್ತದಲ್ಲಿರುವ ಕ್ರಿ.ಶ.೧೦೭೪ರ ಶಾಸನವು ಸ್ವಾಮಿದೇವರ ದೇಗುಲದ ಕೆಲಸ ಮಾಡಿದ ಕಲ್ಕುಟಿಗರಾದ ಬಿಯಳಚಟ್ಟ, ಬೆನಗಬೋವ, ಕಮ್ಮಾರನಾಯಕರನ್ನು ಉಲ್ಲೇಖಿಸುತ್ತದೆ. ಹಾಗೂ ಈ ದೇಗುಲದ ಕೆಲಸ ಮಾಡಿದಕ್ಕೆ ಶ್ರೀಸ್ವಾಮಿದೇವರ ತಪೋವನಾಧಿಪತಿಗಳಾದ ಗಧಾದರರಸರು ಕಲ್ಕುಟಿಗರಾದ ಬಿಯಳಚಟ್ಟ, ಬೆನಗಬೋವ, ಕಮ್ಮಾರನಾಯಕರಿಗೆ ಭೂದಾನವನ್ನು ನೀಡಿದ ವಿಷಯವನ್ನು ತಿಳಿಸುತ್ತದೆ.

ಪಾರ್ವತಿದೇವಿ ದೇವಾಲಯದ ಮಂಟಪದಲ್ಲಿ ಇರಿಸಿರುವ ಕ್ರಿ.ಶ.೧೨೦೬ರ ಶಾಸನದಲ್ಲಿ ಹೊಯ್ಸಳ ದೊರೆ ವೀರಬಲ್ಲಾಳನ ಆಜ್ಞೆಯಂತೆ ಅವನ ದಂಡನಾಯಕನಾದ ಮಹದೇವ ದಂಡನಾಯಕನು ಹಿಂದೆ ರಾಷ್ಟ್ರಕೂಟ ವಂಶದ ಕೃಷ್ಣರಾಜನು ಸ್ವಾಮಿದೇವರಿಗೆ ನೀಡಿದ್ದ

ಕೆರೆಯಪಳ್ಳಿ (ಈಗಿನ ಕೆರ್ನಳ್ಳಿ) ಗ್ರಾಮವನ್ನು ಪುನರ್ ದತ್ತಿಯಾಗಿ ನೀಡುತ್ತಾನೆ. ಈ ದತ್ತಿಯನ್ನು ಆ ಸ್ಥಳದ ವಿಷ್ಣುಕರ ಬ್ರಹ್ಮಚಾರಿ ಸ್ವೀಕರಿಸುತ್ತಾನೆ ಎಂದು ಈ ಶಾಸನದಿಂದ ತಿಳಿದುಬರುತ್ತದೆ.

ಕುಮಾರಸ್ವಾಮಿ ದೇವಾಲಯದ ಜಾಗಟೆಯ ಮೇಲಿನ ಕ್ರಿ.ಶ.೧೮೫೪ರ ಶಾಸನವು ಕುಮಾರಸ್ವಾಮಿ ದೇವರಿಗೆ ಗುಹೇಶ್ವರ ದುರ್ಗದ ಅನುಭವ ಗೋತ್ರದ ಕಂಚುಗಾರ ಬಟ್ಲ ಬಸವನ ಪುತ್ರ ಸಿಂಗಪ್ಪನು(ಗಡಿಯಾರ) ತೂಕ ಶೇ.೫೬ ಜಾಗಟೆಯ ನೀಡಿದ ಹಾಗೂ ಸಣ್ಣ ಬಸಪ್ಪನ ಪುತ್ರ ಸಕ್ರಪ್ಪ ಮತ್ತು ಕುಮಾರಪ್ಪನವರು ಸಲಾಕಿ (ಸರಪಳಿ) ಮಾಡಿಸಿ ಕೊಟ್ಟಿರುತ್ತಾರೆ. ಇದರ ತೂಕ ೮೧. ಸೇರು ಎಂದು ಉಲ್ಲೇಖಿಸುತ್ತದೆ. ಈ ದೇವಾಲಯವು ರಾಷ್ಟ್ರಕೂಟರ ಕಾಲದಿಂದ ಹಿಡಿದು ವಿಜಯನಗರ ಕಾಲದವರೆಗೂ ಜೀರ್ಣೋದ್ಧಾರ, ಅಭಿವೃದ್ಧಿ ಕಾರ್ಯ ನಡೆಯುತ್ತ ಬಂದಿರುವಂತೆ ಕಾಣುವುದು.

ಇದಕ್ಕೆ ಆಧಾರವೆಂದರೆ ದೇವಾಲಯದ ಪ್ರಕಾರಕ್ಕೆ ತಾಗಿಕೊಂಡು ದ್ವಾರಮಂಟಪವಿದೆ. ದ್ವಾರಮಂಟಪದ ಗೋಪುರ ಇಟ್ಟಿಗೆ, ಗಾರೆಗಳಿಂದ ಐದು ಹಂತಗಳಲ್ಲಿ ರಚನೆಗೊಂಡಿದ್ದು, ಈ ದೇವಾಲಯವು ಈಗ ಕೇಂದ್ರ ಪುರಾತತ್ವ ಇಲಾಖೆಯ ನಿರ್ವಹಣೆಗೆ ಒಳಪಟ್ಟಿದೆ. ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಅಧಿಷ್ಠಾನದ ಮೇಲೆ ನಿರ್ಮಾಣವಾಗಿದೆ. ಇದು ಗರ್ಭಗೃಹ, ಅಂತರಾಳ, ಮುಖಮಂಟಪವನ್ನು ಹೊಂದಿದೆ. ಗರ್ಭಗೃಹದ ಪ್ರವೇಶ ದ್ವಾರವು ಹೂವಿನ ಎಸಳುಗಳು, ಮಯೂರ ಸಾಲು ಹಾಗೂ ಮರದಿಂದ ರಚಿಸಿದ ಗಜ, ಗಿಳಿಗಳ ಕೆತ್ತನೆಯ ಶಿಲ್ಪಗಳಿಂದ ಅಲಂಕೃತಗೊಂಡಿದೆ. ಗರ್ಭಗೃಹದಲ್ಲಿ ಆರು ಕಂಬಗಳಿದ್ದು, ಕಂಬಗಳಲ್ಲಿ ಚೌಕಾಕಾರ ಹಾಗೂ ವರ್ತುಲಾಕಾರದ ಭಾಗಗಳಿರುತ್ತವೆ.

ಇವು ಅಂತರಾಳದ ಕಂಬಗಳಂತಿವೆ. ಅವುಗಳ ಮಧ್ಯದಲ್ಲಿ ಸುಮಾರು ನಾಲ್ಕುವರೆ ಅಡಿ ಎತ್ತರದ ಕುಮಾರಸ್ವಾಮಿಯ ಮೂರ್ತಿಯು ಸಮಭಂಗಿಯಲ್ಲಿ ನಿಂತಿದೆ. ಸುತ್ತಲೂ ಪ್ರಭಾವಳಿ ಹಾಗೂ ಕಿರೀಟ, ಮುಕುಟ, ಕೊರಳಾಭರಣ, ಕರ್ಣಾಭರಣಗಳನ್ನು ಹೊಂದಿದೆ. ಈತನ ಒಂದು ಕೈಯಲ್ಲಿ ದಂಡಾಯುಧ ಇನ್ನೊಂದು ಕೈ ಅಭಯ, ಕೈ ಮೇಲೆ ಕ್ರೌಂಚಪಕ್ಷಿ ನಿಂತಿದೆ. ಇದರ ಕೆಳಗೆ ರಾಮ, ಲಕ್ಷ್ಮಣರು, ಬಲಬದಿ ಕೆಳಗೆ ಮಯೂರ ಶಿಲ್ಪಗಳನ್ನು ಕಂಡರಿಸಲಾಗಿದೆ.

ಸಭಾಮಂಟಪದ ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು, ಕೆಳ ಮತ್ತು ಮೇಲೆ ಚೌಕಾಕಾರ, ಮಧ್ಯ ವೃತ್ತಾಕಾರದಲ್ಲಿದ್ದು (ಅದರಲ್ಲಿ ಚೈತ್ಯಾಕಾರದ ಕೆತ್ತನೆಗಳಿವೆ) ಫಲಕ ಬೋಧಿಗೆಗಳನ್ನು ಹೊಂದಿವೆ. ಸಭಾಮಂಟಪದ ಗೋಡೆಗೆ ನಿಂತಿರುವ ಮಹಿಷಮರ್ಧಿನಿ ಮತ್ತು ಪಾರ್ವತಿ ಶಿಲ್ಪಗಳು

ಸುಂದರ ಕೆತ್ತನೆಗಳಿಂದ ಕೂಡಿವೆ. ದೇವಾಲಯದ ಹೊರಗೋಡೆಯ ಅಧಿಷ್ಠಾನದಲ್ಲಿ ಕುಮುದ ಹಾಗೂ ಚೌಕಗಳುಳ್ಳ ಪಟ್ಟಿಕಾ ಭಾಗಗಳು ಎದ್ದು ಕಾಣುತ್ತವೆ. ದೇವಾಲಯದ ಗೋಡೆಗಳಲ್ಲಿ ಎತ್ತರವಾದ ಅರ್ಧಗಂಭಗಳು ಹಾಗೂ ದೇವಕೋಷ್ಠಗಳಿವೆ. ಅರ್ಧಗಂಭಗಳ ವೈಶಿಷ್ಟ್ಯವೆಂದರೆ, ಇವುಗಳೆಲ್ಲಾ ಚೌಕಾಕಾರವಾಗಿದ್ದು, ಕಾಂಡದ ಮೇಲ್ಭಾಗದಲ್ಲಿ ಮೂರು ಮುಖದ ಮುಚ್ಚಳ ಚಾಚುಪೀಠ ಅದರ ಮೇಲೆ ಬೋದಿಗೆ ಇದೆ. ಇಕ್ಕೆಲಗಳಲ್ಲಿ ಚಿಕ್ಕಚಿಕ್ಕ ಅರ್ಧಗಂಭಗಳನ್ನು ಹೊಂದಿದ ಕೋಷ್ಠಕಗಳ ಮೇಲ್ಭಾಗದ ಶಿಖರಗಳು ದೇವಾಲಯದ ತುದಿ ಮಾಳಿಗೆಯನ್ನು ಮುಟ್ಟಿರುತ್ತವೆ. ಕೈಪಿಡಿ ಗೋಡೆಯ ಮೇಲೆ ಕೂಟಗಳು, ನಂದಿ ಶಿಲ್ಪಗಳಿದ್ದು, ಗರ್ಭಗುಡಿಯ ಮೇಲೆ ದ್ರಾವಿಡ ಶೈಲಿಯ ಕೂಟ ಶಿಖರದಲ್ಲಿ ಹಿತ್ತಾಳೆ ಕಳಸವನ್ನು ಇಡಲಾಗಿದೆ.

ಕೆಂಪು ಉಸುಕಿನ ಶಿಲೆಯಲ್ಲಿ ಈ ದೇವಾಲಯ ರಚನೆಯಾಗಿದ್ದು, ಅಮೃತಶಿಲೆಯ ದೀಪಸ್ತಂಭವು ದೇವಾಲಯದ ಮುಂದಿದೆ. ಮುಖಮಂಟಪದ ಇಕ್ಕೆಲಗಳಲ್ಲಿರುವ ಕಂಬಗಳ ಮೇಲೆ ದ್ವಾರಪಾಲಕರ ವಿಗ್ರಹಗಳಿವೆ. ದೇವಾಲಯದ ಅಧಿಷ್ಠಾನವು, ಉಪಾನ, ಜಗತಿ, ಕಂಠ, ತ್ರಿಪಟ್ಟ ಕುಮುದ, ಪದ್ಮ ಮತ್ತು ಪಟ್ಟಿಕೆಗಳನ್ನು ಒಳಗೊಂಡಿದೆ. ಹೊರಗೋಡೆ ಹಿಂಬಣಿ-ಮುಂಬಣಿಗಳಿಂದ ಕೂಡಿದ್ದು, ಗೋಡೆಯ ಮೇಲೆ ಜೋಡಿ ಅರ್ಧಗಂಭಗಳು ಅವುಗಳ ಮೇಲೆ ಶಿಖರ, ಅದರಲ್ಲಿ ಚೈತ್ಯಾಕಾರದ ಕೆತ್ತನೆ ಇದೆ.

ಅಂತರಾಳದ ಮೇಲೆ ಒಂದೇ ಸಾಲಿನಲ್ಲಿರುವ ಐದು ಶಿಖರಗಳಲ್ಲಿ ಮಧ್ಯದ ಶಿಖರ ಉಳಿದವುಗಳಿಗಿಂತಲೂ ಎತ್ತರ ಮತ್ತು ದೊಡ್ಡ ಪ್ರಮಾಣದಲ್ಲಿದ್ದು, ವಿಜಯನಗರದ ದೇವಾಲಯಗಳ ಗೋಪುರದಂತಿದೆ. ಗರ್ಭಗೃಹದ ಮೇಲೆ ನಾಲ್ಕೂ ಭಾಗಗಳಲ್ಲಿ ಪದ್ಮಗಳಿಂದ (ಚೈತ್ಯಾಕಾರ ಮಾದರಿಯಲ್ಲಿ) ಕೂಡಿದ ವಿಜಯನಗರ ಮಾದರಿಯ ಶಿಖರವಿದೆ. ಬಹುಶಃ ಮೇಲಿನ ಶಿಖರಗಳು ವಿಜಯನಗರ ಕಾಲದಲ್ಲಿ ನಿರ್ಮಾಣವಾದಂತೆ ಕಾಣುತ್ತವೆ.

**ಗ್ರಾಮ : ಸಂಡೂರು**
**ಸ್ಥಳ : ಕುಮಾರಸ್ವಾಮಿ ಬೆಟ್ಟ.**
**ಸ್ಮಾರಕ : ಪಾರ್ವತಿದೇವಿ ದೇವಾಲಯ.**
**ಕಾಲ : ಕ್ರಿ.ಶ.೧೧ನೇ ಶತಮಾನ.**
**ಶೈಲಿ : ಬಾದಾಮಿ ಚಾಲುಕ್ಯರ**
**ಅಭಿಮುಖ : ಪೂರ್ವ**
**ಸ್ಥಿತಿ : ಉತ್ತಮ**
**ಪಂಥ : ಶೈವ**
**ಸಂರಕ್ಷಣೆ : ಕೇಂದ್ರ ಪುರಾತತ್ವ ಇಲಾಖೆ**

ಸಂಡೂರಿನಿಂದ ೧೫.ಕಿ.ಮೀ ದೂರದಲ್ಲಿದೆ. ಪಾರ್ವತಿದೇವಿಯ (ಕುಮಾರಸ್ವಾಮಿ ಬೆಟ್ಟ) ದೇವಾಲಯದ ಬಲಭಾಗದಲ್ಲಿಯ ಭಿತ್ತಿಯಲ್ಲಿಯ ಶಾಸನವು 'ಜೀನಾಲಯನ್' ಎಂಬ ವ್ಯಕ್ತಿಯ ಹೆಸರನ್ನು ಉಲ್ಲೇಖಿಸುತ್ತದೆ. ಬಹುಶಃ ಈ ದೇವಾಲಯವನ್ನು ಕಟ್ಟಿಸಿದ ಜೀನಾಲಯನ್‌ನ ಉಲ್ಲೇಖ ಇದಾಗಿರಬಹುದು ಎಂದು ಊಹಿಸಬಹುದಾಗಿದೆ. ಅದೇ ದೇವಾಲಯದ ಬಲಭಾಗದ ಪಟ್ಟಿಯಲ್ಲಿ 'ಶ್ರೀ' ಎಂಬ ಅಕ್ಷರ ಮಾತ್ರ ಕಾಣುತ್ತಿದ್ದು ಉಳಿದ ಅಕ್ಷರಗಳನ್ನು ಅಳಿಸಿರುತ್ತಾರೆ. ಅದೇ ದೇವಾಲಯದ ಬಲಭಾಗದ ಗೋಡೆಯಲ್ಲಿನ ದೇವಕೋಷ್ಠದ ಪ್ರತಿಮೆಯ ಮೇಲಿನ ಬರಹ 'ಶ್ರೀ ಜೀನಾಲಯನ್' ಎಂದಿದೆ. ಈ ದೇವಾಲಯದಲ್ಲಿ ದೊರೆತ ಶಾಸನ ಮಾಹಿತಿಗಳಂತೆ ಹಾಗೂ ದೇವಾಲಯದ ಲಕ್ಷಣಗಳಿಂದ ಇದು ರಾಷ್ಟ್ರಕೂಟರ ಕಾಲದೆಂದು ದೃಢಪಡುತ್ತದೆ. ಈ ದೇವಾಲಯವು ಈಗ ಕೇಂದ್ರ ಪುರಾತತ್ವ ಇಲಾಖೆಯ ನಿರ್ವಹಣೆಯಲ್ಲಿದೆ.

ಈ ದೇವಾಲಯವು ಏಕಕೂಟ ದೇವಾಲಯವಾಗಿದೆ. ಇದು ಸುಮಾರು ಮೂರು ಅಡಿ ಎತ್ತರವಾಗಿರುವ ಸಾದಾ ಕೆತ್ತನೆಯ ಅಧಿಷ್ಠಾನವನ್ನು ವಿಶಾಲವಾದ ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ರಾಷ್ಟ್ರಕೂಟ ಶೈಲಿಯ ಆರು ಕಂಬಗಳಿದ್ದು ಇವುಗಳ ಮಧ್ಯ ಪೀಠದ ಮೇಲೆ ಪಾರ್ವತಿ ಶಿಲ್ಪವಿದೆ. ಇದು ಸುಮಾರು ನಾಲ್ಕುವರೆ ಅಡಿ ಎತ್ತರವಾಗಿದ್ದು ಸಮಭಂಗಿಯಲ್ಲಿದೆ. ಇದರ ಕೈಗಳಲ್ಲಿ ಶಿವ, ಗಣೇಶ ಮತ್ತು ಫಲಗಳಿವೆ. ಅಂತರಾಳದ ಪ್ರವೇಶದ್ವಾರಕ್ಕೆ ಸೂಕ್ಷ್ಮ ಕೆತ್ತನೆಯಿಂದ ಕೂಡಿದ ಪದ್ಮ, ಹೂವಿನ ಎಸಳುಗಳು, ಕೀರ್ತಿಮುಖಗಳಿವೆ.

ದ್ವಾರದ ಎರಡೂ ಭಾಗಗಳಲ್ಲಿರುವ ದ್ವಾರಪಾಲಕರ ವಿಗ್ರಹಗಳಲ್ಲಿ, ಬಲಭಾಗದ ವಿಗ್ರಹವು ಉದ್ಧವಾದ ಜಟೆ, ಮೀಸೆ, ಮೊಳಕಾಲದವರೆಗೆ ವಸ್ತ್ರ ಮತ್ತು ಪಾದರಕ್ಷೆಗಳನ್ನು ಧರಿಸಿ, ಉದ್ದನೆಯ ದಂಡವನ್ನು ಎರಡೂ ಕೈಗಳಲ್ಲಿ ಹಿಡಿದು ನಿಂತಿದ್ದಾನೆ. ಎಡಭಾಗದ ವಿಗ್ರಹ ತಲೆಯ ಮೇಲೆ ಟೋಪಿ, ಇಳಿಬಿದ್ದ ಕರ್ಣಾಭರಣ ಹಾಗೂ ಬಳೆಗಳು ತೆಳುವಾದ ವಸ್ತ್ರವನ್ನುಟ್ಟು ಕೈಗಳಲ್ಲಿ ದಂಡ ಹಿಡಿದಿರುವನು. ಅಂತರಾಳದ ಗೋಡೆಗೆ ಹೊಂದಿಕೊಂಡು ಎರಡು ದಪ್ಪವಾದ ಚೌಕಾಕಾರದ ಕಂಬಗಳಿವೆ.

ಗರ್ಭಗೃಹದ ಪ್ರವೇಶದ್ವಾರಕ್ಕೆ ವೃತ್ತಾಕಾರದ ಅರ್ಧಗಂಭಗಳು ಎರಡೂ ಭಾಗಗಳಲ್ಲಿ ಪದ್ಮಗಳನ್ನು ಹಿಡಿದ ದ್ವಾರಪಾಲಕ (ಕುಬ್ಜ) ವಿಗ್ರಹಗಳು, ಮೇಲ್ಭಾಗ ಅಂತಸ್ತಿನಿಂದ ಕೂಡಿದ ಗೋಪುರ, ಅದರ ಕೆಳ ಪಟ್ಟಿಕೆಯಲ್ಲಿ ಚಿಕ್ಕ ಚಿಕ್ಕ ಶಿಲ್ಪಗಳು, ಮಧ್ಯದಲ್ಲಿ ಚಿಕ್ಕ ಮೂರ್ತಿ ಹಾಗೂ

ಲಲಾಟ ಬಿಂಬದಲ್ಲಿ ಗರುಡ ಶಿಲ್ಪವಿದೆ. ವಿಶಾಲವಾದ ಗರ್ಭಗೃಹದಲ್ಲಿ ನಾಲ್ಕೂ ಕಂಬಗಳು ಅಂತರಾಳದ ಕಂಬಗಳಂತಿವೆ. ಮಧ್ಯದಲ್ಲಿ ಎತ್ತರವಾದ ಪೀಠ, ಅದರ ಮೇಲೆ ಪಾರ್ವತಿದೇವಿ ವಿಗ್ರಹವಿದೆ.

ಸಭಾಮಂಟಪದ ಪಾರ್ಶ್ವಗಳಲ್ಲಿರುವ ದೇವಕೋಷ್ಠಗಳಲ್ಲಿ ಕೇಶವ, ಸೂರ್ಯ, ಮಾಧವ, ಯಮಧರ್ಮ ಮತ್ತು ಶಾಸನ ಶಿಲ್ಪಗಳಿವೆ. ಕೇಶವನ ಶಿಲ್ಪವು ಕಿರೀಟ, ಮುಕುಟ, ಚಕ್ರಕುಂಡಲ, ಕೊರಳಹಾರ, ಬಳೆಗಳು, ಯಜ್ಞೋಪವೀತ, ದೋತ್ರಧರಿಸಿ ಪದ್ಮದ ಮೇಲೆ ಸಮಭಂಗಿಯಲ್ಲಿ ನಿಂತಿದೆ. ನಾಲ್ಕು ಕೈಗಳಿದ್ದು, ಹಿಂದಿನ ಬಲ, ಎಡಕೈಗಳಲ್ಲಿ ಶಂಖ, ಚಕ್ರ, ಮುಂದಿನ ಬಲ, ಎಡಕೈಗಳಲ್ಲಿ ಪದ್ಮಗುಚ್ಛ, ಗಧೆ ಇರುತ್ತವೆ. ಸುತ್ತಲಿನ ಫಲಕದ ಮೇಲೆ ಗರುಡ ಚಾಮರಧಾರೆಯರ ಶಿಲ್ಪಗಳಿವೆ. ಸೂರ್ಯನ ಶಿಲ್ಪವು ಕಿರೀಟ, ಮುಕುಟ, ಕರ್ಣಕುಂಡಲ, ಕೊರಳಹಾರ, ಬಳೆಗಳು, ರತ್ನಪಟ್ಟಿ, ಕಾಲುಗಡಗ, ದೊತ್ರಧರಿಸಿ, ಸಮಭಂಗಿಯಲ್ಲಿ ನಿಂತಿದೆ.

ಇದು ಎರಡು ಕೈಗಳನ್ನು ಹೊಂದಿದ್ದು, ಒಂದು ಕೈಯಲ್ಲಿ ಪದ್ಮ, ಇನ್ನೊಂದು ಕೈಯು ಅಭಯ ಮುದ್ರೆಯಲ್ಲಿದೆ. ಸುತ್ತಲಿನ ಫಲಕದ ಮೇಲೆ ಚಾಮರಧಾರೆಯರು ಮತ್ತು ಚಿಕ್ಕ ಚಿಕ್ಕ ಶಿಲ್ಪಗಳಿವೆ. ಮಾಧವನ ಶಿಲ್ಪವು ಕಿರೀಟ, ಮುಕುಟ, ಕರ್ಣಕುಂಡಲ, ಕೊರಳಹಾರ, ನಾಗಬಂಧ, ಬಳೆಗಳು, ಯಜ್ಞೋಪವೀತ, ರತ್ನಪಟ್ಟಿ, ಮತ್ತು ದೋತ್ರವನ್ನು ಧರಿಸಿ, ಸಮಭಂಗಿಯಲ್ಲಿ ನಿಂತಿದ್ದು. ನಾಲ್ಕು ಕೈಗಳಲ್ಲಿ ಹಿಂದಿನ ಬಲ, ಎಡ ಕೈಗಳಲ್ಲಿ ಚಕ್ರ, ಶಂಖ ಮುಂದಿನ ಬಲ, ಎಡ ಕೈಗಳು ಡೋಲ ಹಸ್ತ ಕಟ್ಯಾವಲಂಬಿತ ಮುದ್ರೆಯಲ್ಲಿವೆ. ಯಮಧರ್ಮನ ಶಿಲ್ಪವು ಕೋಣದ ಮೇಲೆ ಕುಳಿತಿದ್ದು, ಕಿರೀಟ, ಮುಕುಟ, ಕರ್ಣಾಭರಣ, ಕಂಠಾಭರಣ, ಯಜ್ಞೋಪವೀತ, ಬಳೆಗಳನ್ನು ಧರಿಸಿದ್ದು ಈ ಮೂರ್ತಿಯ ಕೈಗಳಲ್ಲಿ ದಂಡ ಪಾಶಗಳಿವೆ.

ಸಭಾಮಂಟಪದ ಪ್ರವೇಶದ್ವಾರಕ್ಕೆ ಹೊಂದಿಕೊಂಡು ಸೋಪಾನಗಳನ್ನು ರಚಿಸಲಾಗಿದೆ. ದೇವಾಲಯದ ಹೊರಗೋಡೆಯ ಅಧಿಷ್ಠಾನ ಭಾಗವು ಉಪಾನ, ಜಗತಿ, ವೃತ್ತ ಕುಮುದ ಮತ್ತು ಪಟ್ಟಿಕೆಗಳಿಂದ ಕೂಡಿದೆ. ಗೋಡೆಯಲ್ಲಿ ಎತ್ತರದ ಅರ್ಧಗಂಭಗಳು ಮತ್ತು ದೇವಕೋಷ್ಠಕಗಳಿವೆ. ಈ ಕಂಬಗಳು ಚೌಕಾಕಾರವಾಗಿದ್ದು, ಕಾಂಡದ ಮೇಲ್ಭಾಗದಲ್ಲಿ ಮೂರು ಮುಖದ ಮುಚ್ಚಳ, ಚಾಚುಪೀಠ ಅದರ ಮೇಲೆ ಬೋದಿಗೆ ಇದೆ. ದೇವಾಲಯದ ಮುಖಭಾಗವು ಒಳಗೊಂಡಂತೆ ಹೊರಗೊಡೆಯ ಸುತ್ತಲೂ ಎರಡೆರಡೂ ಅರ್ಧಗಂಭಗಳ ಮಧ್ಯದಲ್ಲಿರುವ ಕೋಷ್ಠಕಗಳಲ್ಲಿ ವಿವಿಧ ಭಂಗಿಯಲ್ಲಿ ಶಿವನ ಮೂರ್ತಿಗಳಿವೆ. ಈ ಕೋಷ್ಠಕಗಳ ಮೇಲ್ಭಾಗ ಮಕರ ತೋರಣಗಳಿಂದ

ಅಲಂಕರಿಸಲ್ಪಟ್ಟಿರುತ್ತದೆ. ಅಂತರಾಳದ ವಿಮಾನದ ಮೇಲಿನ ಭಾಗದ ಗೋಡೆಯ ಲಕ್ಷಣಗಳೇ ಇದ್ದು, ಮುಂದಿನ ಭಾಗದ ಗೂಡಿನಲ್ಲಿ, ಶಿವಪಾರ್ವತಿಯ ವಿಗ್ರಹಗಳು, ಮೇಲ್ಭಾಗ ಗಜಪುಷ್ಠಾಕಾರದ ಚಪ್ಪಡಿ ಇದೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯಲ್ಲಿರುವ ಅಂತಸ್ತಿನಿಂದ ಕೂಡಿದ ಶಿಖರ, ಅಮಲಕಗಳಿವೆ. ದೇವಾಲಯದ ಲಕ್ಷಣಗಳಿಂದ ಬಾದಾಮಿ ಚಾಲುಕ್ಯರ ಕಾಲದ ಉತ್ತರಾರ್ಧದಲ್ಲಿ ನಿರ್ಮಾಣವಾಗಿದೆ ಎಂದು ಗುರುತಿಸಬಹುದಾಗಿದೆ.

ಈ ದೇವಾಲಯವು ಎಲ್ಲಾ ಲಕ್ಷಣಗಳಿಂದ ಶೈವ ಸಂಪ್ರದಾಯಕ್ಕೆ ಸಂಬಂಧಿಸಿದೆ. ಆದರೆ ದೇವಾಲಯದ ಗೋಡೆಯ ಮೇಲೆ ಅಲ್ಲಲ್ಲಿ 'ಶ್ರೀ ಜಿನಾಲಯನ್' ಮತ್ತು 'ಜಿನಾಲಯನ್' ಎಂದು ಬರೆದಿರುವ ಆದಿ ಚಾಲುಕ್ಯರ ಕಾಲದ ಬರವಣಿಗೆಗಳಿವೆ. ಆದರೆ ದೇವಾಲಯದಲ್ಲಿ ದೊರೆತ ಶಾಸನದ ಮಾಹಿತಿಯಂತೆ ಇದು ರಾಷ್ಟ್ರಕೂಟರ ಕಾಲದೆಂದು ದೃಢಪಡುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಪಾರ್ವತಿದೇವಿ ದೇವಾಲಯವು ಈ ಪ್ರದೇಶದಲ್ಲಿ ಕಾಣಸಿಗುವ ಅತ್ಯಂತ ಪ್ರಾಚೀನವಾದ ದೇವಾಲಯವಾಗಿದೆ. ಇದನ್ನು ಪೂರ್ವದ ರಾಷ್ಟ್ರಕೂಟರ ಕಾಲದಲ್ಲಿ ನಿರ್ಮಿಸಿರಬೇಕು. ಇದು ಸುಮಾರು ೭ನೆಯ ಶತಮಾನದ ಮಧ್ಯವಿರಬೇಕು. ಇದರ ಸುಖನಾಶವು ವಿಶಾಲವಾಗಿದ್ದು, ವಿಜಯನಗರ ಅರಸರ ಕಾಲದಲ್ಲಿ ಗುಡಿಯ ದ್ವಾರ ಉಂಟಾದಂತೆ ಕಾಣುವುದು. ಸುಖನಾಶವು ಕಿರೀಟದಂತೆ ಸುತ್ತಾಗಿದೆ.

**ಗ್ರಾಮ : ಸಂಡೂರು** **ಶೈಲಿ : ಬಾದಾಮಿ ಚಾಲುಕ್ಯ**

**ಸ್ಥಳ : ಕುಮಾರಸ್ವಾಮಿ ಬೆಟ್ಟ.** **ಅಭಿಮುಖ : ಪೂರ್ವ**

**ಸ್ಮಾರಕ : ನಾಗನಾಥೇಶ್ವರ ದೇವಾಲಯ.** **ಸ್ಥಿತಿ : ಉತ್ತಮ**

**ಕಾಲ : ಕ್ರಿ.ಶ.ಸು.೧೦ನೆಯ ಶತಮಾನ.** **ಪಂಥ : ಶೈವ**

**ಸಂರಕ್ಷಣೆ : ಕೇಂದ್ರ ಪುರಾತತ್ವ ಇಲಾಖೆ**

ಈ ದೇವಾಲಯವು ಗರ್ಭಗೃಹ ಹಾಗೂ ಸಭಾಮಂಟಪವನ್ನು ಹೊಂದಿದೆ. ಸಮ ಚತುಷ್ಕೋನಾಕಾರದಲ್ಲಿರುವ ಗರ್ಭಗೃಹವು ಶಿವಲಿಂಗ, ವಿಷ್ಣು, ಗಣೇಶ ಹಾಗೂ ನಂದಿ ಶಿಲ್ಪಗಳನ್ನು ಒಳಗೊಂಡಿದೆ. ಸಭಾಮಂಟಪದ ಮುಂಭಾಗದಲ್ಲಿ ಇತ್ತೀಚೆಗೆ ಮುಖಮಂಟಪವನ್ನು ಜೋಡಿಸಲಾಗಿದೆ. ಈ ದೇವಾಲಯದ ಬಲಭಾಗದ ಸುಮಾರು ಎರಡು ಅಡಿ ಎತ್ತರವಾದ ಜಗತಿಯ ಮೇಲೆ ವಿಷ್ಣು ಶಿಲ್ಪವಿದೆ. ಅಲ್ಲಿ ಹತ್ತು ಶಿವಲಿಂಗಗಳಿದ್ದು, ಒಂದು ಶಿವಲಿಂಗದ ಪೀಠದಲ್ಲಿ ಶಾಸನವನ್ನು ಕೆತ್ತಲಾಗಿದೆ. ಕ್ರಿ.ಶ.೧೦೪೫ರ ಈ ಶಾಸನದಲ್ಲಿ ಓರ್ವನ

ಹಂಪಾಚಾರಿಯ ಮೊಮ್ಮಗ ಚನಯಾಚಾರಿಯ ಮಗ ಧರ್ಮಾಂಬುಧಿಯು ನವಿಲನ್ನು ಪ್ರತಿಷ್ಠೆ ಮಾಡಿದ ಉಲ್ಲೇಖವಿರುವುದು.

ಈ ದೇವಾಲಯವು ನಿರಾಂದಾರ ಪ್ರದಕ್ಷಿಣಾ ಪಥವನ್ನೊಳಗೊಂಡಿದ್ದು, ಬಾಗಿಲ ದ್ವಾರದ ಮೇಲ್ಭಾಗವು ಪುಷ್ಪಗಳಿಂದ ಅಲಂಕೃತವಾಗಿದೆ. ದ್ವಾರದಲ್ಲಿ ದ್ವಾರಪಾಲಕರ ವಿಗ್ರಹಗಳಿದ್ದು ಅವು ಗಧೆಯನ್ನು ಹಿಡಿದು ನಿಂತುಕೊಂಡಿವೆ. ಇವು ಕೈಗಡಗ, ಕಾಲುಗಡಗ, ಕೊರಳಹಾರ, ಕಿರೀಟ, ತೋಳಬಂಧಿ, ಸೊಂಟಪಟ್ಟಿ ಒಳಗೊಂಡಿವೆ. ಹೊರಗೆ ನಾಗಶಿಲ್ಪಗಳು, ವಿನಾಯಕನ ಮೂರ್ತಿಗಳಿವೆ. ಇದು ಅಧಿಷ್ಠಾನ, ಭಿತ್ತಿ, ಶಿಖರ, ಸ್ತೂಪಿಗಳನ್ನು ಒಳಗೊಂಡಿದ್ದು, ಮುಂಭಾಗದ ಶಿಖರದಲ್ಲಿ ನಂದಿ ಶಿಲ್ಪಗಳಿದ್ದು ನಾಸಿಕದಲ್ಲಿ ವಿನಾಯಕನ ಮೂರ್ತಿ, ಹಿಂಭಾಗದ ನಾಸಿಕದಲ್ಲಿ ವಿಷ್ಣುವಿನ ವಿಗ್ರಹ, ಬಲಭಾಗದ ನಾಸಿಕದಲ್ಲಿ ಮುನಿಯ ಶಿಲ್ಪವಿದೆ.

**ಗ್ರಾಮ : ಸಂಡೂರು** **ಶೈಲಿ : ಬಾದಾಮಿ ಚಾಲುಕ್ಯ**

**ಸ್ಥಳ : ಕುಮಾರಸ್ವಾಮಿ ಬೆಟ್ಟ.** **ಅಭಿಮುಖ : ಪಶ್ಚಿಮ**

**ಸ್ಮಾರಕ : ಪಾತಾಳೇಶ್ವರ ದೇವಾಲಯ.** **ಸ್ಥಿತಿ : ಉತ್ತಮ**

**ಕಾಲ : ಕ್ರಿ.ಶ.ಸು.೧೦ನೆಯ ಶತಮಾನ** **ಪಂಥ : ಶೈವ**

**ಸಂರಕ್ಷಣೆ : ಕೇಂದ್ರ ಪುರಾತತ್ವ ಇಲಾಖೆ**

ಈ ದೇವಾಲಯ ಕೇವಲ ಗರ್ಭಗೃಹವನ್ನು ಹೊಂದಿದ್ದು, ಭೂಮಟ್ಟಕ್ಕಿಂತ ತುಂಬಾ ಕೆಳಗಿದ್ದು ಬಾವಿಗೆ ಹೊಂದಿಕೊಂಡು ಇದೆ. ಇದರಲ್ಲಿ ಶಿವಲಿಂಗ ಹಾಗೂ ನಂದಿ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಇದರ ಮೇಲೆ ದ್ರಾವಿಡ ಶೈಲಿಯ ಕೂಟ ಶಿಖರವಿದೆ.

**ಗ್ರಾಮ : ಸಂಡೂರು** **ಶೈಲಿ : ಬಾದಾಮಿ ಚಾಲುಕ್ಯ**

**ಸ್ಥಳ : ಕುಮಾರಸ್ವಾಮಿ ಬೆಟ್ಟ.** **ಅಭಿಮುಖ : ಪೂರ್ವ**

**ಸ್ಮಾರಕ : ಹರಿಶಂಕರ ದೇವಾಲಯ.** **ಸ್ಥಿತಿ : ಉತ್ತಮ**

**ಕಾಲ : ಕ್ರಿ.ಶ.ಸು.೧೧ನೆಯ ಶತಮಾನ** **ಪಂಥ : ಶೈವ**

ಸಂಡೂರಿನಿಂದ ೧೦ಕಿ.ಮೀ ದೂರದಲ್ಲಿದೆ. ಹರಿಶಂಕರ ದೇವಾಲಯವು ಗರ್ಭಗೃಹ, ತೆರೆದ ಸಭಾಮಂಟಪಗಳನ್ನು ಹೊಂದಿದ್ದು, ಗರ್ಭಗೃಹದ ಪ್ರವೇಶದ್ವಾರವು ಸರಳ ಕೆತ್ತನೆಯಿಂದ ಕೂಡಿರುವುದು. ಗರ್ಭಗೃಹದಲ್ಲಿ ಶಿವಲಿಂಗ, ತೆರೆದ ಸಭಾಮಂಟಪದಲ್ಲಿ ನಂದಿ ಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ. ಈ ದೇವಾಲಯ ಅಧಿಷ್ಠಾನದ ಮೇಲೆ ನಿರ್ಮಿಸಲಾಗಿದ್ದು, ಭಿತ್ತಿ, ಪ್ರಸ್ತಾರ,

ಶಿಖರ, ಸ್ತೂಪಿಯನ್ನು ಒಳಗೊಂಡಿದ್ದು, ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಕೂಟ ಶಿಖರವಿದೆ. ದೇವಾಲಯದ ಹೊರ ಭಿತ್ತಿಯಲ್ಲಿ ಎತ್ತರವಾದ ಅರ್ಧಗಂಭಗಳು ಹಾಗೂ ದೇವಕೋಷ್ಠಕಗಳಿವೆ. ಅರ್ಧಗಂಭಗಳ ವೈಶಿಷ್ಟ್ಯವೆಂದರೆ ಇವುಗಳೆಲ್ಲಾ ಚೌಕಾಕಾರವಾಗಿದ್ದು, ಕಾಂಡದ ಮೇಲ್ಭಾಗದಲ್ಲಿ ಮೂರು ಮುಖದ ಮುಚ್ಚಳ, ಚಾಚುಪೀಠ ಅದರ ಮೇಲೆ ಬೋದಿಗೆ ಇರುವುದು. ಈ ದೇವಾಲಯದ ಪ್ರವೇಶದ್ವಾರವು ಲಲಾಟ ಬಿಂಬವನ್ನು ಹೊಂದಿದ್ದು ನಾಸಿಕದಲ್ಲಿ ಶೈವ ವಿಗ್ರಹಗಳಿವೆ. ಅಕ್ಕ ಪಕ್ಕದಲ್ಲಿ ನಂದಿ ಶಿಲ್ಪಗಳಿವೆ.

ಇದು ಪ್ರದಕ್ಷಿಣ ಪಥವನ್ನು ಒಳಗೊಂಡಿದೆ. ಈ ದೇವಾಲಯದ ಹೊರಭಾಗದಲ್ಲಿರುವ ನಂದಿಯ ಬಾಯಿಯಿಂದ ಸತತವಾಗಿ ನೀರು ಸುರಿಯುತ್ತಿರುತ್ತದೆ. ಈ ನೀರು ಬೆಟ್ಟದ ಮೇಲ್ಭಾಗದಿಂದ ಜಲಪಾತವಾಗುತ್ತಿದ್ದು, ದಟ್ಟವಾದ ಮರಗಿಡಗಳ ತೊಪ್ಪಲಿನಲ್ಲಿ ಈ ದೇವಾಲಯವು ಮುಚ್ಚಿಕೊಂಡಿರುವಂತೆ ಭಾಸವಾಗುತ್ತದೆ. ಇದನ್ನು ಮರಳು ಮಿಶ್ರಿತ ಕೆಂಪು ಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯವು ಕುಮಾರಸ್ವಾಮಿ ದೇವಸ್ಥಾನಕ್ಕೆ ಹೋಗುವ ಮಾರ್ಗದಲ್ಲಿ ಸು.೪-೫ಕಿ.ಮೀ ಮುಂಚೆಯೇ ಬಲಪಕ್ಕದಲ್ಲಿ ಕಾಣಸಿಗುತ್ತದೆ.

| | | | |
|---|---|---|---|
| **ಗ್ರಾಮ** | **: ಸುಬ್ಬರಾಯನಹಳ್ಳಿ** | **ಶೈಲಿ** | **: ಬಾದಾಮಿ ಚಾಲುಕ್ಯ** |
| **ಸ್ಥಳ** | **: ನವಿಲುಸ್ವಾಮಿಬೆಟ್ಟ.** | **ಸ್ಥಿತಿ** | **: ಉತ್ತಮ** |
| **ಸ್ಮಾರಕ** | **: ನವಿಲುಸ್ವಾಮಿ ದೇವಾಲಯ.** | **ಅಭಿಮುಖ** | **: ಪೂರ್ವ** |
| **ಕಾಲ** | **: ಕ್ರಿ.ಶ.೧೫ನೆಯ ಶತಮಾನ.** | **ಪಂಥ** | **: ಶೈವ** |

ಈ ದೇವಾಲಯವು ಏಕಕೂಟ ದೇವಾಲಯವಾಗಿದೆ. ಇದು ಸಂಡೂರಿನ ಕುಮಾರಸ್ವಾಮಿ ದೇವಾಲಯದ ಪಶ್ಚಿಮಕ್ಕೆ ಸುಮಾರು ೩.ಕಿ.ಮೀ ಅಂತರದಲ್ಲಿ ಇಂದಿಗೂ ಇರುವುದು. ಈ ದೇವಾಲಯವು ಅಧಿಷ್ಠಾನದ ಮೇಲೆ ನಿರ್ಮಿಸಲಾಗಿದ್ದು ಗರ್ಭಗೃಹ ಮತ್ತು ಸಭಾಮಂಟಪ ಹಾಗೂ ಪ್ರಾಕಾರವನ್ನು ಒಳಗೊಂಡಿದೆ. ಸಭಾಮಂಟಪದಲ್ಲಿ ೩೬ ಕಂಬಗಳಿದ್ದು ಮೂರು ದ್ವಾರಗಳಿಂದ ಕೂಡಿರುವುದು. ಇಲ್ಲಿಯ ಕಂಬಗಳು ಚೌಕಾಕಾರವಾಗಿದ್ದು ಸಾದಾ ಕೆತ್ತನೆಯನ್ನು ಒಳಗೊಂಡಿದೆ.

ಈ ದೇವಾಲಯದ ತಲವಿನ್ಯಾಸವು ಚೌಕಾಕಾರವಾಗಿದ್ದು, ಗರ್ಭಗೃಹದ ನೇರಕ್ಕೆ ವೃತ್ತಾಕಾರದ ಚಿಕ್ಕ ಗೋಪುರವಿದೆ. ಪ್ರಾಕಾರದಲ್ಲಿ ಗೋಡೆಗೆ ಒರಗಿಸಿ ಎರಡು ಶಿಲಾಶಾಸನಗಳನ್ನು ನಿಲ್ಲಿಸಲಾಗಿದೆ. ಹಾಗೂ ದೇವಾಲಯದ ಎದುರುಗಡೆ ಸುಮಾರು ೨೦ ಅಡಿ ಎತ್ತರದ ದಪ್ಪನೆಯ

ಒಂದು ಕಲ್ಲಿನ ಮಾನಸ್ತಂಭವನ್ನು ನಿಲ್ಲಿಸಲಾಗಿದೆ. ಸ್ತಂಭದ ತುದಿಯ ಮೇಲೆ ಕಲ್ಲಿನಲ್ಲಿ ಸುಂದರವಾಗಿ ಕೆತ್ತಲಾದ ನವಿಲಿನ ಒಂದು ವಿಗ್ರಹವನ್ನು ಸ್ಥಾಪಿಸಲಾಗಿದೆ. ಅದರ ಕೆಳಗೆ ಕೃಷ್ಣನ ವಿಗ್ರಹವಿದೆ. ಹಾಗೂ ದೇವಾಲಯದ ಮುಂದೆ ವಿಜಯನಗರದ ಅರಸರು ಕಟ್ಟಿಸಿದ ಒಂದು ಪುಷ್ಕರಣಿ ಇದೆ. ಮೊದಲು ಗರ್ಭಗುಡಿಯ ಒಳಗೆ ಸುಮಾರು ನಾಲ್ಕೈದು ಅಡಿ ಎತ್ತರದ ಸುಂದರವಾದ ಕಾರ್ತಿಕಋಷಿಯ ಪ್ರತಿಮೆಯಿತ್ತೆಂದು ಅದು ಭಿನ್ನ (ಕಳವು) ಗೊಂಡ ಮೇಲೆ ಹೊಸ ಮೂರ್ತಿಯನ್ನು ಅಲ್ಲಿ ಪ್ರತಿಷ್ಠಾಪಿಸಿದ ಬಗ್ಗೆ ತಿಳಿದುಬರುತ್ತದೆ. ಈ ನವಿಲುಸ್ವಾಮಿಯು ತನ್ನ ವಾಹನನಾದ ನವಿಲಿನ ಮೇಲೆ ದಂಡಾಯುಧ ಹಿಡಿದು ಕುಳಿತಿದ್ದಾನೆ. ದೇವಾಲಯದ ಪ್ರವೇಶದ್ವಾರವು ಸಾದಾ ಕೆತ್ತನೆಯಿಂದ ಕೂಡಿದ್ದು ಕೆಳಭಾಗದಲ್ಲಿ ಮದನಿಕೆಯರ ವಿಗ್ರಹಗಳಿವೆ.

ಈ ದೇವಾಲಯದ ಬಳಿ ಇರುವ ಒಂದು ಶಾಸನದಲ್ಲಿ ಬುಕ್ಕರಾಯನು ಮಂಟಪವನ್ನು ಮತ್ತು ಕೊಂಡ(ಕೊಳ)ವನ್ನು ಮಾಡಿಸಿದ ಉಲ್ಲೇಖವಿದೆ. ಅದೇ ದೇವಾಲಯದ ಇನ್ನೊಂದು ಶಿಲಾಶಾಸನದಲ್ಲಿ ವಿಜಯನಗರದ ವೀರ ಭೂಪತಿರಾಯ ಅರಸನ ಸಾಮಂತನು ಸ್ವಾಮಿದೇವರ ದೇವಸ್ಥಾನದ ಹತ್ತಿರ ಎರಡು ಗುಡಿಗಳ ಮಧ್ಯದ ಕಲ್ಲು ಹಾಸಿನ ಕಾಲುದಾರಿ ಕಟ್ಟಿಸಿದ್ದನ್ನು ತಿಳಿಸುತ್ತದೆ. ಹಾಗೂ ಪ್ರಧಾನಿ ಶಂಕರಸ ವಿಠಪನ ಉಲ್ಲೇಖವಿದೆ.

**ಗ್ರಾಮ : ಉಬ್ಬಲಗಂಡಿ** **ಶೈಲಿ : ವಿಜಯನಗರೋತ್ತರ**

**ಸ್ಥಳ : ಗ್ರಾಮದ ಒಳಗೆ** **ಅಭಿಮುಖ : ಪೂರ್ವ**

**ಸ್ಮಾರಕ : ವೀರಭದ್ರ ದೇವಾಲಯ.** **ಸ್ಥಿತಿ : ಉತ್ತಮ**

**ಕಾಲ : ೧೮ನೆಯ ಶತಮಾನ.** **ಪಂಥ : ಶೈವ**

ಈ ದೇವಾಲಯವು ಏಕಕೂಟ ದೇವಾಲಯವಾಗಿದೆ. ಇದರ ಗರ್ಭಗೃಹವು ಗವಿಯ ಒಳಗೆ ಇದ್ದು ಅದಕ್ಕೆ ಅಂಟಿಕೊಂಡು ಸುಖನಾಸಿ, ಸಭಾಮಂಟಪವಿದೆ. ಸಭಾಮಂಟಪದಲ್ಲಿ ಆರು ಕಂಬಗಳಿದ್ದು, ಅವು ಸರಳ ಕೆತ್ತನೆಯಿಂದ ಕೂಡಿವೆ. ಈ ದೇವಾಲಯ ಪ್ರಾಕಾರವನ್ನು ಒಳಗೊಂಡಿದ್ದು, ಐದು ಅಡಿ ಎತ್ತರದ ಜಗಲಿಯ ಮೇಲಿರುವ ಇದು ಸೋಪಾನವನ್ನು ಒಳಗೊಂಡಿದ್ದು, ಸಾದಾ ಮೇಲ್ಛಾವಣಿಯನ್ನು ಹೊಂದಿದೆ.

ಈ ದೇವಾಲಯವು ಸುಮಾರು ಇನ್ನೂರೈವತ್ತು ವರ್ಷಗಳಷ್ಟು ಪ್ರಾಚೀನದ್ದಾಗಿದೆ. ಕಣಶಿಲೆಯಲ್ಲಿ ಈ ದೇವಾಲಯವನ್ನು ನಿರ್ಮಿಸಲಾಗಿತ್ತು, ಆದರೆ ಈಗ ಈ ದೇವಾಲಯವನ್ನು ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಿಸಲಾಗುತ್ತಿದೆ. ದೇವಾಲಯದ ಎದುರುಗಡೆ ಗರುಡ

ಗಂಭವಿದೆ. ಈ ದೇವಾಲಯದ ಹಿಂದೆ ಚಿಕ್ಕ ದೇವಸ್ಥಾನವನ್ನು ಕಟ್ಟುತ್ತಿದ್ದಾರೆ. ಈ ದೇವಾಲಯದ ಹಿಂದೆ ಗಂಡಿಯಿರುವುದರಿಂದ ಇದಕ್ಕೆ ಗಂಡಿ ವೀರಭದ್ರನ ದೇವಾಲಯ ಎಂದು, ಈ ಗ್ರಾಮಕ್ಕೆ 'ಉಬ್ಬಲ ಗಂಡಿ' ಎಂದು ಕರೆಯುತ್ತಾರೆ.

**ಗ್ರಾಮ : ಸಂಡೂರು** **ಶೈಲಿ : ಬಾದಾಮಿ ಚಾಲುಕ್ಯ**

**ಸ್ಥಳ : ಕುಮಾರಸ್ವಾಮಿಬೆಟ್ಟ.** **ಅಭಿಮುಖ : ಉತ್ತರ**

**ಸ್ಮಾರಕ : ರಂಗನಾಥ ದೇವಾಲಯ.** **ಸ್ಥಿತಿ : ಉತ್ತಮ**

**ಕಾಲ : ಕ್ರಿ.ಶ.ಸು೧೦ನೆಯ ಶತಮಾನ** **ಪಂಥ : ವೈಷ್ಣವ**

**ಸಂರಕ್ಷಣೆ : ಕೇಂದ್ರ ಪುರಾತತ್ವ ಇಲಾಖೆ**

ಈ ದೇವಾಲಯವು ವಿಶಾಲವಾದ ಬಾವಿಯೊಂದಕ್ಕೆ ಹೊಂದಿಕೊಂಡಿದ್ದು, ಗರ್ಭಗೃಹವನ್ನು ಮಾತ್ರ ಹೊಂದಿದೆ. ಇದರಲ್ಲಿ ಕಪ್ಪು ಮಿಶ್ರಿತ ನೀಲಿ ಛಾಯೆಯ ಕಲ್ಲಿನಲ್ಲಿ ಅನಂತಶಯನ ವಿಗ್ರಹವನ್ನು ಕಂಡರಿಸಲಾಗಿದೆ.

**ಗ್ರಾಮ : ಸುಶೀಲನಗರ** **ಶೈಲಿ : ವಿಜಯನಗರ**

**ಸ್ಥಳ : ರಾಮಘಡ.** **ಅಭಿಮುಖ : ಪೂರ್ವ**

**ಸ್ಮಾರಕ : ರಾಮದೇವಾಲಯ.** **ಸ್ಥಿತಿ : ಮಧ್ಯಮ**

**ಕಾಲ : ಕ್ರಿ.ಶ.೧೫೨೭** **ಪಂಥ : ವೈಷ್ಣವ**

ರಾಮಘಡ ಶಾಸನದಲ್ಲಿ ಕ್ರಿ.ಶ.೧೫೨೭ರಲ್ಲಿ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಗೋಪಾಯಿ ಮತ್ತು ಆಕೆಯ ತಮ್ಮ ರಾಮಣನು ರಾಮನಾಥನ ಗುಡಿಯನ್ನು ನಿರ್ಮಿಸಿದಂತೆ ಉಲ್ಲೇಖಿಸಿದ್ದು, ಆ ದೇವಾಲಯದ ಜೀರ್ಣೋದ್ಧಾರಕ್ಕೆ, ಗಂಟೆ, ಜೇಗಟೆ, ಹರಿವಾಣ, ಚೆಂಬು ಮೇಲೆ ಹೊನ್ನನ್ನು ಪೂಜಾ ಸಾಮಗ್ರಿಗಳನ್ನು ನೀಡಿದ ಬಗ್ಗೆ ಉಲ್ಲೇಖಿಸುತ್ತದೆ.

ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು ಅಧಿಷ್ಠಾನದ ಮೇಲೆ ನಿರ್ಮಿಸಲಾಗಿದೆ. ಈ ದೇವಾಲಯವು ಗರ್ಭಗೃಹ ಮತ್ತು ತೆರೆದ ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಶಿವಲಿಂಗ ಮೂರ್ತಿ ಇದ್ದು ಈ ಮೂರ್ತಿಯ ಹಿಂದೆ ರಾಮನ ಶಿಲ್ಪವಿದೆ. ಗರ್ಭಗೃಹದ ಬಾಗಿಲ ದ್ವಾರವು ಸಾದಾ ಕೆತ್ತನೆಯಿಂದ ಕೂಡಿದ್ದು ಅದರ ಮೇಲೆ ಐದು ನಾಸಿಕಗಳಿವೆ. ಅದರ ಮಧ್ಯದ ನಾಸಿಕದಲ್ಲಿ ವಿನಾಯಕನ ಶಿಲ್ಪವಿದೆ. ನಾಲ್ಕು ನಾಸಿಕಗಳು ಖಾಲಿ ಇವೆ. ಅವು ಇತ್ತೀಚೆಗೆ ಮಾಡಿಸಿದಂತೆ ಕಾಣಿಸುತ್ತವೆ. ಸಭಾಮಂಟಪದಲ್ಲಿ ನಾಲ್ಕು ಚೌಕಾಕಾರದ

ಸಾದಾ ಕೆತ್ತನೆಯ ಕಂಬಗಳಿವೆ. ದೇವಾಲಯದ ಭಿತ್ತಿಯು ಸಾದಾ ಕೆತ್ತನೆಯಿಂದ ಕೂಡಿದೆ. ದೇವಾಲಯದ ಎದುರುಗಡೆ ಗರುಡ ಗಂಭವಿದೆ. ಹಾಗೂ ರಾಮನ ಪಾದಗಳಿವೆ. ಈ ದೇವಾಲಯದ ಪ್ರವೇಶದ್ವಾರವು ಲಲಾಟ ಬಿಂಬವನ್ನು ಹೊಂದಿದ್ದು ಮೂರು ನಾಸಿಕಗಳನ್ನು ಒಳಗೊಂಡಿದೆ. ಈ ನಾಸಿಕಗಳಲ್ಲಿ ಯಾವುದೇ ಮೂರ್ತಿಗಳಿಲ್ಲ.

ಈ ದೇವಾಲಯವು ಅಧಿಷ್ಠಾನ, ಭಿತ್ತಿ, ಪ್ರಸ್ತಾರ, ಗ್ರೀವ, ಶಿಖರ, ಸ್ತೂಪಿಗಳನ್ನು ಒಳಗೊಂಡಿದೆ. ಈ ಶಿಖರವು ಅರಳಿದ ಪದ್ಮಗಳಿಂದ ಕೂಡಿದ್ದು ಗೋಪುರದಲ್ಲಿ ಸಿಂಹ, ನಂದಿ, ನರಸಿಂಹ, ವಿಷ್ಣು ಮುಂತಾದ ವೈಷ್ಣವ ಮೂರ್ತಿ ಶಿಲ್ಪಗಳಿವೆ. ಹಾಗೂ ಸಭಾಮಂಟಪದ ಗೋಡೆಗೆ ಒರಗಿಸಿ ಒಂದು ವೀರಗಲ್ಲನ್ನು ಇಡಲಾಗಿದೆ. ಆ ವೀರಗಲ್ಲು ಬಿಲ್ಲು, ಬಾಣವನ್ನು ಹಿಡಿದುಕೊಂಡಿದೆ. ದೇವಾಲಯದ ಹೊರ ಗೋಡೆಯ ಬಲಗಡೆಗೆ ಶಾಸನವನ್ನು ನಿಲ್ಲಿಸಲಾಗಿದೆ.

ದೇವಾಲಯದ ಹೊರ ಆವರಣದ ಬಲಭಾಗದಲ್ಲಿ ಅನೇಕ ಶಂಖ, ಚಕ್ರಧಾರಿಯಾದ ವಿಷ್ಣುವಿನ ಮೂರ್ತಿಗಳು, ನಾಗಶಿಲ್ಪಗಳು, ಪಾದಗಳು, ವಿನಾಯಕಶಿಲ್ಪ ಹಾಗೂ ವೀರಗಲ್ಲುಗಳಿವೆ. ಈ ವೀರಗಲ್ಲುಗಳು ತ್ರುಟಿತವಾಗಿವೆ. ಈ ದೇವಾಲಯದ ಹಿಂಭಾಗದಲ್ಲಿ ಒಂದು ಹೊಂಡವಿದೆ. ಅದಕ್ಕೆ ರಾಮನ ಹೊಂಡವೆಂದು ಕರೆಯುತ್ತಾರೆ. ಈಗ ಆ ಹೊಂಡದಲ್ಲಿ ನೀರು ಬತ್ತಿದೆ.

**ಗ್ರಾಮ : ಹಳೆ ದರೋಜಿ** **ಅಭಿಮುಖ : ದಕ್ಷಿಣ**

**ಸ್ಥಳ : ಊರ ಹೊರಗೆ** **ಶೈಲಿ : ವಿಜಯನಗರ**

**ಸ್ಮಾರಕ : ಆಂಜನೇಯ.** **ಸ್ಥಿತಿ : ಮಧ್ಯಮ**

**ಕಾಲ : ಕ್ರಿ.ಶ.ಸು೧೬ನೆಯ ಶತಮಾನ.** **ಪಂಥ : ವೈಷ್ಣವ**

ಈ ದೇವಾಲಯವು ಗರ್ಭಗೃಹ, ಅಂತರಾಳವನ್ನು ಹೊಂದಿದೆ. ಜಗತಿಯ ಮೇಲೆ ನಿರ್ಮಿಸಲ್ಪಟ್ಟ ಇದರ ಗರ್ಭಗೃಹದಲ್ಲಿ ಇತ್ತೀಚೆಗೆ ಕಂಡರಿಸಲ್ಪಟ್ಟ ಆಂಜನೇಯನ ಶಿಲ್ಪವಿದೆ. ಅಂತರಾಳದಲ್ಲಿ ಅಲಂಕಾರಿಕವಾದ ನಾಲ್ಕು ಕಂಬಗಳಿದ್ದು ಅದಕ್ಕೆ ಹೊಂದಿಕೊಂಡು ಸೋಪಾನವಿರುವುದು. ಜಗತಿಯ ಮೇಲೆ ನಿರ್ಮಿಸಲ್ಪಟ್ಟ ಇದು ಸಾದಾ ಮೇಲ್ಛಾವಣಿಯನ್ನು ಹೊಂದಿದೆ. ದೇವಾಲಯದ ಎದುರುಗಡೆ ಗರುಡಗಂಭವಿದೆ.

**ಗ್ರಾಮ : ಬೊಮ್ಮಗಟ್ಟ.** **ಶೈಲಿ : ವಿಜಯನಗರ**

**ಸ್ಥಳ : ಗ್ರಾಮದ ಪೂರ್ವಕ್ಕೆ** **ಅಭಿಮುಖ: ದಕ್ಷಿಣ**

ಸ್ಮಾರಕ : ಹುಲಿಕುಂಟೇಶ್ವರ ದೇವಾಲಯ. ಸ್ಥಿತಿ : ಉತ್ತಮ

ಕಾಲ : ಕ್ರಿ.ಶ.ಸು೧೬ನೆಯ ಶತಮಾನ ಪಂಥ : ವೈಷ್ಣವ

ಸಂಡೂರಿನಿಂದ ೪೦ಕಿ.ಮೀ ದೂರದಲ್ಲಿದೆ. ಬೊಮ್ಮಗಟ್ಟದ ಆಂಜನೇಯ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ, ಪ್ರಾಕಾರ, ದ್ವಾರಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಆಂಜನೇಯನ ಶಿಲ್ಪವಿದೆ. ಈ ಶಿಲ್ಪವು ಕರ್ಣಾಭರಣ, ಕೊರಳಾಭರಣ, ತೋಳಬಂಧಿ, ಕೈಗಡಗ, ಕಾಲುಗಡಗ, ಪಾದಗೆಜ್ಜೆ, ಯಜ್ಞೋಪವೀತ, ಸೊಂಟಪಟ್ಟಿ, ದೋತ್ರ ಧರಿಸಿದೆ. ಬಲಗೈ ಅಭಯ ಮುದ್ರೆಯಲ್ಲಿದ್ದು, ಎಡಗೈಯಲ್ಲಿ ಗಧೆಯನ್ನು ಹಿಡಿದಿದೆ. ಗರ್ಭಗೃಹದ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ದ್ವಾರಬಾಗಿಲ ಇಕ್ಕೆಲಗಳಲ್ಲಿ ದ್ವಾರಪಾಲಕರ ಶಿಲ್ಪಗಳು ಅಲಂಕಾರದಿಂದ ಕೂಡಿವೆ. ಅಲಂಕಾರ ರಹಿತ ಭುವನೇಶ್ವರಿ ಇದೆ.

ಅಂತರಾಳದಲ್ಲಿ ಎರಡು ಕಂಬಗಳಿದ್ದು ಅವುಗಳನ್ನು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಈ ಕಂಬಗಳ ಶೈಲಿಯನ್ನು ಗಮನಿಸಿದರೆ ಇವು ಹೊಯ್ಸಳ ಶೈಲಿಯಲ್ಲಿ ಇರುವಂತೆ ಕಾಣುತ್ತವೆ. ಮೊದಲ ಎಡಗಡೆಯ ಕಂಬದ ಕೆಳಗೆ ಗರುಡನ ಶಿಲ್ಪವಿದೆ. ಈ ಕಂಬಗಳು ಪೀಠ, ಪಾದ, ದಂಡ, ದಂಡಾಗ್ರ, ಚತುರಾಶ್ರಪಟ್ಟಿ ಹೊಂದಿದ್ದು, ಹದಿನಾರು ಮಡಿಕೆಗಳಿಂದ ಕೂಡಿವೆ. ಬೋದಿಗೆಯನ್ನು ಹೊಂದಿದೆ. ಸಭಾಮಂಟಪದಲ್ಲಿಯೂ ಆರು ಕಂಬಗಳಿದ್ದು ಅವು ಅಂತರಾಳದ ಕಂಬಗಳಂತೆ ಇವೆ. ಈ ದೇವಾಲಯವು ಎರಡು ದ್ವಾರಗಳಿಂದ ಕೂಡಿದೆ.

ಆಂಜನೇಯನ ಗರ್ಭಗೃಹದ ಬಲಗಡೆಗೆ ಮತ್ತೊಂದು ಗರ್ಭಗೃಹವಿದ್ದು ಅದರಲ್ಲಿ ರಾಮ, ಸೀತಾ, ಲಕ್ಷ್ಮಣ, ಹನುಮಂತ, ಗರುಡನ ಶಿಲ್ಪಗಳಿವೆ. ಎಲ್ಲಾ ಶಿಲ್ಪಗಳು ಸ್ಥಾನಿಕ ಭಂಗಿಯಲ್ಲಿದ್ದು ಹಿತ್ತಾಳೆಯ ಪ್ರಭಾವಳಿಯನ್ನು ಹೊಂದಿವೆ. ಗರ್ಭಗೃಹದ ದ್ವಾರಬಾಗಿಲ ಮೇಲೂ ಹಿತ್ತಾಳೆಯ ಹೊದಿಕೆ ಇದೆ. ಅದರಲ್ಲಿಯೂ ರಾಮ, ಲಕ್ಷ್ಮಣ, ಸೀತ, ಹನುಮಾನರ ಶಿಲ್ಪಗಳಿವೆ. ಇದರ ಇಕ್ಕೆಲಗಳಲ್ಲಿ ವೈಷ್ಣವ ಶಿಲ್ಪಗಳಿವೆ. ಈ ದೇವಾಲಯದಲ್ಲಿ ಸಿಂಹವಕ್ತ್ರ ಪ್ರಣಾಳ ಸೋಪಾನವಿದೆ. ಈ ಸೋಪಾನದ ಅಕ್ಕಪಕ್ಕದಲ್ಲಿ ದೀಪಸ್ತಂಭಗಳಿವೆ.

ಈ ದೇವಾಲಯವು ಅಧಿಷ್ಠಾನ, ಭಿತ್ತಿ, ಪ್ರಸ್ತಾರ, ಶಿಖರ, ಸ್ತೂಪಿಯನ್ನು ಒಳಗೊಂಡಿದೆ. ಈ ದೇವಾಲಯದ ಸಭಾಮಂಟಪದ ಮುಂದಿನ ಶಿಖರವು ಐದು ಚಿಕ್ಕ ಚಿಕ್ಕ ಗೋಪುರಗಳನ್ನು ಒಳಗೊಂಡಿದ್ದು, ವಿಜಯನಗರದ ಶೈಲಿಯಲ್ಲಿದೆ. ಇದರಲ್ಲಿ ವಿಷ್ಣುವಿನ ದಶಾವತಾರಗಳಾದ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ವಿಷ್ಣು, ಕೃಷ್ಣ, ಬುದ್ಧ, ಕಲ್ಕಿಯ

ವಿಗ್ರಹಗಳಿದ್ದು ಕೆಳಭಾಗದಲ್ಲಿ ನವಿಲು, ಜಿಂಕೆ, ಹನುಮಂತ, ಹೂವು, ಮನುಷ್ಯರ ಶಿಲ್ಪಗಳಿವೆ. ಗರ್ಭಗೃಹದ ಗೋಪುರ ದ್ರಾವಿಡ ಶೈಲಿಯಲ್ಲಿದ್ದು, ಅದರಲ್ಲಿ ದೇವಕೋಷ್ಠಕಗಳಿದ್ದು, ವೈಷ್ಣವ ಮೂರ್ತಿ ಶಿಲ್ಪಗಳಿರುವವು. ದೇವಾಲಯದ ಭಿತ್ತಿಯಲ್ಲಿ ಮತ್ಸ್ಯ, ಉರಗಗಳ ಉಬ್ಬು ಶಿಲ್ಪಗಳಿವೆ. ಈ ದೇವಾಲಯದ ಎದುರುಗಡೆ ಗರುಡ ಗಂಭವಿದ್ದು ಅದರಲ್ಲಿ ಕೃಷ್ಣ, ಹನುಮಂತ, ಗರುಡ, ವಿನಾಯಕನ ಶಿಲ್ಪಗಳಿವೆ. ಅದೇ ರೀತಿ ರಾಮದೇವರ ಗರ್ಭಗೃಹದ ಶಿಖರದಲ್ಲಿಯೂ ಸಹ ವಿಷ್ಣು, ಕೃಷ್ಣ ಇತ್ಯಾದಿ ವೈಷ್ಣವ ಮೂರ್ತಿ ಶಿಲ್ಪಗಳಿವೆ. ಈ ಗರ್ಭಗೃಹದ ಎದುರುಗಡೆಗೂ ಒಂದು ಗರುಡ ಗಂಭವಿದ್ದು ಅದರಲ್ಲಿ ಶಂಖ, ಚಕ್ರ, ಹನುಮಂತ, ಗರುಡನ ಶಿಲ್ಪವಿದೆ.

ಈ ದೇವಾಲಯದ ಪ್ರವೇಶದ್ವಾರದ ದ್ವಾರಗೋಪುರವು ಶಾಲಾ ಕಟ್ಟಡ ಶೈಲಿಯಲ್ಲಿದೆ. ಈ ಗೋಪುರವು ಮೂರು ಹಂತವನ್ನು ಹೊಂದಿದ್ದು, ಈ ಗೋಪುರದಲ್ಲಿ ರಾಮ, ವಿಷ್ಣು, ಹನುಮಂತ, ಗರುಡ ಇತ್ಯಾದಿ ವೈಷ್ಣವ ಶಿಲ್ಪಗಳಿವೆ. ಈ ದೇವಾಲಯದ ಮೂರು ಗೋಪುರಗಳನ್ನು ಹಿಂದೆ ಇದ್ದಂತೆಯೇ ಈಗ ಅದೇ ಶೈಲಿಯಲ್ಲಿ ನವೀಕರಿಸಲಾಗಿರುವುದು. ಈ ದೇವಾಲಯದ ಅಂತರಾಳ, ಸಭಾಮಂಟಪದ ಕಂಬದ ಶೈಲಿಯನ್ನು ಗಮನಿಸಿದರೆ ಇವು ಹೊಯ್ಸಳರ ಶೈಲಿಯಲ್ಲಿರುವಂತೆ ಕಾಣುವವು. ಆದರೆ ದೇವಾಲಯವು ಹೊಂದಿರುವ ಗರ್ಭಗೃಹ, ಅಂತರಾಳ, ಸಭಾಮಂಟಪ, ಪ್ರಾಕಾರ, ದ್ವಾರಮಂಟಪ, ಗೋಪುರ ಇವುಗಳನ್ನು ಹಾಗೂ ದೇವಾಲಯವನ್ನು ನಿರ್ಮಿಸಲು ಬಳಸಿದ ಬೆಣಚು ಶಿಲೆಯನ್ನು ಗಮನಿಸಿದರೆ ಇದು ವಿಜಯನಗರ ಶೈಲಿಯಂತೆ ಕಾಣಸಿಗುವುದು. ದೇವಾಲಯವು ಸಂಡೂರಿನ ವಿಠ್ಠಲ ದೇವಾಲಯದ ಶೈಲಿಯಂತೆ ಇದೆ.

ಅಂದರೆ ಬಹುಶಃ ಈ ದೇವಾಲಯವು ವಿಜಯನಗರದ ಕಾಲದಿಂದ ಹಿಡಿದು ಪಾಳೆಗಾರರ ಕಾಲದವರೆಗೂ ಜೀರ್ಣೋದ್ಧಾರಗೊಳ್ಳುತ್ತ ಬಂದಿರುವುದನ್ನು ಕಾಣಬಹುದು. ಹಾಗೂ ಈ ದೇವಾಲಯದ ಹೊರ ಭಾಗದಲ್ಲಿ ಅಕ್ಕಪಕ್ಕದಲ್ಲಿ ಬಹಳಷ್ಟು ಮಂಟಪಗಳು ಕಂಡುಬರುತ್ತವೆ. ತುಂಡಾದ ಕಂಬಗಳ ಶಿಲ್ಪಗಳು ಬಿದ್ದಿವೆ. ದೇವಾಲಯದ ಎಡಗಡೆ ಪುಷ್ಕರಣಿ ಇದೆ. ದೇವಾಲಯದ ಮುಂದೆ ಮುದ್ದೇಲಪ ಎಂಬ ಈ ದೇವಾಲಯ ಕಟ್ಟಿಸಿದನೆಂದು ಹೇಳುವ ವ್ಯಕ್ತಿಯ ಶಿಲ್ಪ ಅದರ ಸುತ್ತ ಏಳು ಕೈಮುಗಿದುಕೊಂಡು ಕುಳಿತ ಮುನಿಗಳ ಶಿಲ್ಪಗಳಿವೆ. ಇದು ಗರ್ಭಗೃಹ, ಪ್ರಾಕಾರ ಹೊಂದಿದೆ. ಗರ್ಭಗೃಹದ ಇಕ್ಕೆಲಗಳಲ್ಲಿ ದ್ವಾರಪಾಲಕರ ವಿಗ್ರಹಗಳಿವೆ. ಈ ಗರ್ಭಗೃಹ, ಅಧಿಷ್ಠಾನ, ಭಿತ್ತಿ ಮೇಲ್ಛಾವಣಿಯನ್ನು ಹೊಂದಿದೆ.

ಈ ಆಂಜನೇಯನ ದೇವಾಲಯದಿಂದ ಬಲಭಾಗಕ್ಕೆ ಸ್ವಲ್ಪ ಅಂತರದಲ್ಲಿ ಮತ್ತೊಂದು ಹನುಮಂತನ ದೇವಾಲಯವಿದೆ. ಮೊದಲು ಇಲ್ಲಿ ಹನುಮಂತನನ್ನು ಪ್ರತಿಷ್ಠಾಪಿಸಲಾಗಿತ್ತು. ಹಾಗೂ ಇದನ್ನು ಪಾದಗಟ್ಟೆ ಎಂದು ಸಹ ಸ್ಥಳೀಯರು ಹೇಳುತ್ತಾರೆ. ಆನಂತರ ಈಗಿರುವ ಸ್ಥಳದಲ್ಲಿ ಈ ಆಂಜನೇಯನ ದೇವಾಲಯ ನಿರ್ಮಿಸಲಾಯಿತ್ತೆಂದು ತಿಳಿದುಬರುತ್ತದೆ.

ಈ ಆಂಜನೇಯನ ಗರ್ಭಗೃಹವು ಅಧಿಷ್ಠಾನ, ಭಿತ್ತಿ, ಮೇಲ್ಛಾವಣೆ ಹೊಂದಿದೆ. ಗರ್ಭಗೃಹದಲ್ಲಿ ಆಂಜನೇಯನ ಶಿಲ್ಪವಿದೆ. ಇದರ ಸ್ವಲ್ಪ ಅಂತರದಲ್ಲಿ ಮತ್ತೊಂದು ಗರ್ಭಗೃಹವಿದ್ದು, ಅದರಲ್ಲಿ ಹುತ್ತಯಿದೆ. ಅದರಲ್ಲಿ ಇಬ್ಬರು ಭರ್ಜಿ, ಖಡ್ಗ ಹಿಡಿದ ವೀರರ ಶಿಲ್ಪವಿರುವ ವೀರಗಲ್ಲು ಶಿಲ್ಪವಿದ್ದು, ಈ ವೀರರು ಮುಡಿ ಕಟ್ಟಿದ್ದಾರೆ. ಕರ್ಣಾಭರಣ, ಕೊರಳಾಭರಣ, ತೋಳಬಂಧಿ, ಕೈಗಡಗ, ಕಾಲುಗಡಗ, ಸೊಂಟಪಟ್ಟಿಯಲ್ಲಿಯ ಕಿರುಗತ್ತಿ ಇದ್ದು, ದೋತ್ರ ಧರಿಸಿವೆ.

**ಗ್ರಾಮ : ತುಂಬರಗುದ್ದಿ** | **ಶೈಲಿ : ವಿಜಯನಗರ**

**ಸ್ಥಳ : ಗ್ರಾಮದ ಈಶಾನ್ಯಕ್ಕೆ** | **ಅಭಿಮುಖ : ದಕ್ಷಿಣ**

**ಸ್ಮಾರಕ : ಆಂಜನೇಯ ದೇವಾಲಯ.** | **ಸ್ಥಿತಿ : ಮಧ್ಯಮ**

**ಕಾಲ : ಕ್ರಿ.ಶ.ಸು೧೭ನೆಯ ಶತಮಾನ.** | **ಪಂಥ : ವೈಷ್ಣವ**

ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಸುಮಾರು ಮೂರು ಅಡಿ ಎತ್ತರದ ಜಗತಿಯ ಮೇಲೆ ನಿರ್ಮಿಸಲ್ಪಟ್ಟಿದೆ. ಗರ್ಭಗೃಹ ತೆರೆದ ಸಭಾಮಂಟಪ ಹಾಗೂ ಪ್ರಾಕಾರವನ್ನು ಹೊಂದಿರುವ ಈ ದೇವಾಲಯವನ್ನು ಜೀರ್ಣೋದ್ಧಾರಗೊಳಿಸಲಾಗಿದೆ. ಗರ್ಭಗೃಹದಲ್ಲಿ ಆಂಜನೇಯನ ಉಬ್ಬು ಶಿಲ್ಪವಿದೆ. ಸಭಾಮಂಟಪದಲ್ಲಿ ಆರು ಸಾದಾ ಕೆತ್ತನೆಯ ಕಂಬಗಳಿವೆ. ದೇವಾಲಯದ ಮೇಲ್ಛಾವಣಿ ಸಾದಾ ಕೆತ್ತನೆಯಿಂದ ಕೂಡಿದ್ದು, ಮೇಲ್ಛಾವಣಿಯ ನಾಸಿಕದಲ್ಲಿ ವೈಷ್ಣವ ಶಿಲ್ಪಗಳಿವೆ. ಪ್ರಾಕಾರಕ್ಕೆ ಹೊಂದಿಕೊಂಡು ಶಾಸನ ಮತ್ತು ವೀರಗಲ್ಲುಗಳಿವೆ. ಈ ಶಾಸನದಲ್ಲಿ ದುರಬಿ ನರಸಪ್ಪನವರು ತುಂಬರಗುತ್ತಿಯ ಹನುಮಂತ ದೇವರ ದೀಪಾರಾಧನೆಗೆ ಮೂರು ಕಾಸನ್ನು ದಾನ ನೀಡಿದ ಉಲ್ಲೇಖವಿದೆ.

**ಗ್ರಾಮ : ಕೃಷ್ಣಾನಗರ ವ್ಯಾಪ್ತಿಗೆ ಬರುತ್ತದೆ** | **ಶೈಲಿ : ವಿಜಯನಗರೋತ್ತರ**

**ಸ್ಥಳ : ಭೀಮತೀರ್ಥ.** | **ಅಭಿಮುಖ : ದಕ್ಷಿಣ**

**ಸ್ಮಾರಕ : ಆಂಜನೇಯ ದೇವಾಲಯ.** | **ಸ್ಥಿತಿ : ಕನಿಷ್ಠ**

ಕಾಲ : ಕ್ರಿ.ಶ.ಸು೧೭ನೆಯ ಶತಮಾನ. ಪಂಥ : ವೈಷ್ಣವ

ಈ ದೇವಾಲಯವು ಸಂಡೂರಿನಿಂದ ಸು.೫.ಕಿ.ಮೀ. ಅಂತರದಲ್ಲಿದೆ. ಸಂಡೂರಿನಿಂದ ಬಳ್ಳಾರಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಎಡಗಡೆಗೆ ಸು.೩.ಕಿ.ಮೀ ಬೆಟ್ಟದ ಒಳಗೆ ಹೋದರೆ ಈ ದೇವಾಲಯ ಕಾಣಸಿಗುತ್ತದೆ. ಈ ದೇವಾಲಯವು ಕಲ್ಯಾಣ ಚಾಲುಕ್ಯರ ಅವಧಿಯಲ್ಲಿ ಕಟ್ಟಲ್ಪಟ್ಟಿದ್ದಾಗಿದೆ. ಇದು ಗರ್ಭಗುಡಿಯನ್ನೊಂದೆ ಹೊಂದಿದ್ದು, ಪ್ರವೇಶದ್ವಾರವು ಸೋಪಾನವನ್ನು ಒಳಗೊಂಡಿದೆ. ದ್ವಾರಬಾಗಿಲ ಮೇಲೆ ಗಜಲಕ್ಷ್ಮಿ ಶಿಲ್ಪವಿದ್ದು, ಸುತ್ತಲು ಲತಾ ಸುರುಳಿಗಳಿವೆ. ಗರ್ಭಗೃಹದ ಮೇಲೆ ಶಿಲ್ಪ ರಹಿತ ಭುವನೇಶ್ವರಿ ಇರುವುದು.

ಈ ದೇವಾಲಯವು ಅಧಿಷ್ಠಾನ, ಭಿತ್ತಿ, ಪ್ರಸ್ತಾರ, ಗೋಪುರವನ್ನು ಒಳಗೊಂಡಿದೆ. ಗೋಪುರದಲ್ಲಿ ದೇವಕೋಷ್ಠಕಗಳಿದ್ದು, ಅವುಗಳಲ್ಲಿ ಶಿಲ್ಪಗಳಿದ್ದು ಕೆಲವು ಹಾಳಾಗಿವೆ. ಮತ್ತೆ ಕೆಲವು ಶಿಲ್ಪಗಳು ಸವೆದಿವೆ. ಈ ದೇವಾಲಯದ ಗರ್ಭಗೃಹದಲ್ಲಿ ಆಂಜನೇಯನ ಮೂರ್ತಿ ಶಿಲ್ಪವಿದ್ದು ಅದು ಇತ್ತೀಚಿನದಾಗಿದೆ. ಆದರೆ ಈ ದೇವಾಲಯ ಮಾತ್ರ ಪ್ರಾಚೀನವಾದುದಾಗಿದೆ. ಹಾಗೂ ಈ ದೇವಾಲಯ ಹಾಳಾದಾಗ ಪುನಃ ಇದನ್ನು ಬೆಣಚು ಶಿಲೆಯಿಂದ ಜೀರ್ಣೋದ್ಧಾರಗೊಳಿಸಿಗಂತೆ ಕಾಣುತ್ತದೆ. ಈ ಮಾದರಿಯ ಮತ್ತೊಂದು ಇಲ್ಲಿಂದ ಸುಮಾರು ೮-೯ಕಿ.ಮೀ ಅಂತರದಲ್ಲಿರುವ ಹರಿಶಂಕರ ದೇವಾಲಯ ಇರುವುದನ್ನು ಕಾಣುತ್ತೇವೆ. ಇದು ಸಹ ಭೀಮತೀರ್ಥದ ಹನುಮಂತ ದೇವಾಲಯದ ಶೈಲಿಯಲ್ಲಿಯೇ ನಿರ್ಮಿಸಲ್ಪಟ್ಟಿದೆ.

ಈ ಹರಿಶಂಕರ ತೀರ್ಥದಲ್ಲಿಯೂ ಸಹ ಒಂದೇ ಗರ್ಭಗೃಹವಿದ್ದು, ಕಲ್ಯಾಣ ಚಾಲುಕ್ಯರ ಕಾಲದ ಶೈಲಿಯಲ್ಲಿ ನಿರ್ಮಿಸಲ್ಪಟ್ಟ ಈಶ್ವರ ದೇವಾಲಯವಿದೆ. ಈ ಎರಡೂ ದೇವಾಲಯಗಳು ಒಂದೇ ಕಾಲದಲ್ಲಿ ನಿರ್ಮಿಸಲ್ಪಟ್ಟಿರಬಹುದು ಎಂದು ಊಹಿಸಬಹುದಾಗಿದೆ. ಆದರೆ ಈ ಭೀಮತೀರ್ಥದ ಹನುಮಂತನ ದೇವಾಲಯವು ಹರಿಶಂಕರ ದೇವಾಲಯದಷ್ಟು ಉತ್ತಮ ಸ್ಥಿತಿಯಲ್ಲಿ ಇಲ್ಲ. ಈ ಭೀಮತೀರ್ಥದಲ್ಲಿ ಹನುಮಂತನ ದೇವಾಲಯ ಅಷ್ಟೇ ಅಲ್ಲದೆ ಈ ದೇವಾಲಯದ ಆವರಣದಲ್ಲಿ ಕಪ್ಪು ಶಿಲೆಯಲ್ಲಿ ಕೆತ್ತಲ್ಪಟ್ಟ ಅನೇಕ ಮೂರ್ತಿ ಶಿಲ್ಪಗಳಿವೆ.

ಕಪ್ಪು ಶಿಲೆಯಲ್ಲಿ ಮಾಡಿದ ಬಸವಣ್ಣನ ವಿಗ್ರಹ, ಊರ್ಧ್ವ ಪೀಠಲಿಂಗ, ಅದರ ಪಕ್ಕದಲ್ಲಿ ಲಿಂಗರಹಿತ ಎರಡು ಊರ್ಧ್ವ ಪೀಠಗಳಿವೆ. ಆದರೆ ಒಂದು ಲಿಂಗರಹಿತ ಊರ್ಧ್ವ ಪೀಠದಲ್ಲಿ ತುಂಬಾ ಚಿಕ್ಕದಾಗಿ ಕೆತ್ತಲ್ಪಟ್ಟ ಏಳು ಕುದುರೆಗಳಿದ್ದು, ಒಬ್ಬ ಸಾರಥಿ ಇರುವಂತೆ ಕೆತ್ತಲ್ಪಟ್ಟಿರುವ ಸೂರ್ಯ ಪೀಠವಿದೆ. ಹಾಗೂ ಅದರ ಪಕ್ಕದಲ್ಲಿ ಬೆಣಚು ಶಿಲೆಯಲ್ಲಿ ಮಾಡಿದ ಒಂದು

ಲಿಂಗವಿದೆ. ಅದರ ಪಕ್ಕದಲ್ಲಿ ಮತ್ತೊಂದು ಕಪ್ಪು ಶಿಲೆಯಲ್ಲಿ ಮಾಡಿದ ಲಿಂಗರಹಿತ ಊರ್ಧ್ವ ಪೀಠವಿದೆ. ಈ ದೇವಾಲಯದ ಆವರಣದಲ್ಲಿ ಹಿಂದೆ ಇನ್ನೂ ಅನೇಕ ಮೂರ್ತಿ ಶಿಲ್ಪಗಳಿದ್ದ ಬಗ್ಗೆ ತಿಳಿದುಬರುತ್ತದೆ. ಆದರೆ ಈಗ ಇಲ್ಲಿನ ಕೆಲವು ವಿಗ್ರಹಗಳನ್ನು ಇಲ್ಲಿಂದ ಬೇರೆ ಸ್ಥಳಗಳಿಗೆ ತೆಗೆದುಕೊಂಡು ಹೋಗಲಾಗಿದೆ. ಹಾಗೂ ಕೆಲವು ವಿಗ್ರಹಗಳು ಜನರ ಅಜ್ಞಾನದಿಂದ ನಾಶಗೊಳಿಸಲ್ಪಟ್ಟಿವೆ.

ಅದೇ ದೇವಾಲಯದ ಆವರಣದಲ್ಲಿ ಒಂದೇ ಕಪ್ಪು ಶಿಲೆಯಲ್ಲಿ ಮಾಡಿದ ಪಾದಗಳಿವೆ. ಅವನ್ನು ಕುಮಾರಸ್ವಾಮಿ ಪಾದ ಎಂದು ಸ್ಥಳೀಯರು ಹೇಳುತ್ತಾರೆ. ಈ ಪಾದವನ್ನು ಸುತ್ತುವರಿದ ಮೂರು ಹೆಡೆಯ ಸರ್ಪವಿದೆ. ಅದರಲ್ಲಿಯೇ ಒಬ್ಬ ವ್ಯಕ್ತಿಯ ಪುಟ್ಟ ಶಿಲ್ಪವಿರುವುದು. ಈಗ ಅದರ ಶಿರ ತುಂಡಾಗಿದೆ. ಮತ್ತು ಅದರಲ್ಲಿಯೇ ಟಗರಿನ ಶಿಲ್ಪವಿದ್ದು, ಅದರ ರುಂಡ ಒಂದು ಕಡೆ ದೇಹ ಮತ್ತೊಂದು ಕಡೆ ಬಿದ್ದಿರುವಂತೆ ಕೆತ್ತಲಾಗಿದೆ. ಹಾಗೂ ಅದರಲ್ಲಿಯೇ ಒಬ್ಬ ನಾಗಕನ್ಯೆಯ ಒಂದೇ ತಲೆಯನ್ನು ಕೆತ್ತಲಾಗಿದೆ. ಅದರ ಪಕ್ಕದಲ್ಲಿಯೇ ಬೆಣಚು ಶಿಲೆಯಲ್ಲಿ ಕೆತ್ತಲ್ಪಟ್ಟ ಜೋಡಿ ನಾಗಶಿಲ್ಪವಿದೆ. ಹಾಗೂ ಲಿಂಗ, ಸೂರ್ಯ, ಚಂದ್ರರ ಶಿಲ್ಪಗಳಿವೆ.

ಇಲ್ಲಿ ಇರುವ ಎಲ್ಲಾ ಶಿಲ್ಪಗಳನ್ನು ಗಮನಿಸಿದರೆ ಈ ಎಲ್ಲಾ ಶಿಲ್ಪಗಳು ಒಂದೇ ಕಾಲಕ್ಕೆ ಸೇರಿದವುಗಳಾಗಿರದೆ ಬೇರೆ ಬೇರೆ ಅರಸರ ಆಳ್ವಿಕೆಯ ಅವಧಿಯಲ್ಲಿ ಮಾಡಿಸಲ್ಪಟ್ಟವುಗಳಾಗಿವೆ ಎಂಬುದು ಶಿಲ್ಪಗಳ ಶೈಲಿ ಶಿಲೆಯ ಬಳಕೆಯಿಂದ ಸ್ಪಷ್ಟವಾಗುತ್ತದೆ. ಇದೇ ದೇವಾಲಯದ ಆವರಣದಲ್ಲಿ ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟ ಅಷ್ಟದಿಕ್ಪಾಲಕರ ಶಿಲ್ಪಗಳಿವೆ. ಅವು ಈ ಕೆಳಗಿನಂತೆ ಇವೆ.

ಕೋಣ ವಾಹನದ ಮೇಲೆ ಕುಳಿತ ಯಮನ ವಿಗ್ರಹ, ಶರಭ ವಾಹನದ ಮೇಲೆ ಕುಳಿತ ವರುಣ, ಆನೆಯ ವಾಹನದ ಮೇಲೆ ಕುಳಿತ ಇಂದ್ರ, ಟಗರಿನ ವಾಹನದ ಮೇಲೆ ಕುಳಿತ ಅಗ್ನಿ, ಜಿಗರೆಯ ವಾಹನದ ಮೇಲೆ ಕುಳಿತ ವಾಯುವ್ಯ, ನಂದಿಯ ವಾಹನದ ಮೇಲೆ ಕುಳಿತ ಈಶಾನ್ಯ, ಮನುಷ್ಯನ ಮೇಲೆ ಕುಳಿತ ನೈರುತ್ಯ, ಕುದುರೆಯ ಮೇಲೆ ಕುಳಿತ ಕುಬೇರ, ಒಟ್ಟು ಎಂಟು ಅಷ್ಟದಿಕ್ಪಾಲಕರ, ಕಪ್ಪು ಶಿಲೆಯಲ್ಲಿ ಕಂಡರಿಸಲ್ಪಟ್ಟ ಮೂರ್ತಿ ಶಿಲ್ಪಗಳಿವೆ. ಇವು ವಿಜಯನಗರ ಶೈಲಿಯಲ್ಲಿವೆ.

**ಗ್ರಾಮ : ದೋಣಿಮಲೈ ಕ್ರಾಸ್ ಬಳಿ** **ಶೈಲಿ : ವಿಜಯನಗರೋತ್ತರ**

**ಸ್ಥಳ : ತಿಮ್ಮಪ್ಪನ ಬೆಟ್ಟ.** **ಅಭಿಮುಖ : ದಕ್ಷಿಣ**

ಸ್ಮಾರಕ : ತಿಮ್ಮಪ್ಪನ ದೇವಾಲಯ. ಸ್ಥಿತಿ : ಉತ್ತಮ

ಕಾಲ : ಕ್ರಿ.ಶ.ಸು೧೭ನೆಯ ಶತಮಾನ ಪಂಥ : ವೈಷ್ಣವ

ಸಂಡೂರಿನಿಂದ ೧೫ಕಿ.ಮೀ ದೂರದಲ್ಲಿದೆ. ಈ ದೇವಾಲಯವು ದೋಣಿಮಲೈ ಕ್ರಾಸ್‌ನಿಂದ ೧೦ಕಿ.ಮೀ ಬೆಟ್ಟದ ಮೇಲೆ ಇದೆ. ಇದು ಗರ್ಭಗೃಹ, ಅಂತರಾಳ, ಮುಖಮಂಟಪವನ್ನು ಹೊಂದಿದೆ. ಅಂತರಾಳದಲ್ಲಿ ಎರಡು ಕಂಬಗಳು ಮುಖಮಂಟಪದಲ್ಲಿ ಎರಡು ಕಂಬಗಳಿವೆ. ತಿಮ್ಮಪ್ಪನ ವಿಗ್ರಹವು ಕಲ್ಲಿನಲ್ಲಿ ಉದ್ಭವವಾದ ಮೂರ್ತಿಯಾಗಿದೆ. ಇದು ಬೆಳ್ಳಿಯ ಮುಖವಾಡ ಹೊಂದಿದ್ದು ಏಳು ಎಡೆ ಸರ್ಪವನ್ನು, ಕೀರ್ತಿ ಮುಖವನ್ನು ಹಾಗೂ ಒಂಭತ್ತು ಕೊಡೆಗಳನ್ನು ಹೊಂದಿದೆ.

ಈ ದೇವಾಲಯವನ್ನು ಈಗ ಜೀರ್ಣೋದ್ಧಾರಗೊಳಿಸಲು ಆಗಿರುವುದು. ಇದು ಅಧಿಷ್ಠಾನ, ಭಿತ್ತಿ, ಪ್ರಸ್ತಾರ, ಗೋಪುರ, ಶಿಖರ, ಸ್ತೂಪಿಯನ್ನು ಹೊಂದಿದ್ದು ಗೋಪುರದಲ್ಲಿ ಗೋಪಾಲಕೃಷ್ಣ, ಗರುಡ, ಹನುಮಂತ, ರಾಮಲಕ್ಷ್ಮಣ, ನರಸಿಂಹ ಇತ್ಯಾದಿ ವೈಷ್ಣವ ಶಿಲ್ಪಗಳು ಹಾಗೂ ಸಿಂಹ ವಾಹನಗಳಿವೆ. ಶಿಖರ ತೆರೆದ ಪದ್ಮಗಳಿಂದ ಅಲಂಕೃತವಾಗಿದೆ.

### ೩.೪ ಔದ್ಯೋಗಿಕ ಸ್ಥಳಗಳು

### ದೋಣಿಮಲೈ

ದೋಣಿಮಲೆಯು ಕಬ್ಬಿಣದ ಅದಿರಿನ ಗಣಿಯು ಸಂಡೂರು ಕೊಳ್ಳದ ಈಶಾನ್ಯ ದಿಕ್ಕಿಗೆ ಇದೆ. ಇದು ಬಳ್ಳಾರಿ ಮತ್ತು ಹೊಸಪೇಟೆಯಿಂದ ೩೫ ಮೈಲುಗಳು ಹಾಗೂ ಸಂಡೂರಿಗೆ ೭ ಮೈಲುಗಳ ದೂರದಲ್ಲಿ ಈ ಗಣಿಯು ಇದೆ. ಈ ಗಣಿಗೆ ದೋಣಿಮಲೆ ಎಂಬ ಹೆಸರು ಬರಲು ಕಾರಣ. ಈ ಗಣಿಯು ದೋಣಿಯಾಕಾರದ ಕೊಳ್ಳವೆಂದೂ ಬೆಟ್ಟದ ತುದಿಯಲ್ಲಿರುವುದರಿಂದ "ದೋಣಿಮಲೆ" ಎಂಬ ಹೆಸರು ಬಂದಿತು. ಕುಮಾರಸ್ವಾಮಿ ಬೆಟ್ಟ ರಾಮಘಡ ಬೆಟ್ಟದ ಜೊತೆಗೆ ಈ ಬೆಟ್ಟವೂ ಸಹ ಅತ್ಯಂತ ಶ್ರೀಮಂತವಾದ ಖನಿಜಾಂಶಗಳಿಂದ ಕೂಡಿದ್ದಾಗಿದೆ.

ಕೆಲವು ವರ್ಷಗಳ ಅವಧಿಗಾಗಿ ಭಾರತ ಸರ್ಕಾರವು ಜೋಷಿ ಕಮಿಟಿಯನ್ನು ೧೯೭೦-೭೧ರಲ್ಲಿ ನಿಯುಕ್ತಿ ಮಾಡಿತು. ಕಾರಣ ಬಳ್ಳಾರಿ ಮತ್ತು ಹೊಸಪೇಟೆ ಭಾಗದಲ್ಲಿಯ ಸುಮಾರು ೮ ಮಿಲಿಯನ್ ಟನ್ ಕಬ್ಬಿಣದ ಅದಿರನ್ನು ರಫ್ತು ಮಾಡುವ ಉದ್ದೇಶದಿಂದ ಸೆಪ್ಟೆಂಬರ್ ೧೯೬೯ರಲ್ಲಿ ಜಿಯೋಲಾಜಿಕಲ್ ಸರ್ವೆ ಆಫ್ ಇಂಡಿಯಾದ ಶೋಧನೆಯ ಪ್ರಕಾರ ಭಾರತ

ಸರ್ಕಾರವು ದೋಣಿಮಲೆಯ ಯೋಜನೆಗೆ ಅಂತಿಮ ಒಪ್ಪಿಗೆ ಕೊಟ್ಟಿತು. ಇಲ್ಲಿ ದೊರಕುವ ಕಬ್ಬಿಣದ ಅದಿರನ್ನು ಹೊರ ದೇಶಗಳಾದ ಜಪಾನ್, ಯು.ಎಸ್.ಎ, ಯು.ಕೆ, ಫ್ರಾನ್ಸ್, ಬೆಲ್ಜಿಯಂ, ಪೂರ್ವಜರ್ಮನಿ, ಇಟಲಿ, ನೆದರ್‌ಲ್ಯಾಂಡ್ ಮತ್ತು ನಾರ್ವೆಗಳಲ್ಲಿ ರಫ್ತು ಮಾಡಲಾಗುತ್ತದೆ. ಈ ಗಣಿಯಲ್ಲಿ ಅತ್ಯಂತ ಆಧುನಿಕ ಯಂತ್ರೋಪಕರಣಗಳನ್ನು ಉಪಯೋಗಿಸಿ ಕಬ್ಬಿಣದ ಅದಿರಿನ ಉತ್ಪಾದನೆಯನ್ನು ಮಾಡಲಾಗುತ್ತಿದೆ.

ಈ ಗಣಿಯ ಉದ್ದ ೧೦ಕಿ.ಮೀ ಅಗಲ ೫೦ ರಿಂದ ೨೦೦ ಮೀಟರ್‌ಗಳು ಇದೆ. ಈ ಗಣಿ ಒಂದು ಬಾರಿ ಉದ್ದವಾದ ಅಂದರೆ ಇಕ್ಕಟಾದ ಅಗಲವಿಲ್ಲದ ಗಣಿ ಇದಾಗಿದೆ. ಈ ಗಣಿಯಲ್ಲಿ ಕೆಲಸವು ಬಹಳ ಕಷ್ಟಕರವಾಗಿದೆ. ಇಲ್ಲಿಯೇ ರಾಷ್ಟ್ರೀಯ ಖನಿಜ ಅಭಿವೃದ್ಧಿ ನಿಗಮ (ಓಒಆಅ) ಅದಿರು ಸಂಸ್ಕರಣ ಕಾರ್ಯವನ್ನು ಬೃಹತ್ತಾಗಿ ಕೈಗೊಂಡಿದೆ. ಜಗತ್ ಪ್ರಸಿದ್ಧ ಖನಿಜ ನಿಧಿಯನ್ನು ಹೊಂದಿದ ಈ ಬೆಟ್ಟ ಇಲ್ಲಿಯ ವ್ಯವಸ್ಥೆ ಮನಸ್ಸಿಗೆ ಆನಂದವನ್ನುಂಟು ಮಾಡುತ್ತದೆ ಹಾಗೂ ಇದೊಂದು ಅತ್ಯಂತ ಸುಂದರವಾದ ಪ್ರವಾಸಿ ಸ್ಥಳವೂ ಆಗಿದೆ.

**ಜಿಂದಾಲ್ ಕಾರ್ಖಾನೆ**

ಸಂಡೂರಿನಿಂದ ೨೪ಕಿ.ಮೀ ದೂರದಲ್ಲಿದೆ. ೧೯೯೪ರಲ್ಲಿ ಸ್ಥಾಪನೆಯಾದ ಜಿಂದಾಲ್ ಉಕ್ಕು ಕಾರ್ಖಾನೆ ನಮ್ಮ ದೇಶದ ಅತಿ ದೊಡ್ಡ ಉಕ್ಕು ಉತ್ಪಾದನಾ ಕಾರ್ಖಾನೆ ಎಂಬ ಹೆಸರುಗಳಿಸಿದೆ. ತಾಲ್ಲೂಕಿನ ತೋರಣಗಲ್ಲು ಪ್ರದೇಶದ ಸುಮಾರು ೧೦೦೦೦ ಎಕರೆಯಲ್ಲಿ ವಿಸ್ತರಿಸಿಕೊಂಡಿರುವ ದೇಶದ ಹೆಮ್ಮೆಯ ಕಂಪನಿ ಜಿಂದಾಲ್ ಸ್ಟೀಲ್ ವರ್ಕ್ಸ್. ವಿದ್ಯಾರ್ಥಿಗಳಿಗೆ, ಕೈಗಾರಿಕೋದ್ಯಮಿಗಳಿಗೆ ಪ್ರವಾಸಿ ಸ್ಥಳವೂ ಹೌದು. ೨೦೧೫ರಲ್ಲಿ "ಇಂಡಸ್ಟ್ರೀ ಲೀಡರ್ ಶಿಪ್ ಅವಾರ್ಡ್" ೨೦೧೨-೧೩ರಲ್ಲಿ " ದಿ ಬೆಸ್ಟ್ ಇಂಟಿಗ್ರೇಟೆಡ್ ಸ್ಟೀಲ್ ಪ್ಲಾಂಟ್ ಇನ್ ಇಂಡಿಯಾ" ಹೀಗೆ ಪ್ರತಿಷ್ಠಿತ ಪ್ರಶಸ್ತಿಗಳನ್ನು ಪಡೆದಿದೆ.

ಈ ಜಿಂದಾಲ್ ಕಾರ್ಖಾನೆಯ ಬಹುತೇಕ ಆವರಣ ಹಸಿರಿನಿಂದ ಕೂಡಿದ್ದು, ವಿದ್ಯಾನಗರ ಟೌನ್ ಷಿಪ್‌ನಲ್ಲಿರುವ ಗಣೇಶ ದೇವಾಲಯ ಸಂಕೀರ್ಣವು ಆಸ್ತಿಕರ ಭಕ್ತಿಯ ಸ್ಥಳವಾಗಿದ್ದು, ತಾಲ್ಲೂಕಿನ ಪ್ರವಾಸಿ ತಾಣಗಳ ಪೈಕಿ ಇದೂ ಒಂದು. ಜಂಜಾಟದ ಜೀವನದಿಂದ ತಾತ್ಕಾಲಿಕವಾಗಿ ಮುಕ್ತಿ ಪಡೆಯಲು, ರಜೆಯ ಮೋಜನ್ನು ಅನುಭವಿಸಲು ಹಲವಾರು ಪ್ರವಾಸಿಗರು ಇಲ್ಲಿಗೆ ಬರುತ್ತಾರೆ. ಈ ದೇವಾಲಯದ ಆವರಣದಲ್ಲಿ ಶಿವ, ರಾಧಾಕೃಷ್ಣ, ಮಾರುತಿ, ಲಕ್ಷ್ಮೀನಾರಾಯಣ, ದುರ್ಗಾದೇವಿ ಹೀಗೆ ಹಲವು ದೇವರ ಗುಡಿಗಳಿವೆ. ವಿದ್ಯಾನಗರದ ಆವರಣದಲ್ಲಿರುವ

"ವಿದ್ಯಾನಗರ ಏರ್ ಪೋರ್ಟ್" ೨೦೦೫ರಲ್ಲಿ ಪ್ರಾರಂಭವಾಗಿದ್ದು, ವಿಶಾಲ ಬಯಲನ್ನು ಹೊಂದಿ ಆಕರ್ಷಣೀಯವಾಗಿದೆ.

**ದೇವಗಿರಿ**

ಸಂಡೂರಿನಿಂದ ಸುಮಾರು ೨೮ಕಿ.ಮೀ ದೂರದಲ್ಲಿ ಕುಮಾರಸ್ವಾಮಿ ದೇವಸ್ಥಾನವಿರುವ 'ಸ್ವಾಮಿಮಲೆ' ಬೆಟ್ಟದ ಹಿಂದಿರುವ ಊರೇ ದೇವಗಿರಿ. ಇದು ಸಂಡೂರು ತಾಲ್ಲೂಕಿನ ಕಪ್ಪು ಬಂಗಾರ ದೊರಕುವ ಪ್ರಸ್ಥಭೂಮಿ. ದಟ್ಟವಾದ ಅರಣ್ಯದಿಂದಲೂ ಅಸಂಖ್ಯಾತ ಪ್ರಮಾಣದ ಕಬ್ಬಿಣದ ಅದಿರಿನಿಂದಲೂ ಕೂಡಿರುವ ಈ ಪ್ರದೇಶವು ವಿಶ್ವದಲ್ಲೇ ಹೆಸರಾದಂತಹ ಪ್ರದೇಶವಾಗಿದೆ. ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಈ ಭಾಗದಲ್ಲಿ ಹೇರಳವಾಗಿ ಸಿಗುತ್ತದೆ. ಸಂಡೂರು ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ಉತ್ಪನ್ನಕ್ಕೆ ಮಾತ್ರ ಸೀಮಿತಗೊಂಡ ಗಣಿಗಾರಿಕೆಯಾಗಿದೆ. ಸ್ಮಯೋರ್ ಇಲ್ಲಿ ಕಾರ್ಯನಿರ್ವಹಿಸುತ್ತದೆ. ಅದಿರನ್ನು ರೋಪ್‌ವೇ ಮೂಲಕ ಸಾಗಿಸಲಾಗುತ್ತದೆ.

ಎಚ್.ಘೋಷ್ (ಅಧಿಕಾರಿ ಮೈನಿಂಗ್ ಅಂಡ್ ಜಿಯಾಲಜಿಕಲ್ ಇನ್ ಸ್ಟಿಟ್ಯೂಟ್ ಆಫ್ ಇಂಡಿಯಾ ೧೯೧೦) ಅವರ ಹೇಳಿಕೆ ಪ್ರಕಾರ, ಹೆಚ್ಚಿನ ಪ್ರಮಾಣದಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರು ಈ ಭಾಗದಲ್ಲಿ ದೊರಕುತ್ತದೆ, ಅದರಲ್ಲೂ ವಿಶೇಷವಾಗಿ ದೇವಗಿರಿಯ ಅದಿರು ಉತ್ತಮವೆನ್ನುತ್ತಾರೆ. ಜಿಯಾಲಜಿಕಲ್ ಸರ್ವೇ ಆಫ್ ಇಂಡಿಯಾದ ಅಧಿಕಾರಿ ಬ್ರೂಸ್ ಫೂಟ್ ಅವರು ಸಂಡೂರು ಕ್ಷೇತ್ರ ಜಗತ್ತಿನಲ್ಲಿಯೇ ಅತ್ಯಂತ ಶ್ರೀಮಂತವಾದ ಕಬ್ಬಿಣದ ಅದಿರಿನ ನಿಕ್ಷೇಪವನ್ನೊಳಗೊಂಡಿದೆ ಎನ್ನುತ್ತಾರೆ.

ಮ್ಯಾಂಗನೀಸ್ ಅದಿರಿನ ನಿಕ್ಷೇಪಕ್ಕೆ ಕಬ್ಬಿಣದ ಅದಿರಿನ ನಿಕ್ಷೇಪವನ್ನು ಹೋಲಿಸಿದಾಗ ಅತೀ ಕಡಿಮೆ ಪ್ರಮಾಣದಲ್ಲಿ ದೊರೆಯುತ್ತದೆ. ಈ ನಿಕ್ಷೇಪ ಮ್ಯಾಂಗನೀಸ್ ಫೇರಸ್ ಫಿಲೈಟ್ ಎಂಬ ಕಲ್ಲಿನಲ್ಲಿ ದೊರೆಯುತ್ತದೆ. ಈ ನಿಕ್ಷೇಪ ದೇವಗಿರಿ ವ್ಯಾಪ್ತಿಗೆ ಸೇರಿರುತ್ತದೆ.

**೩.೫ ಅರಮನೆ ಮತ್ತು ಕೋಟೆ**

**ಅರಮನೆ**

ಸಂಡೂರಿನ ಘೋರ್ಪಡೆ ಮಹಾರಾಜರ ಶ್ರೀ ಶಿವವಿಲಾಸ ರಾಜಮಹಲ್ ಸಂಡೂರಿನಿಂದ ಹೊಸಪೇಟೆಗೆ ಹೋಗುವ ಮಾರ್ಗದಲ್ಲಿದೆ. ಈ ಅರಮನೆಯನ್ನು ೧೯೩೮ರಲ್ಲಿ ನಿರ್ಮಿಸಲು ಪ್ರಾರಂಭಿಸಿ ೧೯೪೦ರಲ್ಲಿ ಪೂರ್ಣಗೊಳಿಸಲಾಯಿತು. ಈ ಸಂದರ್ಭದಲ್ಲಿ ಸಂಡೂರಿನ

ಯಶವಂತರಾವ್ ಘೋರ್ಪಡೆಯವರು ಆಳ್ವಿಕೆ ಮಾಡುತ್ತಿದ್ದರು. ಈ ಅರಮನೆಯಲ್ಲಿ ದರ್ಬಾರ್‌ಹಾಲ್, ದೇವಸ್ಥಾನಗಳು ಇಲ್ಲ. ಸಂಡೂರು ಗ್ರಾಮದ ಮಧ್ಯದಲ್ಲಿರುವ ಹಳೆಯ ಅರಮನೆಯಲ್ಲಿ ಇವು ಇದ್ದವು. ಈಗ ಹಳೆಯ ಅರಮನೆಯಲ್ಲಿ ಖಾದಿ ನೇಯ್ಗೆಯ ಕೆಲಸ ನಡೆಯುತ್ತಿದೆ.

ಈ ಅರಮನೆಯು ೨೦ ಎಕರೆಯ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿದೆ. ೧೭೦೦೦ದ ೫೦೦ ಸ್ಕೊಯರ್ ಫೀಟ್‌ನ ಅಗಲದಲ್ಲಿ ಕೆಳಗಿನ ಕಟ್ಟಡವನ್ನು ನಿರ್ಮಿಸಲಾಗಿದೆ. ಇದರ ಉದ್ದ ಸುಮಾರು ೧೦೦ ಅಡಿ ಇದೆ. ಈ ಕಟ್ಟಡವನ್ನು ನಿರ್ಮಿಸಲು ಮೆಸನರಿ, ಗ್ರಾನೈಟ್ ಕಾಂಕ್ರೀಟ್ (ಸುರಕಿ)ಅನ್ನು ಬಳಸಲಾಗಿದೆ. ಈ ಅರಮನೆಯ ಗೋಡೆಗಳು ಎರಡುವರೆ ಅಡಿ ದಪ್ಪ ಇವೆ. ನೆಲಕ್ಕೆ ಕಡಪ ಕಲ್ಲನ್ನು ಹಾಸಲಾಗಿದೆ. ಕಿಟಕಿ, ಬಾಗಿಲುಗಳಿಗೆ ತೇಗದ ಕಟ್ಟಿಗೆಯನ್ನು ಅಳವಡಿಸಲಾಗಿದೆ.

ಈ ಅರಮನೆಯು ಎರಡು ಹಂತಸ್ತಿನ ಮಹಲಾಗಿದೆ. ಕೆಳಗೆ ೧೫ ಕೋಣೆಗಳಿದ್ದು, ಅದರಂತೆಯೇ ಮೇಲೆಯೂ ೧೫ ಕೋಣೆಗಳಿವೆ. ಇದರಲ್ಲಿ ಕಛೇರಿ, ಗ್ರಂಥಾಲಯ, ದರ್ಬಾರ್ ಹಾಲ್‌ಗಳನ್ನು ಒಳಗೊಂಡಿದೆ. ಜೊತೆಗೆ ಈ ಅರಮನೆಯಲ್ಲಿರುವ ಪ್ರತಿಯೊಂದು ಕೋಣೆಗಳಿಗೂ ಸ್ನಾನ ಗೃಹಗಳಿರುವುದು ವಿಶೇಷವಾಗಿದೆ. ಮಧ್ಯದಲ್ಲಿ ವಿಶಾಲವಾದ ಪ್ರಕಾರವನ್ನು ಹೊಂದಿದೆ. ಈ ಕಟ್ಟಡವು ಈ ಕಟ್ಟಡವು ಆಯಾತಾಕಾರವಾಗಿದ್ದು ಮೇಲ್ಭಾಗದಲ್ಲಿ ೫ ಗುಮ್ಮಟಗಳಿವೆ. ನಾಲ್ಕು ಮೂಲೆಯಲ್ಲಿ ನಾಲ್ಕು ಗುಮ್ಮಟಗಳು ಹಾಗೂ ಮುಂಭಾಗದಲ್ಲಿ ಒಂದು ಗುಮ್ಮಟವಿದೆ. ಮೇಲಿನ ಅಂತಸ್ತಿನಲ್ಲಿ ಮೊಗಸಾಲೆ ಇದ್ದು ಕಮಾನುಗಳಿಂದ ಅಲಂಕೃತವಾಗಿದೆ. ಈ ಅರಮನೆಯು ಇಂಡೋ ಸಾರ್ಸೆನಿಕ್ ಶೈಲಿಯಲ್ಲಿ ನಿರ್ಮಿಸಲ್ಪಟ್ಟಿದೆ. ದೀರ್ಘಕಾಲ ಬಾಳಿಕೆ ಬರುವಂತಹ ವಸ್ತುಗಳನ್ನು ಉಪಯೋಗಿಸಿಕೊಂಡು ಈ ಅರಮನೆಯನ್ನು ನಿರ್ಮಿಸಲಾಗಿದೆ.

ಯಶವಂತರಾವ್ ಹಿಂದೂರಾವ್ ಘೋರ್ಪಡೆಯವರ ಅಧಿಕಾರಾವಧಿಯಲ್ಲಿ ನಿರ್ಮಾಣವಾದ ಈ ಅರಮನೆಯ ಗೃಹಪ್ರವೇಶದ ಸಮಾರಂಭಕ್ಕೆ ಅಧಿಕಾರ ವರ್ಗದವರು, ಗಣ್ಯರು, ರಾಜಕೀಯ ವರ್ಗದವರು, ಸಾಕಷ್ಟು ಜನ ಸೇರಿದ್ದರು. ಈ ಅರಮನೆಯಲ್ಲಿ ಘೋರ್ಪಡೆ ಕುಟುಂಬದವರು ವಾಸಿಸುತ್ತಿದ್ದರು.

ದಾರಿಹೋಕರನ್ನು ಕೈಬೀಸಿ ಕರೆಯುವ ಈ ಅರಮನೆ ಪ್ರಸ್ತುತ ಸಂದರ್ಭದಲ್ಲಿ ಸ್ಕಂದ ಲಿಮಿಟೆಡ್ ಕಂಪನಿಯ ಅಧೀನದಲ್ಲಿದ್ದು ಇದನ್ನು ಈಗ ೨೦೧೨ ರಿಂದ ಹೋಟೆಲ್ ಆಗಿ

ಮಾಡಿಕೊಂಡಿದ್ದಾರೆ. ಹೊರಗಡೆ ಮಾತ್ರ ಅರಮನೆಯಂತೆ ಕಾಣುವ ಈ ಅರಮನೆಯೊಳಗೆ ಸಂಪೂರ್ಣ ಬದಲಾವಣೆ ಮಾಡಿದ್ದಾರೆ. ಕೊಡಗೂ ಮೂಲದ ಕಣ್ಣನ್ ಎಂಬುವವರು ಇದನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಅರಮನೆಯ ಪ್ರವೇಶದ ಎಡ ಮತ್ತು ಬಲ ಬದಿಯಲ್ಲಿ ಹಿಂದಿಯಲ್ಲಿ ಮತ್ತು ಇಂಗ್ಲೀಷ್‌ನಲ್ಲಿ ಈ ಅರಮನೆಯ ಸ್ಥಾಪನೆಯ ಬಗ್ಗೆ ಗ್ರಾನೈಟ್ ಕಲ್ಲಿನಲ್ಲಿ ಕೆತ್ತಲಾಗಿದೆ. ಬಾಗಿಲುಗಳು ಸುಂದರವಾಗಿದ್ದು ಮೇಲೆ ಪಟ್ಟಿಕೆಯು ಹೂವಿನ ಅಲಂಕಾರದಿಂದ ಕೂಡಿದೆ. ಅರಮನೆಯ ಮುಂಭಾಗದಲ್ಲಿ ಹೂ, ಸಸಿ ಇಡಲು ಆ ಘೋರ್ಪಡೆ ಅರಸರು ಬಳಸುತ್ತಿದ್ದ ತಾಮ್ರದ ಪರಿಕರವಿದೆ ಮತ್ತು ಘೋರ್ಪಡೆ ಅರಸರು ಮೊದಲು ಗುತ್ತಿ, ರಾಜಸ್ಥಾನ, ತಿರುಚುನಾಪಳ್ಳಿ ಮುಂತಾದ ಪ್ರದೇಶಗಳಲ್ಲಿ ಆಳ್ವಿಕೆ ಮಾಡಿದಂತಹ ಕೋಟೆಗಳು, ಪ್ರದೇಶಗಳನ್ನು ಹಾಕಲಾಗಿದೆ.

ಆಗಿನ ಕಾಲದ ಪರಿಕರಗಳನ್ನು ಮೂರ್ತಿಗಳನ್ನು ಕಾಣುತ್ತೇವೆ. ಆಗಿನ ಮಂಚ ಇದ್ದು ಇದಕ್ಕೆ ತಾಮ್ರ ಲೇಪನ ಮಾಡಿದ್ದಾರೆ. ಅದರ ಮೇಲೆ ಗೋಡೆಯಲ್ಲಿ ಸರಸ್ವತಿಯ ಫೋಟೋ ಚಿತ್ರಗಳನ್ನು ತೇಗದ ಕಟ್ಟಿಗೆಯಲ್ಲಿ ಕೆತ್ತಲಾಗಿದೆ. ಮೇಲ್ಛಾವಣಿಯಲ್ಲಿ ಲೈಟ್‌ಗಳನ್ನು ಅಳವಡಿಸಿದ್ದು ಕಬ್ಬಿಣದ ಸರಳು ಸುತ್ತುವರೆದಿದ್ದು ಅದರ ಕೆಳಗೆ ೫ ಲೈಟ್‌ಗಳಿವೆ. ಅವು ಆಕರ್ಷಕವಾಗಿವೆ. ಆ ಕಾಲಕ್ಕೆ ಸಂಬಂಧಿಸಿದ ನಕಾಶೆ ಚಿತ್ರ ಅಂದರೆ ಅವರ ಸಾಮ್ರಾಜ್ಯದ ಚಿತ್ರಗಳು, ಪಾರಿವಾಳ, ಗಿಳಿ, ಮುಂತಾದ ಪಕ್ಷಿ ಚಿತ್ರವಿದೆ. ಪ್ರವೇಶದ್ವಾರದ ಎಡಭಾಗದ ದಕ್ಷಿಣದಲ್ಲಿ ಬಹು ಸುಂದರವಾದ ಬಾಗಿಲು ಇದ್ದು ಇದನ್ನು ತೇಗದ ಕಟ್ಟಿಗೆಯಲ್ಲಿ ಕೆತ್ತಲಾಗಿದೆ.

ಬಾಗಿಲಿನಲ್ಲಿ ಎರಡು ಕಡೆ ೫ ಪಟ್ಟಿಕೆಗಳಿದ್ದು ಒಂದೊಂದು ಪಟ್ಟಿಕೆಯಲ್ಲಿ ತಾಮ್ರದ ಶಿಲ್ಪಗಳನ್ನು ಲೇಪನ ಮಾಡಲಾಗಿದೆ. ಮೊದಲ ಬಾಗಿಲ ಪಟ್ಟಿಕೆಯಲ್ಲಿ ವಿಷ್ಣು, ಆಂಜನೇಯ, ಕೈಯಲ್ಲಿ ಛತ್ರಿ ಹಿಡಿದಿರುವ ವ್ಯಕ್ತಿ, ಹುಲಿಯ ಮೇಲೆ ಕುಳಿತ ದೇವಿ, ಜೈನ ತೀರ್ಥಂಕರನ ಚಿತ್ರಗಳು ಅದರ ಪಕ್ಕದ ಬಾಗಿಲ ಮೊದಲ ಪಟ್ಟಿಕೆಯಲ್ಲಿ ಶ್ರೀ ಕೃಷ್ಣ ಚಿತ್ರ, ಒಂದೇ ವೇದಿಕೆಯಲ್ಲಿ ಇಬ್ಬರು ಕುಳಿತಿರುವ ಚಿತ್ರ, ಆಂಜನೇಯ ಚಿತ್ರ, ದನಗಳನ್ನು ಮೇಯಿಸುತ್ತಿರುವ ಕೃಷ್ಣನ ಚಿತ್ರ, ಅಶ್ವಯಾಗಕ್ಕೆ ಸಿದ್ಧಗೊಂಡಿರುವ ಕುದುರೆ ಹಾಗೂ ರಾಜನ ಚಿತ್ರವಿದೆ.

ಈ ಬಾಗಿಲಿನ ಮೇಲೆ ಅಲಂಕೃತವಾದ ಪಕ್ಷಿಗಳ ಚಿತ್ರ ಮುಂತಾದವುಗಳನ್ನು ಕಾಣಬಹುದು. ಅರಮನೆಯ ಇನ್ನೊಂದು ಕೋಣೆಯಲ್ಲಿ ಘೋರ್ಪಡೆ ರಾಜರ ದರ್ಬಾರ್‌ಹಾಲ್ ಹಾಗೂ ಎಂ.ವೈ.ಜಿ. ಮತ್ತು ದೇವರಾಜ್ ಅರಸುರವರ ಭಾವಚಿತ್ರ, ಇಂದಿರಾಗಾಂಧಿ,

ಯಶವಂತರಾವ್, ಘೋರ್ಪಡೆಯವರ ಭಾವಚಿತ್ರ ಹಾಗೂ ಆಗಿನ ಕಾಲದ ಕೆಲವು ಚಿತ್ರಪಟಗಳನ್ನು ಗೋಡೆಯ ಮೇಲೆ ಹಾಕಲಾಗಿದೆ. ಇದರ ಮುಂದೆ ಮೈದಾನವಿದೆ. ಅನೇಕ ಪ್ರವಾಸಿಗರು ಇದನ್ನು ನೋಡಲು ಆಗಮಿಸುತ್ತಾರೆ.

**ಕೋಟೆಗಳು**

ಕೋಟೆಯೆಂದರೆ ರಕ್ಷಣಾರ್ಥವಾಗಿ ಸುತ್ತಲೂ ಎತ್ತರವಾದ ಗೋಡೆಯ ರಚನೆ ಎಂದು ಅರ್ಥ. ಇದು ಶಿಲಾ ರಚನೆ ಆಗಿರಬಹುದು ಅಥವಾ ಮಣ್ಣಿನ ರಚನೆ ಆಗಿರಬಹುದು. ಕೋಟೆ ದುರ್ಗ, ಕಿಲ್ಲೆ ಎಂದೂ ಕರೆಯುವರು. ರಕ್ಷಣಾ ವಾಸ್ತುವಿನಲ್ಲಿ ಕೋಟೆಗೆ ಪ್ರಥಮ ಸ್ಥಾನವಿದೆ.

**ದರೋಜಿ ಕೋಟೆ**

ದರೋಜಿಯು ಸಂಡೂರು ತಾಲ್ಲೂಕಿನ ಒಂದು ಚಿಕ್ಕ ಗ್ರಾಮ. ೧೨ನೇ ಶತಮಾನದಲ್ಲಿ ದೊರವಡಿ ನಾಡು ಅಥವಾ ದೊರವಡಿ-೭೦ರ ರಾಜಧಾನಿಯಾಗಿದ್ದ ದೊರವಡಿಯು ಕಾಲಾಂತರದಲ್ಲಿ ದರೋಜಿಯಾಗಿದೆ. ಇದನ್ನು ಶಾಸನಗಳು ದೊರವದಿ ಎಂದು ಕರೆದಿವೆ. ಇದು ಬಲ್ಲಕುಂದೆ ನಾಡಿನ ದೊಡ್ಡ ಉಪವಿಭಾಗಗಳಲ್ಲಿ ಒಂದೆಂಬ ಅಂಶವು ಓರುವಾಯಿ ಮತ್ತು ಹಂಪೆ ಶಾಸನಗಳಿಂದ ತಿಳಿಯುತ್ತದೆ. ಕ್ರಿ.ಶ.೧೨ನೇ ಶತಮಾನದಲ್ಲಿ ದೊರವಡಿ ನಾಡು ಅಥವಾ ದೊರವಡಿ-೭೦ರ ರಾಜಧಾನಿಯಾಗಿದ್ದಿತು. ದೊರವಡಿಯಲ್ಲಿ ೧೨ನೇ ಶತಮಾನದ ಪ್ರಾರಂಭದಲ್ಲಿ ಕೋಟೆಯಿದ್ದುದು ಇಲ್ಲಿಯ ಕ್ರಿ.ಶ.೧೧೦೪-೦೫ರ ಶಾಸನದಿಂದ ತಿಳಿಯುತ್ತದೆ.

ಈ ಕೋಟೆಯನ್ನು ೧೨ನೇ ಶತಮಾನದ ಕೊನೆಯಲ್ಲಿ ಹೊಯ್ಸಳ ಎರಡನೇ ಬಲ್ಲಾಳ ಜಯಿಸಿದ್ದನು. ಕ್ರಿ.ಶ.೧೨೮೦ ಮತ್ತು ೧೨೮೨-೮೩ರಲ್ಲಿ ಮುಮ್ಮಡಿ ಸಿಂಗೆಯನಾಯಕ ದೊರವದಿಯನ್ನು ಆಳುತ್ತಿದ್ದಾಗ ಯಾದವ ರಾಮದೇವನ ಸೈನ್ಯವು ಆಕ್ರಮಣ ಮಾಡಿತು. ೧೩೨೦ರಲ್ಲಿ ಮುಮ್ಮಡಿ ಸಿಂಗೆಯನಾಯಕನ ಮಗ ಕಂಪಿಲರಾಯ ದೊರವಡಿಯನ್ನು ಆಳುತ್ತಿದ್ದಾಗ ಹೊಯ್ಸಳ ಮೂರನೇ ಬಲ್ಲಾಳ ದಂಡೆತ್ತಿ ಬಂದನು. ೧೬ನೇ ಶತಮಾನದಲ್ಲಿ ವಿಜಯನಗರ ಅರಸರ ಕಾಲದಲ್ಲಿ ದೊರವಡಿಯ ಸುತ್ತಲಿನ ಪ್ರದೇಶವನ್ನು ದೊರವಡಿ ಎಂದು ಕರೆಯುತ್ತಿದ್ದರು.

## ಕೋಟೆಯ ಲಕ್ಷಣಗಳು

ದೊರವಡಿ ಪಟ್ಟಣವಿದ್ದ ಸ್ಥಳವನ್ನು ಹಳೆದರೋಜಿ ಎಂದು ಕರೆಯುತ್ತಾರೆ. ಇದರ ಪಶ್ಚಿಮಕ್ಕೆ ದರೋಜಿ ಬೆಟ್ಟವಿದೆ. ಬೆಟ್ಟದ ಮೇಲೆ ಕೋಟೆ ಮತ್ತು ಇತರ ಕಟ್ಟಡಗಳ ಅವಶೇಷಗಳಿವೆ. ದೊರವಡಿ ಪಟ್ಟಣ ಅಥವಾ ಹಳೆದರೋಜಿಯ ಸುತ್ತ ಹಿಂದೆ ಕೋಟೆಯಿದ್ದ ಬಗ್ಗೆ ಈಗ ಆಧಾರಗಳಿಲ್ಲ. ಒಂದು ವೇಳೆ ಕೋಟೆ ಇದ್ದಿದ್ದರೂ ಅದನ್ನು ವ್ಯವಸಾಯ ಮಾಡಲು ಹಾಳು ಮಾಡಿರಬಹುದು. ಏಕೆಂದರೆ ಹಾಳು ಪಟ್ಟಣದ ಪ್ರದೇಶವು ವ್ಯವಸಾಯಕ್ಕೆ ಒಳಪಟ್ಟಿದೆ. ಆದರೆ ಬೆಟ್ಟದ ಮೇಲೆ ೧೨ನೇ ಶತಮಾನದಲ್ಲಿಯೇ ಕೋಟೆ ಇದ್ದುದಕ್ಕೆ ಅಲ್ಲಿನ ರಾಮಲಿಂಗೇಶ್ವರ ದೇವಾಲಯದಲ್ಲಿಯ ಶಾಸನವು ಆಧಾರವಾಗಿದೆ. ಶಾಸನದ ಪ್ರಕಾರ ಈ ದೇವಾಲಯವು ದೊರವಡಿಯ ಕೋಟೆಯ ಒಳಗಿತ್ತು.

ದರೋಜಿ ಬೆಟ್ಟದ ಸಾಲಿನಲ್ಲಿ ಮೂರು ಬೆಟ್ಟಗಳಿವೆ. ಇವುಗಳನ್ನು ಉತ್ತರಬೆಟ್ಟ, ಮಧ್ಯದಬೆಟ್ಟ ಮತ್ತು ದಕ್ಷಿಣ ಬೆಟ್ಟಗಳೆಂದು ಕರೆಯಬಹುದು. ಇವುಗಳಲ್ಲಿ ಮಧ್ಯ ಮತ್ತು ದಕ್ಷಿಣಬೆಟ್ಟಗಳ ಮೇಲೆ ಕೋಟೆ ವಿಸ್ತರಿಸಿದೆ. ದಕ್ಷಿಣ ಬೆಟ್ಟದ ಬುಡದಲ್ಲಿ ವೀರಭದ್ರ ದೇವಾಲಯವಿದೆ. ಬೆಟ್ಟಗಳ ಮೇಲೆ ಹತ್ತಲು ಮಧ್ಯ ಮತ್ತು ದಕ್ಷಿಣ ಬೆಟ್ಟಗಳ ಮಧ್ಯದ ಕಿರಿದಾದ ಕೊಳ್ಳದಲ್ಲಿ ಮೆಟ್ಟಿಲುಗಳಿವೆ. ಕೊಳ್ಳದ ದಾರಿಯಲ್ಲಿ ಆಗ್ನೇಯಕ್ಕೆ ಎರಡು ಮತ್ತು ವಾಯುವ್ಯಕ್ಕೆ ಎರಡು ಕೋಟೆ ಗೋಡೆಗಳನ್ನು ಎರಡು ಬೆಟ್ಟಗಳ ಮಧ್ಯೆ ನಿರ್ಮಿಸಲಾಗಿದೆ.

ಈ ಕೋಟೆಗಳಲ್ಲಿ ತೆರೆದ ದ್ವಾರಗಳಿವೆ. ಆದರೆ ಬಾಗಿಲಿನಂತಹ ಯಾವುದೇ ಕಟ್ಟಡಗಳಿಲ್ಲ. ಚಿಕ್ಕ ಕಲ್ಲುಗಳಿಂದ ಕಟ್ಟಿದ ಆಗ್ನೇಯ ಕೋಟೆ ಗೋಡೆಗಳು ೧೭-೧೮ನೇ ಶತಮಾನದವುಗಳು. ಆದರೆ ವಾಯವ್ಯ ಕೋಟೆ ಗೋಡೆಗಳನ್ನು ಭಾಗಶಃ ಕತ್ತರಿಸಿದ ದೊಡ್ಡ ಕಲ್ಲುಗಳಿಂದ ಕಟ್ಟಿದ್ದು ಇವು ೧೩ನೇ ಶತಮಾನ ಅಥವಾ ಅದಕ್ಕಿಂತ ಹಿಂದಿನ ಕಾಲದವು. ಈ ಕೊಳ್ಳದಲ್ಲಿ ಬೆಟ್ಟದ ಮೇಲಿನಿಂದ ಹರಿದು ಬಂದ ನೀರನ್ನು ಸಂಗ್ರಹಿಸಲು ಎರಡು ಚಿಕ್ಕ ಕೆರೆಗಳಿವೆ.

ಆಗ್ನೇಯದಿಂದ ಮೊದಲನೆಯ ಕೋಟೆ ಗೋಡೆಯನ್ನು ದಾಟಿ ಎರಡನೆಯ ಕೋಟೆಯ ಹತ್ತಿರ ಹೋದಾಗ ಒಂದು ದಾರಿ ದಕ್ಷಿಣ ಬೆಟ್ಟದ ಮೇಲೆ ಹೋಗುತ್ತದೆ. ಈ ದಾರಿಯಲ್ಲಿ ಕೆಲವು ಮೆಟ್ಟಿಲುಗಳನ್ನು ಹತ್ತಿ ಮುಂದೆ ಹೋದಾಗ ರಾಮಲಿಂಗೇಶ್ವರ ದೇವಾಲಯ ಕಾಣುತ್ತದೆ. ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿವೆ. ಗರ್ಭಗೃಹದ ಬಾಗಿಲಿನ ಮೇಲೆ ಗಜಲಕ್ಷ್ಮಿಯಲ್ಲದೆ ಬೇರೆ ಅಲಂಕಾರವಿಲ್ಲ. ಅಂತರಾಳದ ಮುಂದೆ ಬಾಗಿಲವಾಡವಿಲ್ಲ.

ನಂತರ ಸೇರಿಸಲಾದ ಸಭಾಮಂಟಪ ಭಾಗಶಃ ಬಿದ್ದು ಹೋಗಿದೆ. ಹೊರ ಗೋಡೆಯ ಮೇಲೆ ಅರೆ ಗಂಭಗಳ ಅಲಂಕಾರವಿದೆ. ಸಭಾಮಂಟಪದ ಉತ್ತರ ಗೋಡೆಯ ಮೇಲೆ ಆನೆಯ ಎರಡು ಉಬ್ಬು ಶಿಲ್ಪಗಳಿವೆ. ಅಂತರಾಳದ ಅರೆಗಂಭಗಳ ಮೇಲಿನ ಶಾಸನವು ಕ್ರಿ.ಶ.೧೧೦೪-೦೫ರಲ್ಲಿ ದೊರವಡಿ ಕೋಟೆಯೊಳಗಿನ ರಾಮೇಶ್ವರ ದೇವರಿಗೆ ದಾನ ಕೊಟ್ಟಿದುದನ್ನು ದಾಖಲಿಸುತ್ತದೆ. ಈ ದೇವಾಲಯವು ಶಾಸನದ ಕಾಲಕ್ಕಿಂತ ಕೆಲವು ವರ್ಷ ಹಿಂದಿನದಾಗಿದೆ. ದೇವಾಲಯದ ಮುಂದೆ ಚಿಕ್ಕ ನೀರಿನ ದೋಣಿಯಿದೆ. ದೇವಾಲಯದ ಸುತ್ತಲಿನ ಸಮತಟ್ಟಾದ ಪ್ರದೇಶದ ಸುತ್ತಲು ಕೋಟೆಯಿದೆ. ಈ ಕೋಟೆಗೆ ದಕ್ಷಿಣಕ್ಕೆ ಬಾಗಿಲಿದೆ. ಇಲ್ಲಿಂದ ಮೇಲೆ ಮೊದಲು ಪಶ್ಚಿಮಕ್ಕೆ ನಂತರ ವಾಯವ್ಯಕ್ಕೆ ಮೂರು ಬಾಗಿಲುಗಳ ಮೂಲಕ ಹೋದಾಗ ಬೆಟ್ಟದ ತುದಿಯಲ್ಲಿರುವ ಸಮತಟ್ಟಾದ ಪ್ರದೇಶವನ್ನು ತಲುಪುತ್ತೇವೆ. ಈ ಪ್ರದೇಶದ ಸುತ್ತಲಿನ ಕೋಟೆಯನ್ನು ಚಿಕ್ಕ ಕಲ್ಲುಗಳಿಂದ ಕಟ್ಟಲಾಗಿದೆ. ಈ ಕೋಟೆಯಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಇಲ್ಲಿ ಕೆಲವು ಕಟ್ಟಡಗಳ ಅವಶೇಷಗಳು ಮತ್ತು ಒಂದು ನೀರಿನ ದೊಣೆ ಇವೆ. ಇಲ್ಲಿಯ ಒಂದು ಗುಂಡಿನ ಮೇಲೆ ಹುಲಿಯನ್ನು ಬಂದೂಕಿನಿಂದ ಬೇಟೆಯಾಡುತ್ತಿರುವ ಮನುಷ್ಯನ, ಒಂಟೆಯ ಮೇಲೆ ಕುಳಿತು ನಗಾರಿ ಬಾರಿಸುವವನ, ಖಡ್ಗ ಹಿಡಿದು ಕುದುರೆಯ ಮೇಲೆ ಕುಳಿತವನ ಮತ್ತು ಧ್ವಜದೊಂದಿಗೆ ಅಂಬಾರಿಯನ್ನು ಹೊತ್ತ ಆನೆಯ ರೇಖಾಚಿತ್ರಗಳಿವೆ. ಮತ್ತೊಂದು ಗುಂಡಿನ ಮೇಲೆ ಆನೆಯನ್ನು ಕೊಲ್ಲುತ್ತಿರುವ ಸಿಂಹದ ರೇಖಾಚಿತ್ರವಿದೆ. ಮನುಷ್ಯರ ಭಂಗಿ ಮತ್ತು ಪ್ರಾಣಿಗಳ ಚಲನವಲನಗಳನ್ನು ನೈಜವಾಗಿ ಚಿತ್ರಿಸಲಾಗಿದೆ.

ಮಧ್ಯ ಬೆಟ್ಟದ ಸುತ್ತಲು ಎರಡು ಕೋಟೆ ಗೋಡೆಗಳಿವೆ. ಚಿಕ್ಕ ಕಲ್ಲುಗಳಿಂದ ಕಟ್ಟಿದ ಈ ಗೋಡೆಗಳಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಬೆಟ್ಟದ ತುದಿಯಲ್ಲಿನ ಸಮತಟ್ಟಾದ ಪ್ರದೇಶದಲ್ಲಿ ಕೆಲವು ಕಟ್ಟಡಗಳ ಅವಶೇಷಗಳು ಮತ್ತು ಒಂದು ನೀರಿನ ದೊಣೆ ಇವೆ. ಈ ಬೆಟ್ಟದ ಉತ್ತರಕ್ಕಿಂತ ಕೋಟೆ ಗೋಡೆಯನ್ನು ದೊಡ್ಡ ಕಲ್ಲುಗಳಿಂದ ಕಟ್ಟಲಾಗಿದ್ದು, ಇದು ೧೩-೧೪ನೇ ಶತಮಾನದ್ದು, ಈ ಬೆಟ್ಟದ ಮೇಲಿನ ಉಳಿದ ಕೋಟೆ ಮತ್ತು ದಕ್ಷಿಣ ಬೆಟ್ಟದ ಮೇಲಿನ ಕೋಟೆ ೧೭-೧೮ನೇ ಶತಮಾನದವು ಎಂದು ತಿಳಿಸುತ್ತದೆ.

**ಹೊಸಮಲೆ ದುರ್ಗ (ರಾಮಘಡ)**

೧೩-೧೪ನೇ ಶತಮಾನಗಳಲ್ಲಿ ಹೊಸಮಲೆ ದುರ್ಗವೆಂಬ ಹೆಸರಿನಿಂದ ವೀರ ಕಂಪಿಲರಾಯನ ಮತ್ತು ಆತನ ಪುತ್ರ ಗಂಡುಗಲಿ ಕುಮಾರರಾಮನ ರಾಜಧಾನಿಯಾಗಿ ಮೆರೆದ

ಈ ಸ್ಥಳ, ಕಾಲಾಂತರದಲ್ಲಿ ಕುಮಾರರಾಮನ ನೆನಪಿಗಾಗಿ ರಾಮಘಡವೆಂಬ ಹೆಸರು ಬದಲಾಯಿಸಿಕೊಂಡು ಇತಿಹಾಸಕಾರರಿಂದ ಬಹದೂರು ಉಳಿದಿದೆ. ಇದು ಸಂಡೂರಿನಿಂದ ವಾಯುವ್ಯ ದಿಕ್ಕಿಗೆ ಹತ್ತುಕಿ.ಮೀ ದೂರದಲ್ಲಿ ಬೆಟ್ಟದ ಮೇಲಿದೆ.

ಮುಮ್ಮಡಿಸಿಂಗನು ಮರಣಿಸಿದಾಗ ಅವನ ಮಗ ವೀರ ಕಂಪಿಲದೇವನಿಗೆ ಹದಿನೆಂಟು ವರ್ಷವಾಗಿತ್ತು. ವೀರ ಕಂಪಿಲದೇವನು ಎಳೆಯ ಪ್ರಾಯದವನಾಗಿದ್ದರಿಂದಲೂ ರಾಜ್ಯದಲ್ಲಿ ಕ್ಷೋಭೆ ಉಂಟಾದುದರಿಂದ ಆ ಸಮಯವನ್ನೆ ನಿರೀಕ್ಷಿಸುತ್ತಿದ್ದ, ಹೊಯ್ಸಳ ವೀರಬಲ್ಲಾಳ, ಗುತ್ತಿಯ ಚಾಮರಾಜ, ಓರಂಗಲ್ಲಿನ ಪ್ರತಾಪರುದ್ರ ಮುಂತಾದ ಶತ್ರುಗಳು ಕಂಪಿಲರಾಯನ ದೇಶದ ಮೇಲೆ ದಂಡೆತ್ತಿ ಬಂದು ಕೆಲವು ಭಾಗಗಳನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು. ಕಂಪಿಲನ ರಾಜ್ಯವು ಕುಸಿಯಿತು. ಕೆಲವು ಕಾಲಾನಂತರ ರಾಜ್ಯದಲ್ಲಿ ಬರಗಾಲವು ಪ್ರಾಪ್ತವಾಯಿತು. ರಾಜಧಾನಿಯಲ್ಲಿ ವಾಸಮಾಡಲು ಸಾಧ್ಯವಿಲ್ಲದೆ ಜಟ್ಟಂಗಿ ಗಿರಿಯ ಬಳಿ ನೆಲೆಸಿದ ಮೇಲೆ ಕ್ಷಾಮವು ಕ್ಷೀಣಿಸಿ, ಬೆಳೆಯು ಸಮೃದ್ಧಿಯಾಗಿ, ಸುಖ ಉಂಟಾಯಿತು. ವೃದ್ಧಿಯಾದ ಪರಿವಾರಕ್ಕೂ, ಕುರಿ, ಮೇಕೆ, ಗೋವೃಂದಗಳಿಗೂ ಸಾಕಷ್ಟು ವಸತಿಯನ್ನು ಹುಡುಕುತ್ತಾ ಕಂಪಿಲದೇವರಾಯನೂ ಅವನ ಪರಿವಾರದವರೂ ವಲಸೆ ಹೊರಟರು. ನಡುಮಲೆಯಲ್ಲಿ ಹಟ್ಟಿಯನ್ನು ಹಾಕಿಕೊಂಡು ಬಡತನದಿಂದ ಜೀವಿಸುತ್ತಿದ್ದರು.

ಒಂದು ದಿನ ಬೇಟೆಯಾಡುತ್ತಿದ್ದಾಗ ಲೋಹಗಿರಿಯಲ್ಲಿ(ಲೋಹಾಚಲ ಕುಮಾರಸ್ವಾಮಿ ಬೆಟ್ಟ) ನೆಲೆಸಿರುವ ತಾರಕಾಸುರ ಸಂಹಾರಿ ಕುಮಾರಸ್ವಾಮಿಯನ್ನು ದರ್ಶನ ಮಾಡಿ ಕಾಣಿಕೆಯನ್ನು ಅರ್ಪಿಸಿ ಹರಕೆಯನ್ನು ಹೊಂದಿದರು. ಬೇಟೆಯಾಡುತ್ತಾ ಮುಂದಕ್ಕೆ ಹೋಗಲು ದಟ್ಟವಾದ ಹೊಸಮಲೆ ಎಂಬ ಅರಣ್ಯವು ಇವರಿಗೆ ಗೋಚರಿಸಿತು. ಈ ಅರಣ್ಯ ಮಧ್ಯದಲ್ಲಿ ಒಂದು ನಗರವನ್ನು ನಿರ್ಮಿಸಿಕೊಂಡು ಸುಖವಾಗಿರಬಹುದೆಂದು ನಿರ್ಧರಿಸಿದರು.

ವೀರ ಕಂಪಿಲದೇವನು ತನ್ನ ಪರಿವಾರ ಸಮೇತನಾಗಿ ಹೊಸಮಲೆ ಅರಣ್ಯದಲ್ಲಿ ಹಟ್ಟಿಯನ್ನು ಕಟ್ಟಿಕೊಂಡು ನೆಲೆಸಿದನು. ಕಣಿವೆಗಳಲ್ಲಿ ಕಾದಿದ್ದು ಅಲ್ಲಿ ಬರುವ ಪ್ರಯಾಣಿಕರನ್ನು ಅಡ್ಡಗಟ್ಟಿ ಸುಲಿಗೆ ಮಾಡುವುದು, ಊರು, ಗ್ರಾಮಗಳನ್ನು ಮುತ್ತಿ ಐಶ್ವರ್ಯವಂತರನ್ನು ಬಡಿದು ಧನಕನಕ ವಸ್ತ್ರಗಳನ್ನು ಅಪಹಾರ ಮಾಡುವುದು ಇವನ ನಿತ್ಯ ಜೀವನದ ಕಸುಬಾಯಿತು. ಕಾಲಕ್ರಮದಲ್ಲಿ ಬೇಡ ಪಡೆಯೊಂದನ್ನು ಸೇರಿಸಿ ಕೆಲವು ಗ್ರಾಮಗಳಿಗೆ ಒಡೆಯನಾಗಿ ರಾಜನೆಂದು ಪಟ್ಟಾಭಿಷೇಕ ಮಾಡಿಸಿಕೊಂಡನು. ರಾಜ್ಯವು ದಿನದಿನಕ್ಕು ಅಭಿವೃದ್ಧಿಯನ್ನು ಹೊಂದುತ್ತಿರಲು

ಶತ್ರುಗಳಿಗೆ ಅಭೇದ್ಯವಾದ ಕೋಟೆಯನ್ನು ನಿರ್ಮಿಸುವುದು ಅವಶ್ಯಕವಾಯಿತು. ತಾನು ಕಟ್ಟಿದ ಹಟ್ಟಿಗೆ ಬದಲಾಗಿ ಅಲ್ಲಿಯೇ ಹೊಸಮಲೆ ದುರ್ಗವೆಂಬ ಕೋಟೆಯನ್ನು ನಿರ್ಮಿಸಿದನು. ಈ ಕೋಟೆಯನ್ನು ನಿರ್ಮಿಸಿ ಗುತ್ತಿಯ ಜಗದಪ್ಪರಾಯ, ಹಳೆಯಬೀಡಿನ ಬಲ್ಲಾಳರಾಯ ಮತ್ತು ದೆಹಲಿಸುಲ್ತಾನ ಇವರಿಗೆ ಕಪ್ಪವನ್ನು ಕೊಡುತ್ತಾ ಸಾಮಂತನಾಗಿ ರಾಜ್ಯವಾಳುತ್ತಿದ್ದನು ಎಂದು ನಾಗಸಂಗಯ್ಯನ ಸಾಂಗತ್ಯ ತಿಳಿಸುತ್ತದೆ.

**ಕೋಟೆಯ ಲಕ್ಷಣಗಳು**

ಹೊಸಮಲೆ ದುರ್ಗ ಅಥವಾ ರಾಮನಮಲೆ ಕೋಟೆಯು ಬೆಟ್ಟದ ಮೇಲೆ ಸಮುದ್ರ ಮಟ್ಟಕ್ಕಿಂತ ೯೯೧ಕಿ.ಮೀ ಎತ್ತರದಲ್ಲಿರುವ ಸಮತಟ್ಟಾದ ಪ್ರದೇಶದಲ್ಲಿ ಕೋಟೆಯನ್ನು ಕಟ್ಟಿದೆ. ಈ ಕೋಟೆಯ ಕಾಲ ಕ್ರಿ.ಶ.೧೩-೧೪ನೇ ಶತಮಾನ. ಸಮತಟ್ಟಾದ ಪ್ರದೇಶದ ಅಂಚಿಗೆ ಹೊಂದಿಕೊಂಡಂತೆ ಕೋಟೆ ಕಟ್ಟಿರುವುದರಿಂದ ಹೊರಗೆ ಕಡಿದಾದ ಬೆಟ್ಟದ ಬದಿಗಳಿವೆ. ಆದುದರಿಂದ ಕಂದಕದ ಅವಶ್ಯಕತೆಯಿಲ್ಲ. ಕೋಟೆಯನ್ನು ದೊಡ್ಡ ಗಾತ್ರದ ಕಲ್ಲುಗಳಿಂದ ಕಟ್ಟಿದೆ. ಗಣಿಗಾರಿಕೆಯಿಂದ ಕೋಟೆಯು ಅಲ್ಲಲ್ಲಿ ಹಾಳಾಗಿದೆ. ಕೋಟೆಗೆ ನಾಲ್ಕು ಬಾಗಿಲುಗಳಿದ್ದು, ರಾಮಸ್ವಾಮಿ ದೇವಾಲಯದ ಆಗ್ನೇಯಕ್ಕಿರುವುದೇ ಅತಿ ದೊಡ್ಡ ಬಾಗಿಲು. ಈ ಬಾಗಿಲಿನ ಪ್ರವೇಶದ್ವಾರವು 'ಐ' ಆಕಾರದಲ್ಲಿದೆ.

ದಕ್ಷಿಣದಿಂದ ಉತ್ತರಕ್ಕೆ ಸಾಗಿ ಮುಂದೆ ಪಶ್ಚಿಮದೆಡೆಗೆ ತಿರುಗುತ್ತದೆ. ಅದೇ ದೇವಾಲಯದ ಪೂರ್ವಕ್ಕೆ ಶಿಥಿಲಾವಸ್ಥೆಯಲ್ಲಿರುವ ಕವಣೆಕಲ್ಲು ಬಾಗಿಲಿದೆ. ಕೋಟೆಯೊಳಗೆ ಬಾಗಿಲ ಬಳಿಯಲ್ಲಿ ಕವಣೆಕಲ್ಲುಗಳ ದೊಡ್ಡ ರಾಶಿಯಿದೆ. ಈ ಕಲ್ಲುಗಳನ್ನು ಕವಣೆಯಿಂದ ವೈರಿಯ ಮೇಲೆ ಎಸೆಯಲಾಗುತ್ತಿತ್ತು. ಬಾಗಿಲ ಹೊರಗೆ ಇಂತಹ ಕಲ್ಲುಗಳು ಅಲ್ಲಲ್ಲಿ ಚದುರಿದಂತೆ ಬಿದ್ದಿವೆ. ಅದೇ ದೇವಾಲಯದ ಉತ್ತರಕ್ಕೆ ೧.೧೦.ಮೀ ಅಗಲವಿರುವ ಚಿಕ್ಕ ಬಾಗಿಲಿದೆ ಮತ್ತು ಅದೇ ದೇವಾಲಯದ ದಕ್ಷಿಣಕ್ಕೆ ಶಿಥಿಲಾವಸ್ಥೆಯಲ್ಲಿರುವ ನಾಲ್ಕನೆಯ ಬಾಗಿಲಿದೆ.

ರಾಮಸ್ವಾಮಿ ದೇವಾಲಯದ ನೈರುತ್ಯಕ್ಕೆ ಒಂದು ಚಿಕ್ಕ ಪ್ರದೇಶದಲ್ಲಿ ಕಟ್ಟಡಗಳ ಅವಶೇಷಗಳು ಮಣ್ಣಲ್ಲಿ ಊತು ಹೋಗಿವೆ. ಅವುಗಳ ಗೋಡೆಗಳ ದಪ್ಪ ಮತ್ತು ಉದ್ದವನ್ನು ಗಮನಿಸಿದಾಗ ಅರಮನೆಯಂತಹ ಕಟ್ಟಡಗಳಿಗೆ ಸಂಬಂಧಿಸಿದವುಗಳಂತೆ ಕಾಣುತ್ತವೆ. ಇಲ್ಲಿ ಕಂಪಿಲರಾಯನ ಅರಮನೆ ಇತ್ತೆಂದು ಹೇಳಲಾಗುತ್ತದೆ. ಬೆಟ್ಟದ ಮೇಲೆ ಅಲ್ಲಲ್ಲಿ ನೈಸರ್ಗಿಕವಾಗಿ

ತಗ್ಗಾಗಿರುವ ಪ್ರದೇಶಗಳನ್ನು, ನೀರನ್ನು ಸಂಗ್ರಹಿಸಲು ಕೊಳ್ಳಗಳನ್ನಾಗಿ ಪರಿವರ್ತಿಸಲಾಗಿದೆ. ಇವುಗಳನ್ನು ಕೊಳ್ಳಗಳೆಂದು ಕರೆಯಲಾಗುತ್ತಿದೆ.

ಕೋಟೆಯೊಳಗೆ ರಾಮಸ್ವಾಮಿ ದೇವಾಲಯ, ಆಂಜನೇಯ ದೇವಾಲಯ ತಾಯಮ್ಮ ದೇವಾಲಯ ಮತ್ತು ಹುಲಿಮಾನಪ್ಪನ ಮಠಗಳಿವೆ. ರಾಮಸ್ವಾಮಿ (ರಾಮನಾಥ) ದೇವಾಲಯವನ್ನು ಗೋಪಾಯಿ ಮತ್ತು ಇತರರು ಕುಮಾರರಾಮನ (ರಾಮನಾಥ-ವೊಡೆಯನ) ನೆನಪಿಗೆ ಕಟ್ಟಿಸಿದರೆಂದು ದೇವಾಲಯದ ಮುಂದಿನ ಕ್ರಿ.ಶ.೧೫೨೮ರ ಶಾಸನವು ತಿಳಿಸುತ್ತದೆ. ೧೬ನೇ ಶತಮಾನದಲ್ಲಿ ನಿರ್ಮಾಣಗೊಂಡ ಈ ದೇವಾಲಯವು ಇತ್ತೀಚಿನ ವರ್ಷಗಳಲ್ಲಿ ಸಂಪೂರ್ಣ ಜೀರ್ಣೋದ್ಧಾರಗೊಂಡು ಆಧುನಿಕ ದೇವಾಲಯದಂತೆ ಕಾಣುತ್ತದೆ.

ಪ್ರಸ್ತುತವಾಗಿ ಈ ಹೊಸಮಲೆ ದುರ್ಗವು ರಾಮನಮಲೆ ದುರ್ಗ ಅಥವಾ ರಾಮನಮಲೆ ಎಂದು ಕರೆಯಲ್ಪಡುತ್ತಿದೆ. ಈಗ ಇದು ಗುರುತೂ ಇಲ್ಲದಂತೆ ಹಾಳಾಗಿದೆ. ಎಲ್ಲಿತ್ತೆಂಬುದನ್ನು ಕಂಡುಹಿಡಿಯಲು ಕಷ್ಟವಾಗಿದೆ. ಇದರ ಉತ್ತರ ಅಕ್ಷಾಂಶ ೧೫೦°-೧೦° ಪೂರ್ವ ರೇಖಾಂಶ ೭೬°-೨೦°ರಲ್ಲಿದೆ. ಈ ಹೊಸಮಲೆ ದುರ್ಗವು ಕುಮ್ಮಟ ದುರ್ಗದಂತೆ ರಾಜಧಾನಿಯಾಗಿ ಮೆರೆದ ಸ್ಥಳ. ಈ ಪರಿಸರ ಬೆಟ್ಟ, ಗುಡ್ಡ, ಅರಣ್ಯಗಳಿಂದ ಕೂಡಿದೆ. ಪಶ್ಚಿಮದಲ್ಲಿ ಬಯಲು ಪ್ರದೇಶ ಹಾಗೂ ತುಂಗಭದ್ರ ನದಿ ಪ್ರವಹಿಸುತ್ತಿದೆ.

ಈ ಪ್ರದೇಶದಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳು ಹೇರಳವಾಗಿ ಲಭ್ಯವಿದೆ. ಲಭ್ಯವಿರುವ ಕಬ್ಬಿಣದ ಅಂಶಗಳನ್ನು ಒಳಗೊಂಡ ಕಲ್ಲುಗಳನ್ನು ಕೋಟೆ, ನೀರಿನ ಕೊಳಗಳ ನಿರ್ಮಾಣಕ್ಕಾಗಿ ಉಪಯೋಗಿಸಿದ ಉದಾಹರಣೆಗಳಿವೆ. ಮುಮ್ಮಡಿ ಸಿಂಗನ ಕಾಲಕ್ಕೆ ಈ ಪರಿಸರವು ಆಳ್ವಿಕೆಗೆ ಒಳಪಟ್ಟಿದ್ದರೂ, ಮುಂದೆ ಕಂಪಿಲರಾಯನ ಕಾಲಕ್ಕೆ ಈ ಹೊಸಮಲೆದುರ್ಗವು ರಾಜಧಾನಿಯಾಗಿ ಪ್ರಸಿದ್ಧಿ ಪಡೆದಿತ್ತು. ಅಷ್ಟೇ ಅಲ್ಲದೆ ಈ ಕುಮ್ಮಟ ದುರ್ಗದಲ್ಲಿಯ ಹಾಗೂ ಹೊಸಮಲೆ ದುರ್ಗಗಳಲ್ಲಿಯ ಸ್ಮಾರಕಗಳ ಅಧ್ಯಯನವು, ಕಂಪಿಲನು ಸಾಮಾನ್ಯ ದೊರೆಯಾಗಿರಲಿಲ್ಲ ಎಂಬುದನ್ನು ಸಮರ್ಥಿಸುತ್ತದೆ.

**ಬೊಮ್ಮಗಟ್ಟ ಕೋಟೆ**

ಸಂಡೂರಿನಿಂದ ಸು.೪೦ಕಿ.ಮೀ ಅಂತರದಲ್ಲಿರುವ ಬೊಮ್ಮಗಟ್ಟ ಗ್ರಾಮದಲ್ಲಿ ಸ್ಥಳೀಯರು ತಿಳಿಸುವಂತೆ, ನರಸಿಂಗರಾಯನ ಕಾಲದಲ್ಲಿ ಕಟ್ಟಲ್ಪಟ್ಟ ಕೋಟೆಯೆಂದು ತಿಳಿಸುವ ಕೋಟೆಯ

ಅವಶೇಷಗಳು ಈ ಗ್ರಾಮದಲ್ಲಿ ಇಂದಿಗೂ ಇವೆ. ಈ ಗ್ರಾಮದಲ್ಲಿ ದೊರೆತ ಕೂಟ ತಾಮ್ರಶಾಸನದ ಉಲ್ಲೇಖದಂತೆ ವಿಜಯನಗರದ ಅರಸ ಸಾಳ್ವನರಸಿಂಗರಾಯನ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತ್ತೆಂದು ತಿಳಿದುಬರುತ್ತದೆ. ಈ ನರಸಿಂಗರಾಯ ವಿಜಯನಗರ ಅರಸ ಸಾಳ್ವನರಸಿಂಗ ರಾಯನೆ? ಅಥವಾ ಯಾರಾದರೊಬ್ಬ ಪಾಳೆಯಗಾರನೆ? ಎಂಬ ಬಗ್ಗೆ ಖಚಿತವಾದ ಮಾಹಿತಿ ದೊರೆಯುವುದಿಲ್ಲ. ಆದರೆ ಈ ಕೋಟೆ ನಿರ್ಮಿಸಿರುವ ಲಕ್ಷಣಗಳನ್ನು ಗಮನಿಸಿದರೆ ಹಿಂದೆ ಈ ಪ್ರದೇಶವನ್ನು ಆಳಿದ ಜರಿಮಲೆ ಪಾಳೆಗಾರರೇ ಈ ಕೋಟೆಯನ್ನು ನಿರ್ಮಿಸಿರುವ ಸಾಧ್ಯತೆ ಇದ್ದು, ಈ ನರಸಿಂಗರಾಯನೆಂಬುವನು ಅವರಿಗೆ ಅಧೀನನಾಗಿ ಈ ಕೋಟೆಯ ಪ್ರದೇಶವನ್ನು ಆಳಿರಬೇಕೆಂದು ಊಹಿಸಬಹುದಾಗಿದೆ.

**ಕೋಟೆಯ ಲಕ್ಷಣಗಳು**

ಈ ಕೋಟೆಯ ಹಿಂದೆ ಸು.೨೫ ಅಡಿ ಎತ್ತರವಿತ್ತೆಂದು ಸ್ಥಳೀಯರು ಹೇಳುತ್ತಾರೆ. ಆದರೆ ಈಗ ಶಿಥಿಲವಾಗಿರುವ ಕೋಟೆಯ ಗೋಡೆಯ ಉದ್ದ ಸು.೫ ರಿಂದ ೬ ಅಡಿ ಎತ್ತರ ಮಾತ್ರ ಇದೆ. ಈ ಪ್ರದೇಶವು ಸುಮಾರು ಎರಡು-ಮೂರು ಎಕರೆ ವಿಸ್ತಾರದ ವ್ಯಾಪ್ತಿಯನ್ನು ಒಳಗೊಂಡಿದೆ. ಈ ಕೋಟೆಯ ಪ್ರವೇಶದ್ವಾರ ಉತ್ತರ ದಿಕ್ಕಿಗೆ ಇದೆ. ದಕ್ಷಿಣಕ್ಕೆ ಕೋಟೆಯ ಹಿಂದಿನ ಬಾಗಿಲು ಇದೆ. ಕಳ್ಳಕಿಂಡಿಯು ಇದೆ. ಈ ಕೋಟೆಯಲ್ಲಿ ಇಂದು ಶಿಥಿಲಾವಸ್ಥೆಯಲ್ಲಿರುವ ಎರಡು ಬುರುಜುಗಳು ಮಾತ್ರ ಉಳಿದಿವೆ. ಪ್ರವೇಶದ್ವಾರದ ಬಳಿ ಬುಡ್ಡೆಕಲ್ಲು, ಯಂತ್ರಕಲ್ಲುಗಳಿವೆ. ಕೋಟೆಯ ಸುತ್ತಲು ಜಲಾವೃತ್ತಗೊಂಡ ಕಂದಕವಿದೆ. ಇದನ್ನು ನಿರ್ಮಿಸಲು ಕಾಡುಕಲ್ಲನ್ನು ಬಳಸಲಾಗಿದೆ. ಇದರ ಒಳಗೆ ಪ್ರವೇಶದ್ವಾರದ ಮುಂದೆಯೇ ನ್ಯಾಯ ಪಂಚಾಯಿತಿಗಳನ್ನು ಜರುಗಿಸುವ ಸಲುವಾಗಿ ನಿರ್ಮಿಸಿದ ಛಾವಡಿ ಇದ್ದು. ಈಗ ಪಾಳು ಬಿದ್ದಿದೆ.

ಹಿಂದೆ ಈ ಕೋಟೆಯಲ್ಲಿ ಗುಡೇಕೋಟೆ ಪಾಳೆಗಾರರು ಮದ್ದುಗುಂಡುಗಳನ್ನು ಸಂಗ್ರಹಿಸಿಡುತ್ತಿದ್ದರೆಂದು ತಿಳಿದುಬರುತ್ತದೆ. ಕೋಟೆಯ ಮುಂದೆ ಆಂಜನೇಯನ ದೇವಾಲಯ ಇರುವುದರಿಂದ ಅದಕ್ಕೆ ಈಗಲೂ ಊರ ಮುಂದಿನರಾಯ ಎಂದು ಕರೆಯುತ್ತಾರೆ. ಪ್ರಸ್ತುತವಾಗಿ ಸ್ಥಳೀಯರು ಇರುವ ಕೋಟೆಯನ್ನು ಬೀಳಿಸಿ ಮನೆಗಳನ್ನು ನಿರ್ಮಿಸಿಕೊಂಡಿರುವುದರಿಂದ ಈ ಗ್ರಾಮದಲ್ಲಿ ಕೋಟೆ ಇದೆ ಎಂಬುದು ಬಹುಬೇಗ ಗಮನಕ್ಕೆ ಬರುವುದಿಲ್ಲ. ಆದರೆ ಇಲ್ಲಿ ಕಾಣಸಿಗುವ ಕೋಟೆಯ ಶಿಥಿಲಾವಸ್ಥೆಯಲ್ಲಿರುವ ಗೋಡೆ, ಬುರುಜು, ಕಂದಕ, ಛಾವಡಿ, ಬುಡ್ಡೆಕಲ್ಲು, ಯಂತ್ರಕಲ್ಲು ಇತ್ಯಾದಿ ಕೋಟೆಯ ಅವಶೇಷಗಳ ಆಧಾರದಿಂದ ಇಲ್ಲಿ ಕೋಟೆ ಇದೆ

ಎಂದು ತಿಳಿದುಬರುವುದು. ಆದರೆ ಮುಂಬರುವ ದಿನಗಳಲ್ಲಿ ಇದರ ಅವಶೇಷಗಳು ಸಹ ಕಾಣಸಿಗದಂತೆ ಆಗುವುದರಲ್ಲಿ ಸಂದೇಹವಿಲ್ಲ.

**ತಿಮ್ಮಪ್ಪನ ಬೆಟ್ಟದ ಕೋಟೆ**

ಈ ಕೋಟೆಯು ಸಂಡೂರಿನಿಂದ-ಬಳ್ಳಾರಿಗೆ ಹೋಗುವ ಮಾರ್ಗ ಮಧ್ಯದಲ್ಲಿ ಅಂದರೆ ಸಂಡೂರಿನಿಂದ ೧೫ಕಿ.ಮೀ ಅಂತರದ ಬೆಟ್ಟದ ತುದಿಯಲ್ಲಿ ಈ ಕೋಟೆಯು ಕಾಣಸಿಗುತ್ತದೆ. ಇದು ತಿಮ್ಮಪ್ಪನ ದೇವಾಲಯದಿಂದ ಸ್ವಲ್ಪ ದೂರ ಕಾಲು ದಾರಿಯಿಂದ ಸಾಗಿದರೆ ಈ ಕೋಟೆ ಇದೆ. ಈ ದೇವಾಲಯದ ಬಳಿ ಈ ಕೋಟೆ ಇರುವುದರಿಂದ ಇದಕ್ಕೆ ತಿಮ್ಮಪ್ಪನ ಬೆಟ್ಟದ ಕೋಟೆ ಎಂದು ಕರೆಯುತ್ತಾರೆ. ಪ್ರಸ್ತುತವಾಗಿ ಈ ಕೋಟೆ ಇರುವ ಪ್ರದೇಶವನ್ನು (ಬೆಟ್ಟವನ್ನು) ಜಿಂದಾಲ್ ಕಾರ್ಖಾನೆಯವರು ಕಾಂಟ್ರ್ಯಾಕ್ಟ್ ಪಡೆದಿದ್ದಾರೆ.

**ಕೋಟೆಯ ಲಕ್ಷಣಗಳು**

ಈ ಕೋಟೆಯು ಸು.೨.ಕಿ.ಮೀ ವಿಸ್ತಾರವಾದ ವ್ಯಾಪ್ತಿಯನ್ನು ಒಳಗೊಂಡಿದೆ. ಈ ಕೋಟೆ ಗೋಡೆಯು ಶಿಥಿಲವಾಗಿದ್ದು, ಉಳಿದ ಕೋಟೆಯ ಎತ್ತರ ಸು.೬.ಅಡಿ ಇದೆ. ಪ್ರವೇಶದ್ವಾರವು ಪೂರ್ವ ದಿಕ್ಕಿಗಿದ್ದು ಸಂಪೂರ್ಣವಾಗಿ ಶಿಥಿಲವಾಗಿದೆ. ಈ ಕೋಟೆಯು ಶಿಥಿಲಗೊಂಡ ೭ ಬತೇರಿಗಳನ್ನು ಒಳಗೊಂಡಿದೆ. ಕೋಟೆ ಗೋಡೆಯಲ್ಲಿ ತುಪಾಕಿಯಿಂದ ಗುಂಡುಗಳನ್ನು ಹಾರಿಸುವ ಸಲುವಾಗಿ ಕಿಂಡಿಗಳನ್ನು ಬಿಡಲಾಗಿದೆ. ಕೋಟೆಯ ಒಳಗೆ ಎರಡು ಹೊಂಡಗಳನ್ನು ನಿರ್ಮಿಸಲಾಗಿದೆ. ಒಂದು ಹೊಂಡ ಒಬ್ಬ ಆಳಿನಷ್ಟು ಆಳವನ್ನೊಂದಿದೆ. ಮತ್ತೊಂದು ಸು.೨೦ಅಡಿ ಆಳವನ್ನು ಹೊಂದಿದೆ. ಎರಡು ನೈಸರ್ಗಿಕವಾಗಿ ನಿರ್ಮಿತವಾದ ಬಾವಿಗಳಿವೆ.

ಈ ಕೋಟೆಯು ಇರುವ ಪ್ರದೇಶವು ಕಬ್ಬಿಣದ ಅದಿರನ್ನು ಒಳಗೊಂಡಂತ ಬೆಟ್ಟವಾಗಿರುವುದರಿಂದ ಇದನ್ನು ನಿರ್ಮಿಸಲು ಸ್ಥಳೀಯವಾಗಿ ದೊರೆಯುವ ಕಬ್ಬಿಣದ ಕಲ್ಲುಗಳನ್ನೇ ಬಳಸಿ ಕಟ್ಟಲ್ಪಟ್ಟಿದೆ. ಈ ಕೋಟೆಯು ಬೆಟ್ಟದ ತುದಿಯಲ್ಲಿದ್ದು ಸಾಮಾನ್ಯವಾಗಿ ಯಾರ ಗಮನಕ್ಕೂ ಬಾರದಿರುವುದರಿಂದ ಹಾಗೂ ಇಲ್ಲಿಯೇ ಗಣಿಗಾರಿಕೆ ನಡೆಯುತ್ತಿರುವುದರಿಂದ ಮುಂಬರುವ ದಿನಗಳಲ್ಲಿ ಇಲ್ಲಿ ಕೋಟೆ ಇತ್ತು ಎಂದು ಹೇಳಲೂ ಸಹ ಕೋಟೆಯ ಅವಶೇಷಗಳು ಇರುವುದಿಲ್ಲ ಎಂಬುದರಲ್ಲಿ ಸಂದೇಹವಿಲ್ಲ.

**ಕೃಷ್ಣಾನಗರ ಕೋಟೆ**

ಕೃಷ್ಣಾನಗರವು ಸಂಡೂರಿನಿಂದ ಸುಮಾರು ೨ಕಿ.ಮೀ ಅಂತರದಲ್ಲಿದ್ದು, ಇಂದು ಸಂಡೂರು ನಗರಕ್ಕೆ ಹೊಂದಿಕೊಂಡಿದೆ. ಸಂಡೂರಿನಿಂದ ಬಳ್ಳಾರಿಗೆ ಹೋಗುವ ಮಾರ್ಗದಲ್ಲಿ ಈ ಗ್ರಾಮ ಕಾಣಸಿಗುತ್ತದೆ. ಸಂಡೂರಿನ ಪೂರ್ವಕ್ಕೆ ಈ ಗ್ರಾಮವಿದೆ. ಕೃಷ್ಣಾನಗರದ ಕೋಟೆಯನ್ನು ಹೈದರಾಲಿಯು ಸಂಡೂರಿನ ಮುರಾರಿರಾವ ಘೋರ್ಪಡೆಯನ್ನು ಸೋಲಿಸಿದ ನಂತರ ಕ್ರಿ.ಶ.೧೭೭೬ರಲ್ಲಿ ನಿರ್ಮಿಸಲು ಆರಂಭಿಸಿದನು. ಮುಂದೆ ಟಿಪ್ಪು ಸುಲ್ತಾನನು ಇದನ್ನು ಕ್ರಿ.ಶ.೧೭೯೨ರಲ್ಲಿ ಪೂರ್ಣಗೊಳಿಸಿದನು.

**ಕೋಟೆಯ ಲಕ್ಷಣಗಳು**

ಚೌಕಾಕಾರದ ಈ ಕೋಟೆಯನ್ನು ನಿರ್ಮಿಸಲು ಮಧ್ಯಮ ಗಾತ್ರದ ಕಲ್ಲು ಮತ್ತು ಗಾರೆಯನ್ನು ಬಳಸಲ್ಪಟ್ಟಿದೆ. ಕೋಟೆಯ ಮೇಲ್ಭಾಗದಲ್ಲಿಯ ಕೈಪಿಡಿ ಗೋಡೆಯನ್ನು ಇಟ್ಟಿಗೆ, ಗಾರೆಯನ್ನು ಬಳಸಿ ನಿರ್ಮಿಸಲ್ಪಟ್ಟಿದೆ. ಕೋಟೆಯ ಪೂರ್ವದಿಕ್ಕಿನ ಗೋಡೆಯ ಮಧ್ಯದಲ್ಲಿ ದೊಡ್ಡ ಬಾಗಿಲು ಮತ್ತು ದಕ್ಷಿಣ ದಿಕ್ಕಿನ ಗೋಡೆಯ ಮಧ್ಯದಲ್ಲಿ ಚಿಕ್ಕ ದಿಡ್ಡಿ ಬಾಗಿಲು ಇವೆ. ಕೋಟೆಯ ಸುತ್ತಲು ಹದಿನೈದು ವೃತ್ತಾಕಾರದ ಬುರುಜುಗಳಿವೆ. ಅವುಗಳಲ್ಲಿ ನಾಲ್ಕು ಮೂಲೆಗಳಲ್ಲಿರುವ ಬುರುಜುಗಳು ದೊಡ್ಡದಾಗಿವೆ. ಕೋಟೆಯ ಸುತ್ತಲು ಸುಮಾರು ಮೂವತ್ತೈದು ಅಡಿ ಅಗಲ ಮತ್ತು ಇಪ್ಪತ್ತು ಅಡಿ ಆಳವಾದ ಕಂದಕವಿದೆ.

ಪೂರ್ವದಿಕ್ಕಿನ ಬಾಗಿಲಿನ ಮುಂದೆ ಗೋಡೆಗಳನ್ನು ಕಟ್ಟಿ ಎರಡು ಆವರಣಗಳನ್ನು ನಿರ್ಮಿಸಿ, ಮೂರು ಬಾಗಿಲುಗಳ ಮೂಲಕ ಪ್ರವೇಶವನ್ನು ಒದಗಿಸಲಾಗಿದೆ. ಕೋಟೆ ಗೋಡೆಯಲ್ಲಿ ಪೂರ್ವಾಭಿಮುಖವಾಗಿ ಇರುವ ಒಳಬಾಗಿಲಿನ ಪಕ್ಕದಲ್ಲಿನ ಎರಡು ಬದಿಯಿಂದ ಮುಂದೆ ಪೂರ್ವಕ್ಕೆ ಚಾಚಿದ ಗೋಡೆಗಳ ಮಧ್ಯದಲ್ಲಿ ಉತ್ತರ ದಕ್ಷಿಣವಾಗಿರುವ ಮತ್ತೊಂದು ಗೋಡೆಯನ್ನು ಕಟ್ಟಿ ಒಳ ಆವರಣವನ್ನು ನಿರ್ಮಿಸಿದೆ. ಇದರ ಹೊರಗೆ ಮೊದಲ ಕೋಟೆ ಗೋಡೆಯಿಂದ ಅದೇ ರೀತಿ ಮುಂದೆ ಚಾಚಿದ ಗೋಡೆಗಳ ದೊಡ್ಡ ಹೊರ ಆವರಣದ ಪೂರ್ವದಿಕ್ಕಿಗೆ ಮಧ್ಯಭಾಗದಲ್ಲಿ ಬಾಗಿಲು ಮತ್ತು ಮೂಲೆಗಳಲ್ಲಿ ಬುರುಜುಗಳಿವೆ.

ಸರಳವಾದ ಈ ಬಾಗಿಲಿನ ಮೇಲೆ ದುಂಡನೆಯ ಕಮಾನಿದೆ. ಮೇಲಿನ ಕೈಪಿಡಿ ಗೋಡೆಯಲ್ಲಿ ಚಿಕ್ಕ ಕಮಾನುಗಳು ಮತ್ತು ಮಿನರೆಟ್‌ಗಳಿವೆ. ಈ ಆವರಣದ ಗೋಡೆ ಹೆಚ್ಚು ಎತ್ತರವಿಲ್ಲ. ಇಟ್ಟಿಗೆ ಮತ್ತು ಗಾರೆಯ ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ.

ಬಾಗಿಲಿನ ಈಶಾನ್ಯಕ್ಕಿರುವ ಬುರುಜಿನ ಮೇಲೆ ಮೂರು ತೋಪು ಸಂಧಿಗಳಿವೆ. ಆಗ್ನೇಯಕ್ಕಿರುವ ಬುರುಜು ಶಿಥಿಲವಾಗಿದೆ. ಒಳ ಆವರಣದ ಉತ್ತರ ಗೋಡೆಯ ಮಧ್ಯದಲ್ಲಿ ಬಾಗಿಲು ಮತ್ತು ಮೂಲೆಗಳಲ್ಲಿ ಬುರುಜುಗಳು ಇವೆ. ಈ ಆವರಣದ ಗೋಡೆ ಸು.೨೫ ಅಡಿ ಎತ್ತರವಾಗಿದೆ. ದೊಡ್ಡದಾಗಿರುವ ಬಾಗಿಲ ತೋಳಿನ ಮಧ್ಯಭಾಗದಲ್ಲಿ ಉಬ್ಬಿದ ಪಟ್ಟಿ ಮತ್ತು ಕೆಳ ಮೂಲೆಯಲ್ಲಿ ಮುಂದೆ ಚಾಚಿದ ಪುಷ್ಪದಳ ಇವೆ. ಮೇಲೆ ಎರಡು ಬೋದಿಗೆಗಳಿವೆ. ಕೆಳಗಿನ ಬೋದಿಗೆ ಬಾಳೆಯ ಮೊಗ್ಗಿನ ಆಕಾರದಲ್ಲಿದೆ. ಮೇಲಿನದು ಚೌಕಾಕಾರದ ಪುಷ್ಪ ಮತ್ತು ಆನೆಯ ಸೊಂಡಿಲಿನಿಂದ ಹೊರಬಂದ ಬಾಳೆಯ ಮೊಗ್ಗಿನ ಆಕಾರದಲ್ಲಿದೆ.

ತೋಳುಗಳಂತೆಯೇ ಇರುವ ಬಾಗಿಲ ಉತ್ತರಂಗದ ತುದಿಗಳಲ್ಲಿ ಚೌಕಾಕಾರದ ಪುಷ್ಪಗಳಿವೆ. ಈ ಬಾಗಿಲ ಪಕ್ಕದಲ್ಲಿ ಒಂದು ಚಿಕ್ಕ ಉಪ ಬಾಗಿಲಿನ ಚೌಕಟ್ಟು ಮುಖ್ಯ ಬಾಗಿಲಿನ ಚೌಕಟ್ಟಿನಂತೆಯೇ ಇದೆ. ಆದರೆ ಇದರಲ್ಲಿ ಬೋದಿಗೆಗಳಿಲ್ಲ. ಪ್ರವೇಶದ ಪಾರ್ಶ್ವಗಳಲ್ಲಿಯ ಕಟ್ಟೆಗಳನ್ನು ಮೂರು ರಂಗಗಳಿಂದ ನಿರ್ಮಿಸಿದೆ. ಕಟ್ಟೆಗಳ ಮೇಲಿನ ಕಂಬಗಳಲ್ಲಿ ಮೂರು ಚೌಕ ಮತ್ತು ಎರಡು ಅಷ್ಟಭುಜಾಕೃತಿಯ ಭಾಗಗಳಿವೆ. ಕಂಬಗಳ ಮೇಲೆ ಸುರುಳಿಯಾಕಾರದ ಬೋದಿಗೆಗಳಿವೆ. ಒಳಭಾಗದಲ್ಲಿ ಬಾಗಿಲ ಮೇಲಿರುವ ಕೈಪಿಡಿ ಗೋಡೆಯಲ್ಲಿ ಕಂಗುರ(ತೆನೆ) ಮಿನರೆಟ್ ಮತ್ತು ಇಟ್ಟಿಗೆಗಳನ್ನು ಜೋಡಿಸಿ ಮಾಡಿದ ಪುಷ್ಪ ವಿನ್ಯಾಸದ ಜಾಲಂಧ್ರದಂತಹ ವಿನ್ಯಾಸಗಳಿವೆ. ಬಾಗಿಲ ಹತ್ತಿರವಿರುವ ಬುರುಜುಗಳು ಶಿಥಿಲಾವಸ್ಥೆಯಲ್ಲಿವೆ. ಒಳ ಆವರಣದ ಗೋಡೆಯ ಮೇಲಿನಿಂದ ಪ್ರಧಾನ ಕೋಟೆ ಗೋಡೆಯ ಮೇಲೆ ಬರಲು ಎರಡು ಬದಿಯಿಂದ ದಾರಿಗಳಿವೆ. ಒಳ ಆವರಣದ ಎಲ್ಲ ಒಳ ಗೋಡೆಗಳ ಮೇಲಿನ ಕೈಪಿಡಿ ಗೋಡೆಯನ್ನು ತೆನೆಗಳಿಂದ ಅಲಂಕರಿಸಿದೆ.

ದಕ್ಷಿಣ ಗೋಡೆಯಲ್ಲಿ ಕಾವಲುಗಾರರ ನಾಲ್ಕು ಗೂಡುಗಳಿವೆ. ಪ್ರಧಾನ ಕೋಟೆ ಗೋಡೆಯಲ್ಲಿ ಇರುವುದೇ ಕೊನೆಯ ಅಥವಾ ಒಳಬಾಗಿಲು, ದೊಡ್ಡದಾಗಿರುವ ಈ ಬಾಗಿಲಿಗೆ ಎರಡು ಬಾಗಿಲ ಚೌಕಟ್ಟುಗಳಿವೆ. ಒಳ ಚೌಕಟ್ಟಿನ ತೋಳಿನ ಒಳ ಬದಿಯನ್ನು ಆನೆಯ ಸೊಂಡಿಲಿನಿಂದ ಹೊರಬಂದ ತೋರಣದಿಂದ, ಮೂಲೆಯನ್ನು ಪುಷ್ಪದಳಗಳಿಂದ ಮತ್ತು

ಹೊರಬದಿಯನ್ನು ವ್ಯಾಳದಿಂದ ಹೊರಬಂದ ಬಳ್ಳಿ ಸುರುಳಿಗಳಿಂದ ಅಲಂಕರಿಸಲಾಗಿದೆ. ಹೊರ ಚೌಕಟ್ಟಿನ ತೋಳನ್ನು ವಜ್ರಾಕೃತಿಯ ವಿನ್ಯಾಸದಿಂದ ಮತ್ತು ಕುಂಭದಿಂದ ಹೊರಬಂದ ಬಳ್ಳಿ ಸುರುಳಿಗಳಿಂದ ಅಲಂಕರಿಸಿದೆ. ಬಾಗಿಲ ಒಳ ಬದಿಗೆ ಬಾಳೆಯ ಮೊಗ್ಗಿನ ಆಕಾರದ ಬೋದಿಗೆ ಮತ್ತು ಮುಂಭಾಗದಲ್ಲಿ ವ್ಯಾಳದ ಬಾಯಿಯಿಂದ ಹೊರ ಬಂದ ಬಾಳೆಯ ಮೊಗ್ಗಿನ ಆಕಾರದ ಬೋದಿಗೆಗಳಿವೆ. ಈ ಬಾಗಿಲ ಪಕ್ಕದಲ್ಲಿ ಒಂದು ಚಿಕ್ಕ ಉಪಬಾಗಿಲಿದೆ. ಉಪಬಾಗಿಲನ್ನು ನಾಲ್ಕು ಭಾಗಗಳಲ್ಲಿ ವಿಭಜಿಸಿದ ವಜ್ರಾಕೃತಿಯ ವಿನ್ಯಾಸಗಳಿಂದ ಅಲಂಕರಿಸಿದೆ.

ಎರಡು ಬಾಗಿಲುಗಳ ಮಧ್ಯದಲ್ಲಿ ಗೋಡೆಯ ಮೇಲೆ ಕಾಮನಿರತ ಮಾನವ ಮತ್ತು ಪ್ರಾಣಿಯ ಶಿಲ್ಪವಿದೆ. ಬಾಗಿಲ ಮೇಲಿನ ಕೈಪಿಡಿ ಗೋಡೆಯನ್ನು ಇಟ್ಟಿಗೆ ಗಾರೆಯ ಜಾಲಂಧ್ರದಿಂದ, ತೆನೆಗಳಿಂದ ಮತ್ತು ಮಿನರೆಟ್‌ಗಳಿಂದ ಅಲಂಕರಿಸಿದೆ. ಬಾಗಿಲಿನ ಒಂದು ಕದವು ಮಾತ್ರ ಉಳಿದಿದೆ. ಮರದ ಕದದ ಮೇಲೆ ಮರದಲ್ಲಿ ಮಾಡಿದ ಅಲಂಕಾರಿಕ ಉದ್ದ ಮತ್ತು ಅಡ್ಡ ಪಟ್ಟಿಗಳು ಮತ್ತು ಕಬ್ಬಿಣದ ಮೊಳೆಗಳ ಚೂಪಾದ ತಲೆಗಳಿವೆ. ಪ್ರವೇಶದ ಪಕ್ಕದಲ್ಲಿಯ ಕಟ್ಟೆಗಳ ಅಧಿಷ್ಠಾನವನ್ನು ಅಲಂಕೃತ ದಿಂಡುಗಳಿಂದ ನಿರ್ಮಿಸಿದೆ. ಕಂಠಭಾಗವನ್ನು ಮೀನುಗಳಿಂದ ಅಲಂಕರಿಸಿದೆ. ಕಟ್ಟೆಯ ಮೇಲಿನ ಕಂಬಗಳ ಕೆಳಗಿನ ಭಾಗ ಚೌಕಾಕಾರವಾಗಿದ್ದು, ಮೇಲ್ಭಾಗ ಅಷ್ಟಭುಜಾಕೃತಿಯಲ್ಲಿದೆ.

ಕಂಬದ ಗಾತ್ರ ಮೇಲೆ ಹೋದಂತೆ ಚಿಕ್ಕದಾಗುತ್ತದೆ. ಮೇಲೆ ಸುರುಳಿ ಬೋದಿಗೆಗಳಿವೆ. ಒಂದು ಅರೆಗಂಭದ ಮೇಲೆ ಕೈಮುಗಿದು ನಿಂತಿರುವ ಪುರುಷನ ಶಿಲ್ಪವಿದೆ. ಉತ್ತರ ಮತ್ತು ದಕ್ಷಿಣ ಗೋಡೆಗಳಲ್ಲಿ ದೊಡ್ಡ ಗೂಡುಗಳಿವೆ. ಬಾಗಿಲ ಒಳಬದಿಯ ಕಲ್ಲಿನ ಕೈಪಿಡಿ ಗೋಡೆಯನ್ನು ಕಮಾನುಗಳ ಉಬ್ಬು ಚಿತ್ರಗಳಿಂದ ಅಲಂಕರಿಸಿದೆ. ಕೋಟೆಯ ಒಳಭಾಗದಲ್ಲಿ ಬಾಗಿಲ ಎರಡು ಪಕ್ಕದಲ್ಲಿರುವ ಮೆಟ್ಟಿಲುಗಳ ಮೂಲಕ ಕೋಟೆಯ ಮೇಲೆ ಹತ್ತಲು ಅವಕಾಶವಿದೆ. ದಕ್ಷಿಣ ಗೋಡೆಯ ಮಧ್ಯದಲ್ಲಿರುವ ದಿಡ್ಡಿಯ ಚೌಕಟ್ಟಿನ ಕೆಳಗೆ ಉತ್ತರಂಗದ ಮಧ್ಯದಲ್ಲಿ ಮತ್ತು ತುದಿಗಳಲ್ಲಿ ಚೌಕಾಕಾರದ ಪುಷ್ಪ ವಿನ್ಯಾಸವಿದೆ. ಬಾಗಿಲ ಮೇಲ್ಭಾಗದಲ್ಲಿಯ ಮತ್ತೊಂದು ಉತ್ತರಂಗದ ಮಧ್ಯದಲ್ಲಿ ವೃತ್ತಾಕಾರದ ಪುಷ್ಪ ಮತ್ತು ಅದರ ಬದಿಗಳಲ್ಲಿ ಒಂದು ನವಿಲು ಮತ್ತು ಒಂದು ಪಾರಿವಾಳದ ಶಿಲ್ಪಗಳಿವೆ.

ಬುರುಜುಗಳ ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳು ಮತ್ತು ತೋಪಿಗಾಗಿ ಬಿಟ್ಟ ಸಂದಿಗಳಿವೆ. ಕೈಪಿಡಿ ಗೋಡೆಯು ಅಗಲವಾಗಿದ್ದು, ಹೊರಬದಿಗೆ ಇಳಿಜಾರಾಗಿದೆ. ಬುರುಜುಗಳ

ಮೇಲೆ ಕಾವಲುಗಾರರಿಗಾಗಿ ಮಾಡಿದ 'ಐ' ಆಕಾರದ ಚಿಕ್ಕ ಗೂಡುಗಳಿವೆ. ಕೆಲವು ಗೂಡುಗಳು 'ಗ' ಆಕಾರದಲ್ಲಿವೆ. ಪಶ್ಚಿಮ ದಿಕ್ಕಿನ ಕೋಟೆಯ ಮಧ್ಯದಲ್ಲಿಯ ಬುರುಜು ಬಹಳ ದೊಡ್ಡದಾಗಿದೆ. ಅದರ ಮೇಲೆ ಒಂದು ಬತೇರಿ ಮತ್ತು ಕೆಳಮಟ್ಟದಲ್ಲಿರುವ ಒಂದು ಕಟ್ಟಡ ಇವೆ. ಆಯತಾಕಾರದ ಈ ಕಟ್ಟಡವನ್ನು ಅದಕ್ಕಿಂತ ದೊಡ್ಡದಾಗಿ ತಗ್ಗಿನಲ್ಲಿ ಕಟ್ಟಿದೆ. ಕೆಳಗೆ ಇಳಿಯಲು ಎರಡು ಬದಿಗೆ ಮೆಟ್ಟಿಲುಗಳಿವೆ. ಎಂಟು ಕಂಬಗಳ ಕಟ್ಟಡದ ಮುಂಭಾಗದಲ್ಲಿ ಕಮಾನುಗಳಿವೆ. ಈಶಾನ್ಯ ದಿಕ್ಕಿನ ಬುರುಜಿನ ಹೊರ ಗೋಡೆಯ ಕಲ್ಲಿನ ಮೇಲೆ ಆಂಜನೇಯನ ಶಿಲ್ಪವಿದೆ. ಕೋಟೆಯ ಮೇಲೆ ಓಡಾಡಲು ಅಗಲವಾದ ದಾರಿಯಿದೆ. ಕೋಟೆ ಗೋಡೆಯಲ್ಲಿ ಬಂದೂಕು ಕಿಂಡಿಗಳು ಮತ್ತು ತೋಪು ಸಂಧಿಗಳಿವೆ. ಕೋಟೆಯ ಮೇಲೆ ತೋಪುಗಳನ್ನು ಒಯ್ಯುವ ಸಲುವಾಗಿ ಕೋಟೆಯ ನೈರುತ್ಯ ಮೂಲೆಯಲ್ಲಿ ದೊಡ್ಡ ಇಳಿ ವೋರೆ(ರ್‍ಯಾಂಪ್)ಯನ್ನು ನಿರ್ಮಿಸಿದೆ.

ಕೋಟೆಯೊಳಗೆ ನಾಲ್ಕು ಮೂಲೆಯಲ್ಲಿ ನಾಲ್ಕು ಆಯತಾಕಾರದ ಇಟ್ಟಿಗೆ ಗಾರೆಯ ಕಟ್ಟಡಗಳು ಮತ್ತು ಪೂರ್ವ ದಿಕ್ಕಿನ ಬಾಗಿಲಿನ ಹತ್ತಿರ ಒಂದು ಬಾವಿ ಇದೆ. ಆಯತಾಕಾರದ ಬಾವಿಗೆ ಉತ್ತರ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಪೂರ್ವ ಮತ್ತು ಪಶ್ಚಿಮ ಗೋಡೆಗಳಲ್ಲಿ ಪ್ರತಿಯೊಂದರಲ್ಲಿ ಮೂರು ಗೂಡುಗಳಿವೆ. ಆಗ್ನೇಯ ಮೂಲೆಯಲ್ಲಿರುವ ಕಟ್ಟಡದ ಮುಂಭಾಗದಲ್ಲಿ ಮೂರು ಬಾಗಿಲುಗಳಿವೆ. ಒಳಭಾಗದಲ್ಲಿ ೬೨ ಕಂಬಗಳಿವೆ. ಮೇಲೆ ಕಮಾನುಗಳ ಮೇಲೆ ನಿಂತಿರುವ ಒಳ ಮಾಳಿಗೆಯಿದೆ.

ನೈರುತ್ಯ ಮೂಲೆಯಲ್ಲಿಯ ಕಟ್ಟಡದ ಮುಂಭಾಗದಲ್ಲಿಯ ಆಯತಾಕಾರದ ಚಿಕ್ಕ ಮೊಗಸಾಲೆಗೆ ಎರಡು ಬಾಗಿಲುಗಳಿವೆ. ಇಲ್ಲಿಂದ ಕಟ್ಟಡದ ಒಳಗೆ ಹೋಗಲು ಮತ್ತೆರಡು ಬಾಗಿಲುಗಳಿವೆ. ಕಟ್ಟಡದ ಒಳಗೆ ಒಂದೇ ಸಾಲಿನಲ್ಲಿ ಎಂಟು ಕಂಬಗಳಿವೆ. ಪಶ್ಚಿಮ ಗೋಡೆಯಲ್ಲಿ ಎರಡು ಚಿಕ್ಕ ಕಿಟಕಿಗಳಿವೆ. ವಾಯುವ್ಯ ಮೂಲೆಯಲ್ಲಿಯ ಕಟ್ಟಡದ ಮುಂಭಾಗದಲ್ಲಿ ಮೂರು ಬಾಗಿಲು ಮತ್ತು ಎರಡು ಕಿಟಕಿಗಳಿವೆ. ಉತ್ತರ ದಕ್ಷಿಣ ಗೋಡೆಗಳಲ್ಲಿ ಒಂದೊಂದು ಕಿಟಕಿಗಳಿವೆ. ಒಳಗೆ ಒಂದೇ ಸಾಲಿನಲ್ಲಿ ಒಂಭತ್ತು ಕಂಬಗಳಿವೆ. ಮಾಳಿಗೆ ಗುಡಿಸಲಿನಾಕಾರದಲ್ಲಿ ಎರಡೂ ಬದಿಗೆ ಇಳಿಜಾರಾಗಿದೆ. ಈಶಾನ್ಯ ಮೂಲೆಯಲ್ಲಿಯ ಕಟ್ಟಡದ ಮುಂಭಾಗದಲ್ಲಿ ಕಮಾನಿನ ಐದು ಬಾಗಿಲುಗಳಿವೆ. ಒಳಗೆ ೬೨ ಕಂಬಗಳಿವೆ. ಮಾಳಿಗೆ ಗುಡಿಸಲಿನಾಕಾರದಲ್ಲಿದೆ.

**ಮದ್ದಿನ ಮನೆ**

ಆಗ್ನೇಯ ಮೂಲೆಯಲ್ಲಿರುವ ಮದ್ದಿನ ಮನೆಯು ಉತ್ತರಾಭಿಮುಖವಾಗಿದೆ. ಇದು ಪೂರ್ವ ಪಶ್ಚಿಮವಾಗಿ ೨೦ ಅಡಿ ಉದ್ದ ಹಾಗೂ ಉತ್ತರ ದಕ್ಷಿಣವಾಗಿ ಸುಮಾರು ೩೦ ಅಡಿ ಅಗಲವಾಗಿದೆ. ಉತ್ತರದ ಗೋಡೆಯ ಮಧ್ಯದಲ್ಲಿ ಕಿರಿದಾದ ಕಮಾನಿನಾಕಾರದ ೨ ಬಾಗಿಲುಗಳಿವೆ. ಒಳಭಾಗದಲ್ಲಿ ಒಟ್ಟು ೧೨ ಕಂಬಗಳಿವೆ. ಇವುಗಳು ಕಮಾನಿನಾಕಾರದಲ್ಲಿದ್ದು, ಇವುಗಳ ಮೇಲೆ ಒಳಮಾಳಿಗೆ ನಿಂತಿದೆ. ನೈರುತ್ಯ ಮೂಲೆಯಲ್ಲಿಯ ಮದ್ದಿನ ಮನೆಯು ಉತ್ತರಾಭಿಮುಖವಾಗಿದೆ. ಇದಕ್ಕೆ ಎರಡು ಬಾಗಿಲುಗಳಿವೆ. ಕಟ್ಟಡದ ಒಳಗೆ ಹೋಗಲು ಇನ್ನೆರಡು ಬಾಗಿಲುಗಳಿದ್ದು ಇದರೊಳಗೆ ಎಂಟು ಕಂಬಗಳಿವೆ. ಪಶ್ಚಿಮ ದಿಕ್ಕಿನ ಗೋಡೆಯಲ್ಲಿ ಎರಡು ಚಿಕ್ಕ ಕಿಟಕಿಗಳಿವೆ. ಇದು ಆಗ್ನೇಯಕ್ಕಿರುವ ಮದ್ದಿನ ಮನೆಗಿಂತ ಚಿಕ್ಕದಾಗಿದೆ.

ವಾಯುವ್ಯ ದಿಕ್ಕಿನಲ್ಲಿರುವ ಮದ್ದಿನ ಮನೆಯು ಪೂರ್ವ ಅಭಿಮುಖವಾಗಿದ್ದು ಇದು ಉತ್ತರ ದಕ್ಷಿಣವಾಗಿ ಸು. ೬೦ ಅಡಿ ಉದ್ದ ಹಾಗೂ ಪೂರ್ವ ಪಶ್ಚಿಮವಾಗಿ ೨೦ ಅಡಿ ಅಗಲವಾಗಿದೆ. ಇದರ ಪೂರ್ವದ ಗೋಡೆಯಲ್ಲಿ ಕಿರಿದಾದ ಕಮಾನಿನಾಕಾರದ ಮೂರು ಬಾಗಿಲುಗಳಿವೆ. ನಾಲ್ಕು ದಿಕ್ಕಿಗೂ ಚಿಕ್ಕ ಚಿಕ್ಕ ಕಿಟಕಿಗಳಿವೆ. ಒಳಗೆ ಒಂದೇ ಸಾಲಿನಲ್ಲಿ ಒಂಭತ್ತು ಕಂಬಗಳಿವೆ. ಈಶಾನ್ಯ ದಿಕ್ಕಿಗಿರುವ ಮದ್ದಿನ ಮನೆಯ ದಕ್ಷಿಣ ಅಭಿಮುಖವಾಗಿ ಸು. ೨೦ ಅಡಿ ಅಗಲವಾಗಿದೆ. ಮುಂಭಾಗದಲ್ಲಿ ಕಮಾನಿನಾಕಾರದ ಐದು ಬಾಗಿಲುಗಳಿವೆ. ಒಳಭಾಗದಲ್ಲಿ ಎರಡು ಸಾಲುಗಳಲ್ಲಿರುವ ಒಟ್ಟು ೧೨ ಕಂಬಗಳಿವೆ.

ಈ ಕಟ್ಟಡಗಳನ್ನು ಬಾಡಿಗೆ ಆಧಾರದ ಮೇಲೆ ಸಾರ್ವಜನಿಕರಿಗೆ ನೀಡಲಾಗುತ್ತಿದ್ದು, ಇವುಗಳಲ್ಲಿ ದವಸ ಧಾನ್ಯಗಳನ್ನು, ದನಕರುಗಳನ್ನು ಮತ್ತು ಮೇವುಗಳನ್ನು ಇಡುವುದಕ್ಕಾಗಿ ಬಳಸಲಾಗುತ್ತಿದೆ. ಕೋಟೆಯೊಳಗೆ ಕೃಷ್ಣಾನಗರ ಗ್ರಾಮವಿದ್ದು, ಈ ನಗರದಲ್ಲಿ ರಾಮಸ್ವಾಮಿ, ಈಶ್ವರ, ಊರಮ್ಮ, ತಾಯಮ್ಮನ ದೇವಾಲಯಗಳು, ದರ್ಗಾಗಳು ಹಾಗೂ ಮಸೀದಿಗಳಿವೆ. ಕೋಟೆಯ ಪೂರ್ವದಿಕ್ಕಿನ ಬಾಗಿಲಿನ ಹತ್ತಿರ ಆಯತಾಕಾರದ ಬಾವಿ ಇದೆ. ಇದಕ್ಕೆ ಉತ್ತರ ದಿಕ್ಕಿನಲ್ಲಿ ಪ್ರವೇಶ ಮಾಡಲು ಮೆಟ್ಟಿಲುಗಳಿವೆ. ಪೂರ್ವ ಮತ್ತು ಪಶ್ಚಿಮದ ಗೋಡೆಯಲ್ಲಿ ಗೂಡುಗಳಿವೆ.

## ಕೆರೆಗಳು

### ದರೋಜಿ ಕೆರೆ

ಸಂಡೂರಿನಿಂದ ಸುಮಾರು ೪೮ಕಿ.ಮೀ ದೂರದಲ್ಲಿದೆ. ನೀರು ಸಕಲ ಜೀವಿಗಳಿಗೆ ಜೀವಾಧಾರ. ಜಲಸಂಸ್ಕೃತಿಯ ಮೂಲ ಆಗರವಾದ ಕೆರೆಕಟ್ಟೆಗಳೇ ಹಳ್ಳಿಗರ ಜೀವನಾಡಿಯಾಗಿದ್ದು, ಸಂಡೂರು ತಾಲ್ಲೂಕು ಹಲವು ಮಾದರಿಯ ಐತಿಹಾಸಿಕವಾದ ಕೆರೆಗಳನ್ನು ಹೊಂದಿದ ಪ್ರದೇಶವಾಗಿದೆ. ಇಂತಹ ಕೆರೆಗಳಲ್ಲಿ ದರೋಜಿ ಕೆರೆಯು ಒಂದು. ರಾಜ್ಯದಲ್ಲಿಯೇ ಎರಡನೇ ಅತಿ ದೊಡ್ಡ ಕೆರೆ, ಬಳ್ಳಾರಿ ಜಿಲ್ಲೆಯ ಅತಿ ದೊಡ್ಡ ಕೆರೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ತಾಲ್ಲೂಕಿನ ದರೋಜಿ ಗ್ರಾಮದ ಬಳಿಯಿರುವ ಐತಿಹಾಸಿಕ ನೀರಾವರಿ ಕೆರೆಯು ಸಂಡೂರು ಮತ್ತು ಹೊಸಪೇಟೆ ತಾಲ್ಲೂಕಿನ ಸುಮಾರು ೨೦ ಹಳ್ಳಿಯ ಜನರಿಗೆ ಆಸರೆಯಾಗಿದೆ.

ಕೈಫಿಯತ್ತು, ಶಾಸನಗಳ ಪ್ರಕಾರ, ಸುಮಾರು ೧೫-೧೬ನೇ ಶತಮಾನದಲ್ಲಿ ಕಂಪಿಲರಾಯನ ಮಗ ಕುಮಾರರಾಮ ಈ ಪ್ರದೇಶದಲ್ಲಿ ಆಳ್ವಿಕೆ ಮಾಡುವಾಗ ಸುಲ್ತಾನರು ೧೨ ಲಕ್ಷ ಫೌಜ್ ನೊಂದಿಗೆ ಕುಮಾರರಾಮನನ್ನು ಯುದ್ಧದಲ್ಲಿ ಹತ್ಯೆಮಾಡಿ ಅವನ ರಾಜ್ಯವನ್ನು ವಶಪಡಿಸಿಕೊಂಡು ಅವರ ಗೆಲುವಿನ ನೆನಪಿಗಾಗಿ ಈ ಭಾಗದಲ್ಲಿ ಮೂರು ಕೆರೆಗಳನ್ನು ನಿರ್ಮಾಣ ಮಾಡಲು ತೀರ್ಮಾನಿಸುತ್ತಾರೆ. ಅದರಲ್ಲಿ ದರೋಜಿ ಕೆರೆಯು ಒಂದು.

೧೮೫೧ರ ಸುಮಾರಿಗೆ ಕೋಡಿ ಒಡೆದು ಹಾಳಾದ ಈ ಕೆರೆಯನ್ನು ೧೮೫೩ರಲ್ಲಿ ಪುನರ್ ನಿರ್ಮಾಣ ಮಾಡಲಾಯಿತು. ಎನ್ನುವ ವಿಚಾರ ಅನೇಕ ಮೂಲಗಳಿಂದ ತಿಳಿದುಬರುತ್ತದೆ. ಈ ಕೆರೆಯು ಸುಮಾರು ೩.೫ಕಿ.ಮೀ ಉದ್ದ, ೪೫ ಅಡಿ ಎತ್ತರವಿದ್ದು, ೦.೬೦ ಕ್ಯೂಸೆಕ್ಸ್ ನೀರಿನ ಸಾಮರ್ಥ್ಯವನ್ನು ಹೊಂದಿದೆ. ೨೨೯೯ ಎಕರೆ ಪ್ರದೇಶದಲ್ಲಿ ವ್ಯಾಪಿಸಿಕೊಂಡಿರುವ ಈ ಕೆರೆಗೆ ತುಂಗಭದ್ರಾ ಜಲಾಶಯದ ಬಲದಂಡೆ ಕಾಲುವೆಯ ನೀರನ್ನು ತುಂಬಿಸಿ, ಹಳೇದರೋಜಿ, ಹೊಸದರೋಜಿ ಹಳೇಮಾದಾಪುರ ಹೀಗೆ ಸುಮಾರು ೨೦ ಗ್ರಾಮಗಳ ವ್ಯಾಪ್ತಿಯ ಅಂದಾಜು ೪೭೦೦ ಎಕರೆ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ.

ದರೋಜಿ ಸುಂದರವಾದ ಊರಾಗಿದ್ದು, ೧೨ ತಿಂಗಳು ನೀರಾವರಿ ಹೊಂದಿರುವ ಪ್ರದೇಶವಾಗಿದೆ. ಪಕ್ಕದಲ್ಲಿಯೇ ಏಷ್ಯಾಖಂಡದ ಅತಿ ದೊಡ್ಡ ಕರಡಿ ಧಾಮವಿದೆ. ಶ್ರೀ ಕೋಡಿ ವೀರಭದ್ರೇಶ್ವರ ದೇವಾಲಯ, ಮಟ್ಟಿ ದೇವಮ್ಮನ ದೇವಾಲಯ, ಪ್ರವಾಸಿ ಮಂದಿರಗಳು ಈ

ಕೆರೆಯ ಹತ್ತಿರ ಇವೆ. ಕೆರೆಯ ನೀರು, ಭತ್ತದ ಗದ್ದೆಗಳಿರುವುದರಿಂದ ಹೊರರಾಜ್ಯ, ಹೊರದೇಶಗಳಿಂದ ಹಲವಾರು ಪಕ್ಷಿಗಳು ಇಲ್ಲಿಗೆ ವಲಸೆ ಬಂದು ನೆಲೆಸುತ್ತವೆ. ಪಕ್ಷಿವೀಕ್ಷಕರಿಗೆ, ಪ್ರಕೃತಿ ಪ್ರಿಯರಿಗೆ ಈ ಸ್ಥಳ ರಮ್ಯ ತಾಣವಾಗಿದೆ. ಸರ್ಕಾರ ವಿಶೇಷ ಕಾಳಜಿ ವಹಿಸಿದಲ್ಲಿ ಇದು ತಾಲ್ಲೂಕಿನ ಪ್ರಸಿದ್ಧ ಪಕ್ಷಿಧಾಮ ಆಗುವುದರಲ್ಲಿ ಸಂದೇಹವಿಲ್ಲ.

**ಚಿಕ್ಕ ಕೆರೆಯಾಗಿನಹಳ್ಳಿ(ಪೆದ್ದಲಕ್ಕ ಸಮುದ್ರಂ)**

ಈ ಕೆರೆಯು ಬಯಕಾರ ರಾಮಪ್ಪನ ಕಾಲಾವಧಿಯಲ್ಲಿ ನಿರ್ಮಾಣಗೊಂಡಿದೆ. ಇದು ಉತ್ತಮ ಸ್ಥಿತಿಯಲ್ಲಿದ್ದು, ನೀರಾವರಿಗೆ ಯೋಗ್ಯವಾಗಿದೆ. ಈ ಕೆರೆಯನ್ನು ಬಯಕಾರ ರಾಮಪ್ಪ ತನ್ನ ತಾಯಿ ಹಿರಿಯ ಲಕ್ಕರಸಮ್ಮನ ಹೆಸರಿನಲ್ಲಿ ಹಿರಿಯ-ಲಕ್ಕಸಮುದ್ರ ಕೆರೆಯನ್ನು ಕಟ್ಟಿಸಿದನು ಎಂದು ಇಲ್ಲಿನ ಶಾಸನ ತಿಳಿಸುತ್ತದೆ. ಮುಖ್ಯವಾಗಿ ಈ ಶಾಸನದಲ್ಲಿ ಬಯಕಾರ ರಾಮಪ್ಪಯ್ಯನಿಗೆ ಸಂಬಂಧಿಸಿದಂತೆ ಅನೇಕ ಮಾಹಿತಿ ಇದರಲ್ಲಿದೆ. ಪೆದ್ದ-ತಿಮ್ಮಯ್ಯ ಮತ್ತು ಲಕ್ಕಾಂಬಿಕ ಮಗ, ರಾಜಮಂತ್ರಿ ಮತ್ತು ತೆಲಗಮಾಂಬರ ಮೊಮ್ಮಗ ಮತ್ತು ಸಿಂಗಯ್ಯನ ಮಗ ಭಾವಯ-ಮಂತ್ರಿಯ ಮರಿಮಗನಾದ ರಾಮಯ್ಯನು ಕೊಂಡವೀಡು ವಿಭಾಗದ ಮುಖ್ಯಸ್ಥನಾಗಿದ್ದನೆಂದು ತಿಳಿದುಬರುತ್ತದೆ.

ಈತನು ತಿಮ್ಮಾಪುರ, ಚಿನ್ನ-ತಿಮ್ಮಾಪುರ ಮತ್ತು ಮಗಿಮಾವಿನಹಳ್ಳಿ ಅಗ್ರಹಾರಗಳನ್ನು ಕಟ್ಟಿಸಿದನು. ಪೆದ್ದ-ತಿಮ್ಮಾಪುರದಲ್ಲಿ ದೇವಸ್ಥಾನಗಳನ್ನು ಕಟ್ಟಿಸಿ ಗೋಪಿನಾಥ, ಬಾಚೇಶ್ವರ, ಕೃಷ್ಣೇಶರ, ಅಮ್ಮೇಶ್ವರ, ಮಲ್ಲಿಕಾರ್ಜುನ, ವೀರಭದ್ರ ಮತ್ತು ವಿಶ್ವನಾಥ ದೇವರನ್ನು ಪ್ರತಿಷ್ಠಾಪಿಸಿ, ಈ ದೇವರಿಗೆ ಹೊಳಗುಂದಿ ಗ್ರಾಮವನ್ನು ದಾನ ನೀಡಿದನು. ತನ್ನ ಮಗಳು ಅಚ್ಯುತಮ್ಮಸಮುದ್ರ, ಬಾಚಸಮುದ್ರ, ರಾಮಸಮುದ್ರ, ಅಕ್ಕಸಮುದ್ರ, ಕಾಮಸಮುದ್ರ, ಅಮ್ಮಸಮುದ್ರ, ವೀರಸಮುದ್ರ, ಅಚ್ಯುತೇಂದ್ರ ಸಮುದ್ರ, ವೆಂಕಟೇಂದ್ರ ಸಮುದ್ರ, ಪೆದ್ದಲಕ್ಕ ಸಮುದ್ರ, ಲಿಂಗಾಲಯ ತಟಾಕ, ವೆಂಕಟಯ್ಯ ತಟಾಕ, ಪೆದ್ದತಿಮ್ಮ ಸಮುದ್ರ ಮತ್ತು ಚಿನಬಾಚಸಮುದ್ರವೇ ಮೊದಲಾದವು ಇವರೆಲ್ಲರ ಹೆಸರಿನಲ್ಲಿ ಸುಮಾರು ೧೬ ಕೆರೆಗಳನ್ನು ಕಟ್ಟಿಸುತ್ತಾನೆ.

**ಕೊನೆ ಟಿಪ್ಪಣಿಗಳು**

೧. ಮಹದೇವ ಸಿ, ೨೦೦೨, ಹೊಸಪೇಟೆ ತಾಲ್ಲೂಕು ದರ್ಶನ, ಪು.ಸಂ.೨-೬

೨. ವಾಸುದೇವ ಬಡಿಗೇರ, ೧೯೯೭, ಸಂಡೂರು ಪರಿಸರದ ಕಾರ್ತಿಕೇಯ ತಪೋವನ, ಚಾರಿತ್ರಿಕ ಅಧ್ಯಯನ, ಪು.ಸಂ.೫೦- ೬೦

೩. ಅದೇ ಪು.ಸಂ. ೬೨-೬೩

೪. ಮಹದೇವ ಸಿ, ಬಳ್ಳಾರಿ ಜಿಲ್ಲೆಯ ಮರದ ವಾಸ್ತು, ಪು.ಸಂ.೨೮

೫. ಪಾಟೀಲ್ ಸಿ.ಬ್, ಕರ್ನಾಟಕದ ಕೋಟೆಗಳು, ಪು.ಸಂ.೬೩

೬. ಅದೇ ಪು.ಸಂ. ೬೮-೭೦

೭. ಸುರೇಶ ಕೆ.ಎಂ. ಮತ್ತು ಇತರರು, ೨೦೦೮, ಕರ್ನಾಟಕ ದೇವಾಲಯ ಕೋಶ ಬಳ್ಳಾರಿ ಜಿಲ್ಲೆ, ಪು.ಸಂ.೨೫೫

೮. ಅದೇ ಪು.ಸಂ.೨೫೭-೨೫೮

೯. ಮಹದೇವ ಸಿ, ವಿಜಯನಗರದ ಗಾರೆಶಿಲ್ಪ, ಪು.ಸಂ. ೭-೮

೧೦. ಸವಿತಾ, ಸಂಡೂರು ಪರಿಸರದ ಗ್ರಾಮದೈವಗಳು, ಪು.ಸಂ. ೪೮-೪೯

೧೧. ಅದೇ ಪು.ಸಂ. ೫೧-೫೨

೧೨. ಗಿರಿಜಾ, ೨೦೧೧, ಸಂಡೂರು ತಾಲ್ಲೂಕು ಒಂದು ಚಾರಿತ್ರಿಕ ಅಧ್ಯಯನ, ಪು.ಸಂ.೧೪೬

೧೩. ಅದೇ ಪು.ಸಂ. ೧೬೦-೧೬೧

೧೪. ಶಂಕರನಾರಾಯಣರಾವ್.ಎ.ವಿ, ೨೦೧೦, ಕರ್ನಾಟಕ ಎಲ್ಲಾ ಜಿಲ್ಲೆಗಳ ಸಮಗ್ರ ಪರಿಚಯ, ಪು.ಸಂ.೧೩೮

೧೫. ಕರಿಬಸಪ್ಪ.ಎ, ೨೦೦೯, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಪು.ಸಂ. ೧೦೭

೧೬. ನಾರಾಯಣ. ಆರ್.ಪಿ, ೨೦೧೧, ಕರ್ನಾಟಕದ ಜಿಲ್ಲೆಗಳು, ಪು.ಸಂ. ೧೧೩

೧೭. ವಿರೂಪಾಕ್ಷ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಗಾರರು, ಪು.ಸಂ.೮೯

೧೮. ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ-೨, ೧೯೯೭, ಪು.ಸಂ.೧೬೧

೧೯. ಕೋಟ್ರೇಶ್.ಎಂ, ೨೦೦೨, ಕೋಟೆ-ಕೊತ್ತಲಗಳು ಒಂದು ಅಧ್ಯಯನ (ಬಳ್ಳಾರಿ ಜಿಲ್ಲೆ), ಪು.ಸಂ.೧೧೩

೨೦. ಗಿರಿಜಾ, ೨೦೦೩, ಸಂಡೂರು ಪರಿಸರದ ಶಾಸನಗಳು ಮತ್ತು ಉಲ್ಲೇಖಿತ ದೇವಾಲಯಗಳು, ಪು.ಸಂ. ೪೦

೨೧. ಅದೇ. ಪು.ಸಂ. ೪೪

೨೨. ಕಲ್ಬುರ್ಗಿ.ಎಂ.ಎಂ, ಕರ್ನಾಟಕದ ಕೈಫಿಯತ್ತುಗಳು, ಪು.ಸಂ. ೪೮೯

೨೩. ಮೃತ್ಯುಂಜಯ ರುಮಾಲೆ, ೧೯೯೧, ಸ್ಕಂದ-ಶ್ರೀಗಂಧ, ಸ್ಮರಣ ಸಂಚಿಕೆ ಸೊಂಡೂರು ಒಂದು ಪರಿಚಯ, ಪು.ಸಂ.೬

೨೪. ತಿಪ್ಪೇರುದ್ರ ಸಂಡೂರು, ೨೦೧೭, ಪ್ರವಾಸಿ ತಾಣಗಳ ಆಗರ-ಸಂಡೂರು, ಪು.ಸಂ.೨೪

೨೫. ಗೋಪಾಲ.ಸಿ.ಆರ್, ೨೦೧೭, ಬೊಮ್ಮಘಟ್ಟ ಹುಲಿಕುಂಟೇರಾಯ, ಪು.ಸಂ.೨೦

೨೬. ಸಿದ್ದೇಶ್ವರಿ.ಎ.ಎನ್, ೨೦೧೭, ಸಂಡೂರು ತಾಲ್ಲೂಕಿನ ಜನಪದ ಆಚರಣೆಗಳು, ಪು.ಸಂ. ೩೫

೨೭. ವಾಸುದೇವನ್.ಸಿ.ಎಸ್, ೨೦೦೧, ಹಂಪಿ ಪರಿಸರದ ಕೆರೆಗಳು, ಪು.ಸಂ.೪

೨೮. ನಾಗಭೂಷಣ.ಎನ್.ಎಂ, ೧೯೯೫, ಸಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ, ಪು.ಸಂ.೧೭೮-೧೭೯

೨೯. ಅದೇ ಪು.ಸಂ.೧೮೦

೩೦. ಪುರುಷೋತ್ತಮ ರೆಡ್ಡಿ. ಆರ್, ೨೦೦೨, ಸಂಡೂರು ಪರಿಸರದ ಕಬ್ಬಿಣ ತಯಾರಿಕೆ, ಪು.ಸಂ.೩೭

# ಅಧ್ಯಾಯ –೪

## ಪ್ರವಾಸಿಗರು ಮತ್ತು ಸ್ಥಳೀಯ ಸೌಲಭ್ಯಗಳು

ಪ್ರವಾಸೋದ್ಯಮದ ಅಭಿವೃದ್ಧಿ ಮೂಲತಃ ಮೂಲಸೌಕರ್ಯ ಸೌಲಭ್ಯಗಳನ್ನು ಅವಲಂಬಿಸಿರುತ್ತದೆ. ಇದು ಪ್ರವಾಸೋದ್ಯಮ ಅಭಿವೃದ್ಧಿಯ ಅವಿಭಾಜ್ಯ ಅಂಗವಾಗಿದೆ. ಇದು ವಸತಿ, ಸಾರಿಗೆ, ದೂರಸಂಪರ್ಕ, ನೀರು, ವಿದ್ಯುತ್, ಮನರಂಜನೆ ಮತ್ತು ವಾಹನ ಸೇವಾ ಕೇಂದ್ರ, ಪೆಟ್ರೋಲ್ ಪಂಪ್‌ಗಳು, ಆಹಾರ ಮಾಲ್‌ಗಳು ಸಾರ್ವಜನಿಕ ಶೌಚಾಲಯಗಳಂತಹ ಸೌಲಭ್ಯಗಳನ್ನು ಒಳಗೊಂಡಿದೆ. ಅಲ್ಲದೇ ಬಳ್ಳಾರಿ ಜಿಲ್ಲೆಯ ಅನೇಕ ನೈಸರ್ಗಿಕ ಮತ್ತು ಸಾಮಾಜಿಕ–ಸಾಂಸ್ಕೃತಿಕ ಸಂಪನ್ಮೂಲಗಳನ್ನು ಹೊಂದಿದೆ.

ಈ ಸಂಪನ್ಮೂಲಗಳು ನೈಸರ್ಗಿಕ ಭೂದೃಶ್ಯ, ಸಸ್ಯ ಮತ್ತು ಪ್ರಾಣಿ ನೀರಿನ ಜಲಾಶಯ ಹವಾಮಾನ, ಮನರಂಜನೆ ಮತ್ತು ಐತಿಹಾಸಿಕ ಸ್ಮಾರಕಗಳು, ಆದ್ದರಿಂದ ಇದು ಪ್ರವಾಸಿ ತಾಣಗಳನ್ನು ಅಭಿವೃದ್ಧಿ ಪಡಿಸಲು ಸಹಾಯ ಮಾಡುತ್ತದೆ. ಬಳ್ಳಾರಿ ಜಿಲ್ಲೆಯು ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ ಮತ್ತು ನೈಸರ್ಗಿಕ ಪ್ರಾಮುಖ್ಯತೆಯನ್ನು ಹೊಂದಿರುವ ಅನೇಕ ಪ್ರವಾಸೋದ್ಯಮ ಸ್ಥಳಗಳಿವೆ. ಈ ಪ್ರವಾಸೋದ್ಯಮ ಸ್ಥಳಗಳು ಉಬ್ಬಳಗುಂಡಿಯ ಯಾಣ, ರಾಮಘಡ, ದೇವಗಿರಿ, ಜಿಂದಾಲ್ ಕಾರ್ಖಾನೆ ಮತ್ತು ದೋಣಿಮಲೆ, ಕುಮಾರಸ್ವಾಮಿ ಬೆಟ್ಟ, ಬೊಮ್ಮಘಟ್ಟ ಕೋಟೆಗಳು ಮತ್ತು ತೀರ್ಥಗಳು ಪ್ರವಾಸಿಗರನ್ನು ಆಕರ್ಷಿಸುವ ಕೆಲವು ಸುಂದರವಾದ ತಾಣಗಳು ಮುಂತಾದ ಸ್ಥಳಗಳಿವೆ.

ಆದ್ದರಿಂದ ಈ ಅಧ್ಯಾಯವು ಅಸ್ತಿತ್ವದಲ್ಲಿರುವ ಪ್ರವಾಸಿ ಸ್ಥಳಗಳ ಬಗ್ಗೆ ಮಾಹಿತಿ ಲಭ್ಯವಿರುವ ಮೂಲಸೌಕರ್ಯ ಸೌಲಭ್ಯಗಳಾದ ವಸತಿ, ಸಾರಿಗೆ ಮತ್ತು ಸಂವಹನ, ಮನರಂಜನೆ, ನೀರು, ವಿದ್ಯುತ್ ಮತ್ತು ಆರೋಗ್ಯ ಸೌಲಭ್ಯ ಇತ್ಯಾದಿಗಳ ಬಗ್ಗೆ ವಿವರಿಸುತ್ತಿದೆ. ಬಳ್ಳಾರಿ ಜಿಲ್ಲೆಯ ಸಾಕಷ್ಟು ನೈಸರ್ಗಿಕ ಸಂಪನ್ಮೂಲಗಳು, ಸಾಂಸ್ಕೃತಿಕ ಸಂಪ್ರದಾಯಗಳು ಐತಿಹಾಸಿಕ ಹಿನ್ನೆಲೆ ಪ್ರವಾಸೋದ್ಯಮದ ಅಭಿವೃದ್ಧಿಗೆ ಉತ್ತಮ ಅವಕಾಶವನ್ನು ಹೊಂದಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಪ್ರವಾಸೋದ್ಯಮದ ಸ್ಥಳಗಳು ಅಸ್ತಿತ್ವದಲ್ಲಿವೆ. ಅದರಲ್ಲಿ ಸಂಡೂರು ತಾಲ್ಲೂಕು ಒಂದಾಗಿದೆ. ದೇಶದ ಆರ್ಥಿಕತೆಯನ್ನು ಉತ್ತೇಜಿಸುವ ಪ್ರಮುಖ ಕೈಗಾರಿಕೆಗಳಲ್ಲಿ ಪ್ರವಾಸೋದ್ಯಮವೂ ಒಂದು. ಇದು ವಿವಿಧ ಸಂಪನ್ಮೂಲಗಳು, ನಿರ್ದಿಷ್ಟ ಇತಿಹಾಸ ಸಂಸ್ಕೃತಿ

ಮತ್ತು ಸಂಪ್ರದಾಯವನ್ನು ಹೊಂದಿದೆ. ಹಲವಾರು ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ ಮತ್ತು ನೈಸರ್ಗಿಕ ಪ್ರವಾಸೋದ್ಯಮ ಸ್ಥಳಗಳನ್ನು ಒಳಗೊಂಡಿದೆ.

ಸಂಡೂರು ತಾಲ್ಲೂಕಿನ ಹಲವಾರು ಧಾರ್ಮಿಕ ಸ್ಥಳಗಳಿವೆ. ಕುಮಾರಸ್ವಾಮಿ ದೇವಸ್ಥಾನ, ನವಿಲುಸ್ವಾಮಿ ದೇವಸ್ಥಾನ, ಹರಿಶಂಕರ ದೇವಸ್ಥಾನ, ಬಾಬಯ್ಯನ ದರ್ಗಾ ಮತ್ತು ತೀರ್ಥಗಳು ಮುಂತಾದ ಸ್ಥಳಗಳನ್ನು ಕಾಣಬಹುದು. ಜೊತೆಗೆ ಭೌಗೋಳಿಕವಾಗಿ ಇಲ್ಲಿ ಆಳಿದ ಮನೆತನಗಳ ಕಾಲದ ಕೋಟೆಗಳು, ಅರಮನೆ ಮತ್ತು ಕೆರೆಗಳು ಹೀಗೆ ಮುಂತಾದವು ಪ್ರಮುಖ ಸ್ಥಳಗಳಾಗಿವೆ.

**ಸೌಲಭ್ಯಗಳು**

ಮೂಲಸೌಕರ್ಯಗಳ ವಿಸ್ತರಣೆ ಮತ್ತು ಆಧುನೀಕರಣ ಪ್ರವಾಸೋದ್ಯಮಕ್ಕೆ ಒಂದು ಪ್ರಮುಖ ಸವಾಲಾಗಿದೆ. ಮೂಲಸೌಕರ್ಯಗಳ ಕೊರತೆಯಿಂದಾಗಿ ವಿಶ್ವದ ಅನೇಕ ಪ್ರದೇಶಗಳು ಪ್ರವಾಸೋದ್ಯಮದ ಲಾಭವನ್ನು ಪಡೆಯುವ ಸ್ಥಿತಿಯಲ್ಲಿಲ್ಲ ಆದ್ದರಿಂದ ಪ್ರವಾಸೋದ್ಯಮ ಅಭಿವೃದ್ಧಿ ಮೂಲತಃ ಮೂಲಸೌಕರ್ಯ ಸೌಲಭ್ಯಗಳನ್ನು ಅವಲಂಬಿಸಿರುತ್ತದೆ. ಈ ಮೂಲಸೌಕರ್ಯ ಸೌಲಭ್ಯಗಳು ಹೊಟೆಲ್‌ಗಳು, ರಸ್ತೆಗಳು, ಸಾರಿಗೆ–ಸಂಪರ್ಕಗಳು, ನೀರು ಸರಬರಾಜು, ಮಾಹಿತಿ ವ್ಯವಸ್ಥೆ ಮತ್ತು ಇತರ ಸಾರ್ವಜನಿಕ ಸೌಲಭ್ಯಗಳು ಹೊಸ ಮೂಲಸೌಕರ್ಯಗಳ ಅಭಿವೃದ್ಧಿಯ ಜೊತೆಗೆ ಸಂದರ್ಶಕರನ್ನು ಆಕರ್ಷಿಸುವ ಸಲುವಾಗಿ ಕೈಗೆತ್ತಿಕೊಂಡಿರುವ ಅಸ್ತಿತ್ವದಲ್ಲಿರುವ ಮೂಲಸೌಕರ್ಯಗಳ ಸುಧಾರಣೆಗಳು ನಿರ್ಣಾಯಕ ಮಹತ್ವವಾಗಿದೆ.

ಸಂಡೂರು ಪರಿಸರ ಜಿಲ್ಲೆಯಲ್ಲಿ ಅತ್ಯಂತ ವಿಶಿಷ್ಟವಾದದ್ದು, ಆದರೆ ಇಲ್ಲಿನ ಐತಿಹಾಸಿಕ ಕುಮಾರಸ್ವಾಮಿ, ಗಂಡಿ ಲಕ್ಷ್ಮೀನರಸಿಂಹಸ್ವಾಮಿ ದೇಗುಲಕ್ಕೆ ಆಗಮಿಸುವ ಭಕ್ತರಿಗೆ ಹೆಚ್ಚಿನ ವಸತಿ ವ್ಯವಸ್ಥೆಯಾಗಬೇಕು. ನವಿಲುಸ್ವಾಮಿ ದೇಗುಲಕ್ಕೆ ರಸ್ತೆಯಿಲ್ಲದಿರುವುದು ಸೇರಿ ಮೂಲಸೌಕರ್ಯಗಳ ಕೊರತೆಯ ಕಾರಣಕ್ಕೆ ಪ್ರವಾಸಿಗರು ಇಲ್ಲಿಗೆ ಬರಲು ಹಿಂಜರಿಯುತ್ತಾರೆ. ಆರ್ ಆ್ಯಂಡ್ ಆರ್ ಯೋಜನೆಯಡಿ ಸೌಲಭ್ಯಗಳನ್ನು ಒದಗಿಸಿದಲ್ಲಿ ಅತ್ಯಂತ ಸುಂದರ ಪ್ರವಾಸಿ ತಾಣವಾಗಲಿದೆ. ಈ ಎಲ್ಲಾ ಪ್ರವಾಸಿ ಸ್ಥಳಗಳು ಕೇವಲ ೪೦ ಕಿ.ಮೀ ಸುತ್ತಳತೆಯಲ್ಲಿ ಕಾಣಸಿಗುತ್ತವೆ.

**ರಸ್ತೆಗಳು**

ಈ ಭಾಗದಲ್ಲಿ ಸಂಚರಿಸುವ ಪ್ರಯಾಣಿಕರು ಈ ಹಿಂದೆ ಇಲ್ಲಿನ ರಸ್ತೆಗಳ ಬಗೆಗೆ ಹೊಂದಿದ್ದ ಅಭಿಪ್ರಾಯವನ್ನು ನಿಧಾನವಾಗಿ ಬದಲಾಯಿಸತೊಡಗಿವೆ. ಕೆಲ ವರ್ಷಗಳ ಹಿಂದೆ

ಗಣಿ ನಾಡಾದ ಸಂಡೂರಿನ ರಸ್ತೆಗಳ ಸ್ಥಿತಿ ಎಷ್ಟರ ಮಟ್ಟಿಗೆ ಹದಗೆಟ್ಟಿದೆ. ಎಂದರೆ ಹಲವು ಸಂಘಟನೆಗಳು ಇಲ್ಲಿಯ ರಸ್ತೆಗಳ ದುರಸ್ತಿಗೆ ಒತ್ತಾಯಿಸಿ ಸಂಡೂರು ಬಂದ್, ಸರದಿ ಉಪವಾಸ ಸತ್ಯಾಗ್ರಹ, ಬಳ್ಳಾರಿಗೆ ಪಾದಯಾತ್ರೆ, ರಾಜಭವನ ಚಲೋ ಮುಂತಾದ ಹೋರಾಟಗಳನ್ನು ಹಮ್ಮಿಕೊಳ್ಳಲಾಯಿತು.

ಇಲ್ಲಿನ ರಸ್ತೆಗಳ ಸುಧಾರಣೆ ವಿಷಯ ವಿಧಾನ ಮಂಡಲದ ಅಧಿವೇಶನದಲ್ಲಿಯೂ ಚರ್ಚೆಯಾಗಬೇಕಾಯಿತು. ಇಲ್ಲಿನ ಹದಗೆಟ್ಟ ರಸ್ತೆಗಳ ಬಗೆಗೆ ಕೇಳಿ ಬರುತ್ತಿದ್ದ ಮಾತುಗಳು ಈ ಭಾಗದ ಸಂಡೂರು–ಹೊಸಪೇಟೆ, ತೋರಣಗಲ್ಲು, ಶ್ರೀ ಕುಮಾರಸ್ವಾಮಿ ದೇವಸ್ಥಾನ ರಸ್ತೆ ಕೂಡ್ಲಿಗಿ ರಸ್ತೆಗಳು ಅದಿರು ಲಾರಿಗಳ ಎಡೆಬಿಡದ ಓಡಾಟದಿಂದ ಯಾವ ಮಟ್ಟದಲ್ಲಿ ದುಸ್ಥಿತಿಗೀಡಾಗಿದ್ದವು. ಎಂದರೆ ಈ ಮಾರ್ಗದಲ್ಲಿ ಸಂಚರಿಸುವವರು ತಮ್ಮ ಗಮ್ಯವನ್ನು ತಲುಪುವ ವೇಳೆಗೆ ಹೈರಾಣಾಗಿ ಹೋಗುತ್ತಿದ್ದರು.

ಆದರೆ ಇತ್ತೀಚಿನ ವರ್ಷಗಳಲ್ಲಿ ನಿಧಾನವಾಗಿಯಾದರೂ, ರಸ್ತೆಗಳು ಅಭಿವೃದ್ದಿ ಕಾಣುತ್ತಿವೆ. ಸಂಡೂರು–ಹೊಸಪೇಟೆ ರಸ್ತೆ ನಿರ್ಮಾಣ ಕಾರ್ಯ ಪೂರ್ಣಗೊಂಡಿದೆ. ಸಂಡೂರು ಶ್ರೀ ಕುಮಾರಸ್ವಾಮಿ ದೇವಸ್ಥಾನ ಮಾರ್ಗದ ರಸ್ತೆಯ ದುರಸ್ತಿ ಕಾರ್ಯ ಮುಕ್ತಾಯವಾಗಿದೆ. ಇದು ಈ ಭಾಗದಲ್ಲಿನ ನಂದಿಹಳ್ಳಿ ಸ್ನಾತಕೋತ್ತರ ಕೇಂದ್ರದ ಅಭಿವೃದ್ಧಿಗೂ ಹಾಗೂ ದೇವಸ್ಥಾನಕ್ಕೆ ಬರುವ ಭಕ್ತರಿಗೂ ತುಂಬಾ ಅನುಕೂಲಕರವಾಗಿ ಪರಿಣಮಿಸಿದೆ.

ಸಂಡೂರು–ಕೂಡ್ಲಿಗಿ–ತೋರಣಗಲ್ಲು ರಸ್ತೆ ಪುನರ್ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿದ್ದು, ಈಗಾಗಲೇ ಧರ್ಮಾಪುರ ಬಳಿಯ ರಸ್ತೆ ನಿರ್ಮಾಣ ಕಾರ್ಯ ಮುಕ್ತಾಯವಾಗಿದೆ. ತಾರಾನಗರ ಗ್ರಾಮದ ರಸ್ತೆ ನಿರ್ಮಾಣ ಕಾರ್ಯವಾಗಿದೆ. ಈ ಮಾರ್ಗದಲ್ಲಿನ ಸೇತುವೆಗಳು ಹಾಗೂ ರಸ್ತೆ ನಿರ್ಮಾಣ ಕಾರ್ಯ ಪೂರ್ಣಪ್ರಮಾಣದಲ್ಲಿ ಮುಕ್ತಾಯವಾಗಿದೆ. ಜನತೆಗೆ ಸಾರಿಗೆ ಸೌಲಭ್ಯಗಳು ಹೆಚ್ಚಾಗಿವೆ.

**ಸಾರಿಗೆ**

ಸಾರಿಗೆ ಚಟುವಟಿಕೆಯು ಗಮ್ಯಸ್ಥಾನವನ್ನು ತಲುಪುವ ಸರಾಸರಿ ಮತ್ತು ಗಮ್ಯಸ್ಥಾನವನ್ನು ಚಲಿಸುವ ಸಾಧನವಾಗಿದೆ. ಹೆಚ್ಚಿನ ಸಂದರ್ಭಗಳಲ್ಲಿ ವ್ಯಾಪಕವಾದ ಸಾರಿಗೆ (ಬಸ್ಸು) ಸ್ವಲ್ಪ ಮಟ್ಟಿಗೆ ಸ್ಥಳಗಳಿಗೆ ತಲುಪುವ ವ್ಯವಸ್ಥೆ ಕಡಿಮೆಯಾಗಿದೆ. ಸಂಡೂರಿಗೆ ತಲುಪಲು ಕೆ.ಎಸ್.ಆರ್.ಟಿ.ಸಿ

ವ್ಯವಸ್ಥೆಯಿದೆ. ಬಳ್ಳಾರಿಯಿಂದ ಸಂಡೂರು ಮತ್ತು ಹೊಸಪೇಟೆಯಿಮದ ಸಂಡೂರಿಗೆ, ಕೂಡ್ಲಿಗಿಯಿಂದ ಸಂಡೂರಿಗೆ ಮುಂತಾದವುಗಳ ಕಡೆಯಿಂದ ಸಂಡೂರಿಗೆ (ಬಸ್ಸಿನ) ಸಾರಿಗೆ ವ್ಯವಸ್ಥೆಯಿದೆ. ಆದರೆ ಸಂಡೂರಿನಿಂದ ಪ್ರವಾಸಿ ತಾಣಗಳಿಗೆ ಬಸ್ಸಿನ ವ್ಯವಸ್ಥೆ ಕಡಿಮೆಯಿದೆ. ಕೆಲವೊಂದು ಸ್ಥಳಗಳಿಗೆ ಮಾತ್ರ ಬಸ್ಸಿನ ಸಂಚಾರ ಇರುವುದನ್ನು ಕಾಣುತ್ತೇವೆ. ಜೊತೆಗೆ ಟ್ಯಾಕ್ಸಿಗಳು, ಆಟೋಗಳು ಮತ್ತು ಟಂಪುಗಳ ವ್ಯವಸ್ಥೆಯಿರುವುದನ್ನು ಕಾಣುತ್ತೇವೆ. ಹೆಚ್ಚಾಗಿ ನಮ್ಮ ಸ್ವಂತ ವಾಹನಗಳನ್ನು ಬಳಸುವುದು ಒಳ್ಳೆಯದು ಎಂದು ಹೇಳಬಹುದು.

**ವಸತಿ**

ಪ್ರವಾಸೋದ್ಯಮದ ಅಭಿವೃದ್ಧಿಗೆ ವಸತಿ ಸಹ ಮುಖ್ಯವಾಗಿದೆ. ಇಲ್ಲಿ ಕೆಲವು ಹೋಟೆಲ್‌ಗಳಿವೆ. ಅದರಲ್ಲಿ ಘೋರ್ಪಡೆಯವರ ಅರಮನೆಯನ್ನು ಹೋಟೆಲ್ ಆಗಿ ಮಾಡಿದ್ದಾರೆ ಈ ಅರಮನೆಯು ಎರಡು ಅಂತಸ್ತಿನ ಮಹಲಾಗಿದೆ. ಕೆಳಗೆ ಹದಿನೈದು ಕೋಣೆಗಳು ಇವೆ. ಅದರಂತೆಯೇ ಮೇಲೆಯೂ ಹದಿನೈದು ಕೋಣೆಗಳಿವೆ. ಇದರಲ್ಲಿ ಕಛೇರಿ, ಗ್ರಂಥಾಲಯ ಇತ್ಯಾದಿ ಕೋಣೆಗಳಿವೆ. ಹೀಗೆ ಅನೇಕ ಸೌಲಭ್ಯಗಳು ಇರುವುದನ್ನು ಕಾಣುತ್ತೇವೆ. ಹಾಗೆಯೇ ಕಾರ್ತಿಕ್ ರೆಸಿಡೆನ್ಸಿ ಮತ್ತು ಎಸ್.ಎಲ್.ವಿ.ಡಿಲೆಕ್ಸ್, ಲಾಡ್ಜಿಂಗ್ ಮತ್ತು ಫಂಕ್ಷನ್ ಹಾಲ್ ಜೊತೆಗೆ ಬಡವರಿಗೆ ಅವರ ಹಣಕ್ಕೆ ತಕ್ಕಂತೆ ವಸತಿಗಳು ಇಲ್ಲಿ ದೊರೆಯುತ್ತವೆ. ಪ್ರವಾಸಿಗರಿಗೆ ಉತ್ತಮ ಸೌಲಭ್ಯವಾಗಿದೆ.

**ಆಹಾರ ಮತ್ತು ಆರೋಗ್ಯ ಸೌಲಭ್ಯ**

ಸಂಡೂರಿನಲ್ಲಿ ಆಹಾರಕ್ಕೆ ಊಟದ ವ್ಯವಸ್ಥೆ ಉತ್ತಮವಾಗಿದೆ. ಸಂಡೂರಿನಲ್ಲಿ ಕೆಲವು ಸ್ಟಾರ್ ಹೋಟಲ್‌ಗಳಿದ್ದು ವಿದೇಶಿಗರಿಗೆ ಬೇಕಾದ ಆಹಾರವು ದೊರೆಯುತ್ತದೆ. ಹಾಗೆಯೇ ಇಲ್ಲಿ ಶ್ರೀಮಂತರಿಗೆ ಮಾತ್ರವಲ್ಲದೇ ಬಡವರಿಗೆ ತಮ್ಮ ಹಣದ ಸೌಲಭ್ಯದಲ್ಲಿಯೇ ಊಟ ದೊರೆಯುತ್ತದೆ. ಆದರೆ ಪ್ರವಾಸಿ ಸ್ಥಳಗಳಲ್ಲಿ ಹೋಟಲ್‌ಗಳ ವ್ಯವಸ್ಥೆ ತುಂಬಾ ಕಡಿಮೆ ಇರುವುದರಿಂದ ಅಲ್ಲಿ ಆಹಾರ ಸಿಗುವುದಿಲ್ಲ. ಸಂಡೂರಿನ ನಗರದಲ್ಲಿ ಊಟ ಸಿಗುತ್ತದೆ. ಇಲ್ಲಿ ಕೆಲವು ಆಸ್ಪತ್ರೆಗಳಿವೆ. (ಓ.ಪಿ.ಡಿ) ಯ ಸೆಂಟರ್ ಕೇಂದ್ರ ಇಲ್ಲಿ ಇರುವುದನ್ನು ಕಾಣುತ್ತೇವೆ. ಕೆಲವು ಖಾಸಗಿ ಆಸ್ಪತ್ರೆಗಳ ವ್ಯವಸ್ಥೆಯೂ ಇಲ್ಲಿ ಇದೆ ಎಂದೂ ಹೇಳಬಹುದು.

**ಕೊನೆ ಟಿಪ್ಪಣಿಗಳು**

೧. ದೇವರಾಜ.ಎಸ್, ಕರ್ನಾಟಕದ ಪ್ರವಾಸಿ ತಾಣಗಳು, ೨೦೧೨, ಪು.ಸಂ.೧೮೯

೨. ಅದೇ ಪು.ಸಂ.೧೯೨

೩. ಶ್ರೀಧರ ಅಡಿಗ, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು, ೨೦೦೬, ಪು.ಸಂ.೧೩೬

೪. ಅದೇ ಪು.ಸಂ. ೧೪೨

೫. ಆರ್. ಪಿ. ನಾರಾಯಣ, ಕರ್ನಾಟಕದ ಜಿಲ್ಲೆಗಳು, ೨೦೧೧, ಪು.ಸಂ.೧೧೩

೬. ಎ. ಕರಿಬಸಪ್ಪ, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ೨೦೦೯, ಪು.ಸಂ. ೧೦೭

೭. ವಿ. ಆಂಜಿನಪ್ಪ, ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ ದರ್ಶನ, ೨೦೧೨,

೮. ಎಂ.ಎಂ. ರಘೋತ್ತಮ ತೀರ್ಥ, ಕರ್ನಾಟಕ ತೀರ್ಥಕ್ಷೇತ್ರ ದರ್ಶನ, ೨೦೧೨, ಪು.ಸಂ. ೧೩೯

೯. ಎ.ವಿ.ಶಂಕರನಾರಾಯಣರಾವ್, ಕರ್ನಾಟಕ ಎಲ್ಲಾ ಜಿಲ್ಲೆಗಳ ಸಮಗ್ರ ಪರಿಚಯ, ೨೦೧೦, ಪು.ಸಂ.೧೩೭

೧೦. ಅದೇ, ಪು.ಸಂ. ೧೩೮

೧೧. ಎ. ವೃಷಬೇಂದ್ರಾಚಾರ್, ಸೊಂಡೂರಿನ ಶ್ರೀಕುಮಾರಸ್ವಾಮಿ, ೧೯೯೪,

೧೨. ಎಂ.ಎಂ.ಕಲ್ಬುರ್ಗಿ, ಪ್ರಾಚೀನ ಕರ್ನಾಟಕ ಆಡಳಿತ ವಿಭಾಗಗಳು ಭಾಗ-೧, ೧೯೯೧,

## ಅಧ್ಯಾಯ – ೫

## ಪ್ರವಾಸಿ ತಾಣಗಳ ಸಮಸ್ಯೆ ಮತ್ತು ಸವಾಲುಗಳು

ಇಂದಿನ ಜಗತ್ತಿನಲ್ಲಿ ಟೆಲಿಕಾಂ, ಪ್ರವಾಸೋದ್ಯಮ ಮತ್ತು ಐಟಿ ಪ್ರಮುಖ ಮೂರು ಕೈಗಾರಿಕೆಗಳಾಗಿವೆ. ಕೆಲವು ಅಂದಾಜಿನ ಪ್ರಕಾರ, ಪ್ರವಾಸೋದ್ಯಮ ಷೇರುಗಳು ಒಟ್ಟು ವಿಶ್ವದ ಉದ್ಯೋಗದ ೧೧% ಮತ್ತು ಸುಮಾರು ೧೦೦ ಮಿಲಿಯನ್ ಜನರು ೨೦೦೮ ರಲ್ಲಿ ಪ್ರವಾಸೋದ್ಯಮದಲ್ಲಿ, ಉದ್ಯೋಗದಲ್ಲಿದ್ದಾರೆ. ಪ್ರಪಂಚದಾದ್ಯಂತದ ಪ್ರವಾಸೋದ್ಯಮ ಕ್ಷೇತ್ರಗಳು ಅದ್ಭುತ ಬೆಳವಣಿಗೆಯನ್ನು ತೋರಿಸಿವೆ. ಒಂದು ಶತಮಾನದ ಕೊನೆಯ ತ್ರೈಮಾಸಿಕದಲ್ಲಿ ಇದು ೫೦೦% ರಷ್ಟು ಬೆಳೆದಿದೆ. ಆರ್ಥಿಕವಾಗಿ ದುರ್ಬಲವಾಗಿರುವ ಅನೇಕ ದೇಶಗಳು ಪ್ರವಾಸೋದ್ಯಮ ಕ್ಷೇತ್ರದಿಂದ ಜಿಡಿಪಿಯಲ್ಲಿ ತಮ್ಮ ದೊಡ್ಡಪಾಲನ್ನು ಉತ್ಪಾದಿಸುತ್ತಿವೆ.

ವಿಶ್ವದಾದ್ಯಂತದ ದೇಶಗಳು ಪ್ರವಾಸೋದ್ಯಮದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿವೆ. ಪ್ರಸ್ತುತ ಪ್ರವೃತ್ತಿಗಳನ್ನು ನೋಡಿದರೆ ಪ್ರವಾಸೋದ್ಯಮಕ್ಕೆ ಪರಿಣಾಮ ಬೀರುವ ಹಲವಾರು ಅಂಶಗಳಿವೆ. ಈ ಕೆಲವು ಅಂಶಗಳು ಆರ್ಥಿಕ ಅಂಶಗಳು, ತಾಂತ್ರಿಕ ಅಂಶಗಳು, ರಾಜಕೀಯ ಅಂಶಗಳು, ಜನಸಂಖ್ಯಾ ಅಂಶಗಳು ಮತ್ತು ಸಾಂಸ್ಕೃತಿಕ ಅಂಶಗಳು ಇವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಆರ್ಥಿಕ ಅಂಶಗಳು**

ಸಂದರ್ಶಕರ ದೇಶದ ಆರ್ಥಿಕ ಅಂಶಗಳು ದೇಶದ ಪ್ರವಾಸಿ ತಾಣಗಳ ಮೇಲೆ ಪರಿಣಾಮ ಬೀರುತ್ತವೆ. ಸಂದರ್ಶಕರ ಒಟ್ಟಾರೆ ಖರೀದಿ ಸಾಮರ್ಥ್ಯವು ಪ್ರವಾಸಿ ಉದ್ಯಮಕ್ಕೆ ಬಹಳ ಮುಖ್ಯವಾದ ನಿರ್ಣಾಯಕವಾಗಿ ಕಾರ್ಯನಿರ್ವಹಿಸುತ್ತದೆ. ಕೆಲವು ದೇಶಗಳಲ್ಲಿ ರಜಾದಿನಗಳ ವೆಚ್ಚ ತುಂಬಾ ಹೆಚ್ಚಾಗಿದೆ. ಇದು ನಿರ್ದಿಷ್ಟ ದೇಶಕ್ಕೆ ಹೋಗುವುದನ್ನು ಸಂದರ್ಶಕರನ್ನು ನಿರುತ್ಸಾಹಗೊಳಿಸುತ್ತದೆ. ಮತ್ತೊಂದೆಡೆ, ಕೆಲವು ದೇಶಗಳು ಅಗ್ಗದ ರಜಾ ಪ್ಯಾಕೇಜ್‌ಗಳನ್ನು ನೀಡುತ್ತವೆ, ಹೆಚ್ಚಿನ ಪ್ರವಾಸಿಗರು ತಮ್ಮ ದೇಶಕ್ಕೆ ಬರಲು ಅನುವು ಮಾಡಿಕೊಡುತ್ತದೆ.

ಎಲ್ಲಾ ಜಾಗತಿಕ ಸಮೃದ್ಧಿಯಲ್ಲೂ ಬಹಳ ಮುಖ್ಯವಾದ ಪಾತ್ರವಿದೆ. ದೇಶಗಳ ಎಲ್ಲ ಆರ್ಥಿಕಸ್ಥಿತಿ ಉತ್ತಮವಾಗಿದ್ದರೆ ಇದರರ್ಥ ಹೆಚ್ಚಿನ ಸಂದರ್ಭಗಳಲ್ಲಿ ಆ ದೇಶಗಳಲ್ಲಿ ಕೊಳ್ಳುವ ಶಕ್ತಿ

ಹೆಚ್ಚಾಗಿದೆ. ಜೀವನಮಟ್ಟವು ಉತ್ತಮವಾಗಿದ್ದಾಗ ಮತ್ತು ಕೊಳ್ಳುವ ಸಾಮರ್ಥ್ಯವು ಉತ್ತಮವಾಗಿದ್ದಾಗ ಜನರು ಹೆಚ್ಚು ಐಷಾರಾಮಿಗಳನ್ನು ನಿಭಾಯಿಸುತ್ತಾರೆ. ಪ್ರವಾಸೋದ್ಯಮವನ್ನು ಐಷಾರಾಮಿ ಎಂದೂ ಪರಿಗಣಿಸಲಾಗುತ್ತದೆ ಮತ್ತು ನಿರ್ದಿಷ್ಟ ದೇಶಗಳ ಒಟ್ಟಾರೆ ಪ್ರವಾಸಿಗರು ಬೆಳೆಯುತ್ತಾರೆ. ಪ್ರವಾಸಿಗರಿಗೆ ಬೇಕಾದ ಪ್ರತಿಯೊಂದು ವಿಷಯವನ್ನು ಒದಗಿಸುವುದರಿಂದ ಕರ್ನಾಟಕವು ಪ್ರವಾಸಿಗರ ನೆಚ್ಚಿನ ಸ್ಥಳಗಳಲ್ಲಿ ಒಂದಾಗಿದೆ. ಕಡಿಮೆ ವೆಚ್ಚ ಮತ್ತು ಉತ್ತಮ ಗುಣಮಟ್ಟದ ಸೇವೆಗಳು, ಸುಂದರವಾದ ಕಡಲತೀರಗಳು ಮತ್ತು ನೈಸರ್ಗಿಕ ಪರಿಸರ. ಹೆಚ್ಚಿನ ಆರ್ಥಿಕ ಬೆಳವಣಿಗೆಯಿಂದಾಗಿ, ದೇಶದ ನಿವಾಸಿಗಳು ಸಹ ರಜಾದಿನಗಳಿಗೆ ವಿದೇಶಕ್ಕೆ ಹೋಗುತ್ತಾರೆ. ಇದು "ಸೋರಿಕೆ" ಎಂದು ಕರೆಯಲ್ಪಡುವ ಆರ್ಥಿಕತೆಯಿಂದ ಹಣದ ಹೊರಹರಿವುಗೆ ಕಾರಣವಾಗುತ್ತದೆ. ಒಟ್ಟಾರೆ ಹೊರಹರಿವು ಇತರ ದೇಶಗಳಿಂದ ಕರೆನ್ಸಿಯ ಒಳಹರಿವಿನಿಂದ ಸಮತೋಲನಗೊಳ್ಳುತ್ತದೆ.

ಸ್ಥಳೀಯ ಜನಸಂಖ್ಯೆಯು ರಜೆಗಾಗಿ ವಿದೇಶಕ್ಕೆ ಹೋಗುವುದರಿಂದ ಆತಿಥೇಯ ದೇಶದ ಪ್ರವಾಸೋದ್ಯಮದಿಂದ ಬರುವ ನಿವ್ವಳ ಆದಾಯ ಎಲ್ಲಕ್ಕಿಂತ, ಕಡಿಮೆಯಾಗಿದೆ. ಪ್ರವಾಸೋದ್ಯಮ ಕ್ಷೇತ್ರಕ್ಕೆ ಬಂದಾಗ ಹಣದುಬ್ಬರವು ಸಹ ಬಹಳ ಮುಖ್ಯವಾದ ನಿರ್ಣಾಯಕವಾಗಿದೆ. ಸಂದರ್ಶಕರ ದೇಶಕ್ಕೆ ಹೋಲಿಸಿದರೆ ಆತಿಥೇಯ ದೇಶದಲ್ಲಿ ಹಣದುಬ್ಬರ ದರ ಹೆಚ್ಚಿದ್ದರೆ, ಆತಿಥೇಯ ದೇಶದಲ್ಲಿ ಉತ್ಪನ್ನಗಳು ಮತ್ತು ಸೇವೆಗಳ ಬೆಲೆ ಹೆಚ್ಚಿರುವುದರಿಂದ ಸಂದರ್ಶಕರ ಒಟ್ಟಾರೆ ಖರ್ಚು ಆರ್ಥಿಕತೆಯಲ್ಲಿ ಕಡಿಮೆ. ಮತ್ತೊಂದೆಡೆ, ಸಂದರ್ಶಕರ ದೇಶಕ್ಕೆ ಹೋಲಿಸಿದರೆ ಆತಿಥೇಯ ದೇಶದಲ್ಲಿ ಹಣದುಬ್ಬರ ಕಡಿಮೆಯಿದ್ದರೆ, ಸಂದರ್ಶಕರು ಆತಿಥೇಯ ದೇಶದಲ್ಲಿ ಹೆಚ್ಚು ಖರ್ಚು ಮಾಡುತ್ತಾರೆ. ಈ ನಿಟ್ಟಿನಲ್ಲಿ ಆರ್ಥಿಕ ಅಂಶಗಳು ಪ್ರಮುಖ ಪಾತ್ರವನ್ನು ವಹಿಸುತ್ತಿವೆ.

**ತಾಂತ್ರಿಕ ಅಂಶಗಳು**

ಪ್ರಸ್ತುತ ಯುಗದಲ್ಲಿ ವಾಯುಯಾನ ತಂತ್ರಜ್ಞಾನವು ಸಾಕಷ್ಟು ಪ್ರಗತಿಯನ್ನು ಕಂಡಿದೆ. ಈಗ ಅನೇಕ ದೇಶಗಳಲ್ಲಿ ಹಣದುಬ್ಬರಕ್ಕೆ ಪ್ರಮುಖ ಕಾರಣವೆಂದರೆ ಇಂಧನ ಬೆಲೆಗಳ ಹೆಚ್ಚಳ, ಆದರೆ ಇದು ಪ್ರವಾಸೋದ್ಯಮ ಕ್ಷೇತ್ರಕ್ಕೂ ಬಹಳ ಅಡ್ಡಿಯಾಗಿದೆ. ಇಂಧನ ಬೆಲೆಗಳ ಹೆಚ್ಚಳವು ಬಸ್ಸುಗಳ ಬೆಲೆಯನ್ನು ಹೆಚ್ಚು ಮಾಡುವಂತದ್ದು ಮುಖ್ಯ ಕಾರಣವಾಗಿದೆ.. ರಜಾದಿನಗಳಲ್ಲಿ ಪ್ರವಾಸಿಗರಿಗೆ ಮೂಲಸೌಕರ್ಯ ಬಹಳ ಮುಖ್ಯವಾದ ಅಂಶವಾಗಿದೆ. ಪ್ರವಾಸೋದ್ಯಮವನ್ನು ಐಷಾರಾಮಿ ಕಾಯ್ದೆ ಎಂದು ಪರಿಗಣಿಸಲಾಗುತ್ತದೆ ಮತ್ತು ಪ್ರಪಂಚದಾದ್ಯಂತದ ಪ್ರವಾಸಿಗರು

ತಾವು ಭೇಟಿ ನೀಡಲಿರುವ ದೇಶದ ಅತ್ಯುತ್ತಮ ಅಥವಾ ಕನಿಷ್ಠ ಮೂಲಸೌಕರ್ಯವನ್ನು ಬಯಸುತ್ತಾರೆ. ಉದಾಹರಣೆ, ದುಬೈ ಅನ್ನು ಪ್ರಸಿದ್ಧ ಪ್ರವಾಸಿ ತಾಣವೆಂದು ಪರಿಗಣಿಸಲಾಗಿದೆ ಏಕೆಂದರೆ ಅದು ತನ್ನ ಪ್ರದೇಶದ ಇತರ ದೇಶಗಳಿಗಿಂತ ಉತ್ತಮ ಮೂಲಸೌಕರ್ಯಗಳನ್ನು ಹೊಂದಿದೆ. ಪ್ರವಾಸಿಗರು ದುಬೈ ಬಗ್ಗೆ ಯೋಚಿಸುವಾಗ, ಅದು ಅವರಿಗೆ ಅಗತ್ಯವಿರುವ ಎಲ್ಲಾ ಸೌಲಭ್ಯಗಳನ್ನು ಹೊಂದಿರುವ ಸ್ಥಳವಾಗಿದೆ ಎಂದು ಅವರಿಗೆ ತಿಳಿದಿದೆ; ಇದು ಹೆಚ್ಚಿನ ಪ್ರವಾಸಿಗರಿಗೆ ಜಾಗತಿಕ ಮನಸ್ಸು. ಆದ್ದರಿಂದ ಪ್ರವಾಸಿ ಕ್ಷೇತ್ರದ ಬೆಳವಣಿಗೆಗೆ ದೇಶಗಳು ತಮ್ಮ ಮೂಲಸೌಕರ್ಯಗಳಿಗಾಗಿ ಹೆಚ್ಚು ಖರ್ಚು ಮಾಡಬೇಕು. ತಮ್ಮ ಪ್ರದೇಶವು ಪ್ರವಾಸಿ ತಾಣಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಮಾಹಿತಿ ಲಭ್ಯವಿದೆಯೆ ಎಂದು ಖಚಿತಪಡಿಸಿಕೊಳ್ಳಬೇಕು, ಅದು ವಿಶ್ವದಾದ್ಯಂತ ಜನರು ನೋಡಬಹುದು ಮತ್ತು ಅವರ ದೇಶಕ್ಕೆ ಭೇಟಿ ನೀಡಲು ಪ್ರೇರೇಪಿಸಲ್ಪಡುತ್ತದೆ.

**ರಾಜಕೀಯ ಅಂಶಗಳು**

ರಜಾದಿನಗಳಿಗಾಗಿ ಇತರ ದೇಶಗಳಿಗೆ ಭೇಟಿ ನೀಡಿದಾಗ ಸಂದರ್ಶಕರು ರಾಜಕೀಯ ಅಶಾಂತಿಯ ಪ್ರದೇಶಗಳನ್ನು ತಪ್ಪಿಸುತ್ತಾರೆ. ರಜಾದಿನಗಳಲ್ಲಿ ಜನರು "ಆನಂದಿಸಲು" ಮತ್ತು "ವಿಶ್ರಾಂತಿ" ಪಡೆಯಲು ಬಯಸುವ ಮನಸ್ಥಿತಿಯೇ ಇದಕ್ಕೆ ಕಾರಣ. ಪ್ರಸ್ತುತ ಈಜಿಪ್ಟಿನ ಒಂದು ವಿಪರೀತ ಉದಾಹರಣೆ. ಅಧ್ಯಕ್ಷರ ಬದಲಾವಣೆಯ ಪ್ರತಿಭಟನೆ ಮತ್ತು ಹಿಂದಿನ ತಿಂಗಳುಗಳಲ್ಲಿನ ಪ್ರತಿಭಟನೆಯಿಂದಾಗಿ ಈಜಿಪ್ಟಿನ ಒಟ್ಟಾರೆ ಪ್ರವಾಸಿ ಉದ್ಯಮವು ಇತ್ತೀಚೆಗೆ ಕುಸಿದಿದೆ. ಪ್ರವಾಸಿ ತಾಣಗಳ ಸುರಕ್ಷತೆಯನ್ನು ಗಣನೆಗೆ ತೆಗೆದುಕೊಳ್ಳುವಾಗ, ರಾಜಕೀಯ ಅಸ್ಥಿರತೆಯು ಸುದ್ದಿ ವರದಿಯಿಂದ ಉತ್ಪ್ರೇಕ್ಷಿತವಾಗಿದೆ ಎಂದು ಪರಿಗಣಿಸಬೇಕು.

ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೆ ಪ್ರವಾಸೋದ್ಯಮ ಮತ್ತು ಪ್ರಯಾಣದ ಕೊಡುಗೆ ಈಗ ತುಂಬಾ ದೊಡ್ಡದಾಗಿದೆ, ಆದ್ದರಿಂದ ಚಟುವಟಿಕೆಯ ಮಟ್ಟದಲ್ಲಿ ಯಾವುದೇ ಕುಸಿತವು ಕಳವಳಕ್ಕೆ ಕಾರಣವಾಗಿದೆ. ಈ ಪರಿಣಾಮಗಳು ಪ್ರವಾಸೋದ್ಯಮಕ್ಕೆ ನೇರವಾಗಿ ಸಂಬಂಧಿಸಿರುವ ಚಟುವಟಿಕೆಗಳನ್ನು ಮೀರಿ ವಿಸ್ತರಿಸುತ್ತವೆ, ಮುಖ್ಯವಾಗಿ ಸಂಪರ್ಕ ಸಂಸ್ಥೆಗಳು, ಹೋಟೆಲ್‌ಗಳು ಮತ್ತು ಅಡುಗೆಗಳು, ಉದ್ಯಮದಲ್ಲಿ ಸಂಸ್ಥೆಗಳು ಮತ್ತು ಉದ್ಯೋಗಿಗಳು ಖರೀದಿಸುವ ಮಧ್ಯಂತರ ಅಥವಾ ಅಂತಿಮ ಸರಕುಗಳನ್ನು ಪೂರೈಸುವ ಕ್ಷೇತ್ರಗಳಿಗೆ, ಇದರಿಂದಾಗಿ ಆರ್ಥಿಕತೆಯ ಎಲ್ಲಾ ಕ್ಷೇತ್ರಗಳು ಹೆಚ್ಚಿನ ಅಥವಾ ಕಡಿಮೆ ಪರಿಣಾಮ ಬೀರುತ್ತವೆ.

ಪ್ರವಾಸೋದ್ಯಮ ವಿದ್ವಾಂಸರು ಪ್ರಯಾಣ ಮತ್ತು ಪ್ರವಾಸೋದ್ಯಮವು ಸ್ಥಿರವಾಗಿಲ್ಲ ಎಂದು ತಿಳಿದಿದ್ದಾರೆ. ಬೆಚ್ಚಗಿನ ಮಳೆಯ ನಂತರ ಅಣಬೆಗಳು ಮೊಳಕೆಯೊಡೆದಷ್ಟು ಬೇಗ ಹೊಸ ಸವಾಲುಗಳು ಎದುರಾಗುತ್ತವೆ. ಈ ಕೆಲವು ಸಮಸ್ಯೆಗಳು ಮತ್ತು ಅವುಗಳನ್ನು ಹೇಗೆ ನಿರ್ವಹಿಸಲು ಪ್ರಾರಂಭಿಸಬೇಕು ಎಂಬುದರ ಕುರಿತು ಕೆಲವು ಸಲಹೆಗಳು ಇಲ್ಲಿವೆ. ಇತ್ತೀಚಿನ ಷೇರು ಮಾರುಕಟ್ಟೆ ಏರಿಳಿತವು ಪ್ರಕ್ಷುಬ್ಧತೆಯ ನಿಜವಾದ ಸೂಚನೆಯಾಗಿದ್ದು ಅದು ೨೦೧೬ ರಲ್ಲಿ ಪ್ರವಾಸೋದ್ಯಮದ ಮೇಲೆ ಪರಿಣಾಮ ಬೀರಬಹುದು ಮತ್ತು ವಿಶ್ವದಾದ್ಯಂತದ ಪ್ರವಾಸೋದ್ಯಮ ವೃತ್ತಿ ಪರರಿಗೆ ಹೊಸ ಸವಾಲುಗಳನ್ನು ನೀಡುತ್ತದೆ.

ಪ್ರವಾಸೋದ್ಯಮಕ್ಕೆ ಹೆಚ್ಚಿನ ತೆರಿಗೆ ವಿಧಿಸಲಾಗುತ್ತದೆ. ಸಂದರ್ಶಕರು ಮತ್ತು ಪ್ರವಾಸಿಗರು ತೆರಿಗೆ ಪಾವತಿಸುವುದಿಲ್ಲ ಎಂಬ ತಪ್ಪು ನಂಬಿಕೆ ಇದೆ. ಸತ್ಯದಿಂದ ಇನ್ನೇನೂ ಸಾಧ್ಯವಿಲ್ಲ. ಬದಲಾಗಿ ಪ್ರವಾಸಿಗರು ವಿಶ್ವದಲ್ಲೇ ಅತಿಹೆಚ್ಚು ತೆರಿಗೆ ವಿಧಿಸುವ ಮತ್ತು ಕಡಿಮೆ ಪ್ರತಿನಿಧಿಸುವ ಜನರು. ನಾವು ಪ್ರಯಾಣಕ್ಕಾಗಿ ಎಷ್ಟು ಖರ್ಚು ಮಾಡುತ್ತೇವೆ ಎಂಬುದನ್ನು ಅರಿತುಕೊಳ್ಳಲು ನಾವು ವಿಮಾನಯಾನ ಟಿಕೆಟ್ ಅನ್ನು ಪರೀಕ್ಷಿಸಬೇಕು, ಕಾರನ್ನು ಬಾಡಿಗೆಗೆ ತೆಗೆದುಕೊಳ್ಳಬೇಕು ಅಥವಾ ಹೋಟೆಲ್‌ನಲ್ಲಿ ಉಳಿಯಬೇಕು. ಈ ತೆರಿಗೆಗಳು ಪ್ರಯಾಣದ ವೆಚ್ಚಕ್ಕೆ ಹೆಚ್ಚಿನದನ್ನು ಸೇರಿಸುವುದಲ್ಲದೆ, ಅವುಗಳು ಉಪದ್ರವಗಳಾಗಿವೆ.

ಉದಾಹರಣೆಗೆ, ಹೆಚ್ಚಿನ ಸ್ಥಳಗಳನ್ನು ಬಿಡಲು ನಿರ್ಗಮನ ಪಾವತಿ ಅಗತ್ಯವಿರುತ್ತದೆ, ಮತ್ತು ಎಲ್ಲಾ ಇತರ ಸ್ಥಳಗಳಲ್ಲಿ ಪ್ರವಾಸಿಗರನ್ನು ಬಲಿಪಶು ಮಾಡುವ ಹೆಚ್ಚುವರಿ ಮಾರ್ಗವಲ್ಲ. ಪ್ರವಾಸಿಗರು ಸಾಮಾನ್ಯವಾಗಿ ಅವರು ಭೇಟಿ ನೀಡುವ ಸ್ಥಳಗಳ ನಾಗರಿಕರಲ್ಲದ ಕಾರಣ ಅವರಿಗೆ ರಾಜಕೀಯ ಧ್ವನಿ ಇಲ್ಲ. ಆದಾಗ್ಯೂ, ಪ್ರವಾಸೋದ್ಯಮದ ಸ್ಥಳೀಯ ಸದಸ್ಯರು ಅವರ ಧ್ವನಿಯಾಗಿ ಕಾರ್ಯನಿರ್ವಹಿಸಬಹುದು. ಪ್ರವಾಸೋದ್ಯಮ, ಇತರ ಯಾವುದೇ ಉತ್ಪನ್ನವು ಆರ್ಥಿಕ ಸ್ಯಾಚುರೇಶನ್ ಮಿತಿಯನ್ನು ಹೊಂದಿರುವಂತೆಯೇ ಮತ್ತು ತೆರಿಗೆಗಳು ಅತಿಯಾದ ಹೊರೆಯಾಗಿದ್ದರೆ ಸ್ಥಳೀಯ ಪ್ರವಾಸೋದ್ಯಮ ವ್ಯವಹಾರವು ಅವರ ಲಾಭದಲ್ಲಿ ಇಳಿಕೆ ಕಾಣುತ್ತದೆ.

ಸಾಮೂಹಿಕ ಪ್ರವಾಸೋದ್ಯಮದ ಹೆಚ್ಚಳವು ಪ್ರವಾಸೋದ್ಯಮ ಮೂಲಸೌಕರ್ಯವನ್ನು ತಗ್ಗಿಸುತ್ತದೆ. ಪ್ರಪಂಚದಾದ್ಯಂತದ ಅನೇಕ ಸ್ಥಳಗಳು ಹೆಚ್ಚಿನ ಸಂಖ್ಯೆಯ ಪ್ರವಾಸಿಗರ ಆಗಮನವನ್ನು ಕಂಡಿವೆ ಆದರೆ ಒಳಹರಿವನ್ನು ನಿಭಾಯಿಸಲು ಸಿದ್ಧವಾಗಿಲ್ಲ. ಪ್ರವಾಸೋದ್ಯಮವು ಕೇವಲ ಮಾರಾಟ ಅಥವಾ ಮಾರುಕಟ್ಟೆಗಿಂತ ಹೆಚ್ಚಿನದಾಗಿದೆ. ಒಂದು ಉತ್ಪನ್ನ ಇರಬೇಕು ಮತ್ತು

ಉತ್ಪನ್ನವು ಆಕರ್ಷಣೆ ಅಥವಾ ಚಟುವಟಿಕೆಯಿಂದ ಮಾತ್ರವಲ್ಲದೆ ಉತ್ಪನ್ನವನ್ನು ತಲುಪಿಸುವ ಸಿಬ್ಬಂದಿಗಳನ್ನೂ ಸಹ ಸಂಯೋಜಿಸಬೇಕು. ಇದರರ್ಥ ಈ ಸಂದರ್ಶಕರನ್ನು ಹೀರಿಕೊಳ್ಳುವ ಸ್ಥಳದ ಸಾಮರ್ಥ್ಯಕ್ಕಿಂತ ಸಂದರ್ಶಕರ ಸಂಖ್ಯೆ ಹೆಚ್ಚಿದ್ದರೆ, ಸ್ಥಳವು ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಸುಸ್ಥಿರವಲ್ಲದ ಸಂಖ್ಯೆಗಳಿಗೆ ಕೆಟ್ಟದಾಗಿ ತಯಾರಾಗಿರುವ ಸ್ಥಳಕ್ಕೆ ಆಗಾಗ್ಗೆ ಹೆಚ್ಚಿನ ಸಂದರ್ಶಕರು ಅಲ್ಪಾವಧಿಯಲ್ಲಿ ಪ್ರವಾಸೋದ್ಯಮ ಉತ್ಸಾಹವನ್ನು ಉಂಟುಮಾಡುತ್ತಾರೆ, ಆದರೆ ದೀರ್ಘಾವಧಿಯ ಪ್ರವಾಸೋದ್ಯಮ ಸಮಸ್ಯೆಗಳನ್ನು ಪರಿಚಯಿಸುತ್ತಾರೆ, ಇದು ಪ್ರವಾಸೋದ್ಯಮದ ನಿರಂತರ ಆರೋಗ್ಯಕ್ಕೆ ಮಾರಕವಾಗಬಹುದು.

ನಿರ್ದಿಷ್ಟ ಪ್ರವಾಸೋದ್ಯಮ ಉತ್ಪನ್ನದ ಮೂಲಸೌಕರ್ಯವು ವಿಸ್ತರಿಸಲ್ಪಟ್ಟಿದೆ. ಪ್ರವಾಸೋದ್ಯಮ ಅಧಿಕಾರಿಗಳು ತಮ್ಮ ಮಾರುಕಟ್ಟೆ ಪ್ರಯತ್ನಗಳಲ್ಲಿ ಮೊದಲ ಮತ್ತು ಕೊನೆಯ ಅನಿಸಿಕೆಗಳು ಪ್ರಮುಖ ಅಂಶಗಳಾಗಿವೆ ಎಂಬುದನ್ನು ನೆನಪಿಟ್ಟುಕೊಳ್ಳಬೇಕು.ಸ್ಥಳೀಯ ಮೂಲಸೌಕರ್ಯ ಸಮಸ್ಯೆಗಳು. ಸಂದರ್ಶಕರಿಗೆ ಹಲವಾರು ಪ್ರವಾಸೋದ್ಯಮ ತಾಣಗಳು ಸಿದ್ಧವಾಗಿಲ್ಲ. ಅವರಿಗೆ ಉತ್ತಮ ನೈರ್ಮಲ್ಯ ಸೌಲಭ್ಯಗಳು ಮತ್ತು ನೀರಿನ ಸಂಸ್ಕರಣಾ ಘಟಕಗಳಿಲ್ಲ. ಅಂತೆಯೇ, ರಸ್ತೆಗಳು ಮತ್ತು ಕಾಲುದಾರಿಗಳು ಎರಡೂ ಸ್ಥಳೀಯ ಜನಸಂಖ್ಯೆಗೆ ಮಾತ್ರವಲ್ಲದೆ ಸಂದರ್ಶಕರ ಜನಸಂಖ್ಯೆಗೆ ಅಪಾಯಗಳನ್ನು ಸೃಷ್ಟಿಸುತ್ತವೆ.

ಉತ್ತಮ ಪ್ರವಾಸೋದ್ಯಮ ವಾತಾವರಣವು ಸ್ಥಳೀಯ ಸಂಸ್ಕೃತಿ ಮತ್ತು ಪರಿಸರದ ಮೇಲೂ ಪರಿಣಾಮ ಬೀರುತ್ತದೆ ಎಂಬುದನ್ನು ಸ್ಥಳೀಯ ಸರ್ಕಾರಗಳು ಗಣನೆಗೆ ತೆಗೆದುಕೊಳ್ಳುವುದು ಅತ್ಯಗತ್ಯ. ಕಳಪೆ ರಸ್ತೆ ಮತ್ತು ರಸ್ತೆ ಗುಣಮಟ್ಟವನ್ನು ಹೊಂದಿರುವ ಭಾರಿ ತೆರಿಗೆಗಳು ನಾಗರಿಕರನ್ನು ಅಸಮಾಧಾನಗೊಳಿಸುವುದು ಮಾತ್ರವಲ್ಲ, ಪ್ರವಾಸೋದ್ಯಮವು ಭವಿಷ್ಯದ ಸಮಸ್ಯೆಗಳತ್ತ ಸಾಗಬಹುದು ಎಂಬ ಎಚ್ಚರಿಕೆಯ ಸಂಕೇತವಾಗಿದೆ.

ಆರೋಗ್ಯಕರ ಪ್ರವಾಸೋದ್ಯಮಕ್ಕೆ ಗ್ರಾಹಕ ಸೇವೆ ಪ್ರಮುಖವಾಗಿದೆ. ಪ್ರವಾಸೋದ್ಯಮ ಅನುಭವದ ಅತ್ಯಂತ ಕಡಿಮೆ ವೆಚ್ಚದ ಮತ್ತು ಪ್ರಮುಖಭಾಗವೇ ಗುಣಮಟ್ಟದ ಗ್ರಾಹಕ ಸೇವೆಯನ್ನು ನೀಡುವುದು ಪ್ರವಾಸೋದ್ಯಮದ ಅನೇಕ ಭಾಗಗಳಿಗೆ ನಿರಂತರ ಸವಾಲಾಗಿದೆ. ಇದು ಎದುರಿಸಲು ಗುತ್ತಿಗೆ ವೆಚ್ಚದ ಸವಾಲು ಆದರೂ, ಇದು ಎದುರಿಸಲು ಮತ್ತು ಜಯಿಸಲು ಕಠಿಣ ಸವಾಲುಗಳಲ್ಲಿ ಒಂದಾಗಿದೆ ಎಂದು ಸಾಬೀತಾಗಿದೆ.

ಈ ಸಮಸ್ಯೆಗಳನ್ನು ಎದುರಿಸಲು ಸಹಾಯ ಮಾಡುವ ಕೆಲವು ಸಲಹೆಗಳನ್ನು ಕೆಳಗೆ ನೀಡಲಾಗಿದೆ. ಪ್ರವಾಸೋದ್ಯಮ ದೃಷ್ಟಿಯನ್ನು ಬೆಳೆಸಿಕೊಳ್ಳಿ, ನಿಮ್ಮ ಸ್ಥಳವು ಯಾವ ರೀತಿಯ ಪ್ರವಾಸೋದ್ಯಮವನ್ನು ಬಯಸುತ್ತದೆ ಎಂದು ನಿಮಗೆ ತಿಳಿದಿಲ್ಲದಿದ್ದರೆ ನೀವು ಮೂಲಸೌಕರ್ಯವನ್ನು ರಚಿಸಲು ಪ್ರಾರಂಭಿಸಲು ಸಾಧ್ಯವಿಲ್ಲ. ಪ್ರತಿಯೊಂದು ಸ್ಥಳಕ್ಕೂ ಪ್ರವಾಸೋದ್ಯಮದ ಪ್ರತಿಯೊಂದು ಸ್ವರೂಪವೂ ಸರಿಯಲ್ಲ, ಮತ್ತು ಯಾವುದೇ ಸ್ಥಳವು ಎಲ್ಲ ಜನರಿಗೆ ಎಲ್ಲ ವಿಷಯಗಳಾಗಲು ಸಾಧ್ಯವಿಲ್ಲ. ನಿಮ್ಮ ಸಮುದಾಯದ ಅಗತ್ಯತೆಗಳನ್ನು ಯಾವ ರೀತಿಯ ಪ್ರವಾಸೋದ್ಯಮವು ಉತ್ತಮವಾಗಿ ಪೂರೈಸುತ್ತದೆ ಮತ್ತು ಪ್ರವಾಸೋದ್ಯಮವು ನಿಮ್ಮ ಸಮುದಾಯದ ಜೀವನದ ಗುಣಮಟ್ಟವನ್ನು ಹೇಗೆ ಹೆಚ್ಚಿಸುತ್ತದೆ ಎಂಬುದನ್ನು ಯೋಚಿಸಿ.

ಒಮ್ಮೆ ನೀವು ಯಾವ ರೀತಿಯ ಪ್ರವಾಸೋದ್ಯಮವನ್ನು ಬಯಸುತ್ತೀರಿ ಎಂಬ ದೃಷ್ಟಿಯನ್ನು ನೀವು ಹೊಂದಿದ್ದರೆ, ದೃಷ್ಟಿ ವಾಸ್ತವಿಕ ಮತ್ತು ಪಡೆಯಬಹುದಾದ ಮತ್ತು ಅಂತಿಮವಾಗಿ ಈ ದೃಷ್ಟಿಯನ್ನು ರಚಿಸುವ ರೀತಿಯಲ್ಲಿ ಯಾವ ಅಡೆತಡೆಗಳು ನಿಂತಿವೆ ಎಂದು ನೀವು ವಿಶ್ಲೇಷಿಸಲು ಪ್ರಾರಂಭಿಸಬಹುದು. ಕಾನೂನುಗಳು ಮತ್ತು ಕಾರ್ಯವಿಧಾನಗಳನ್ನು ಸರಳಗೊಳಿಸಿ. ಪ್ರವಾಸೋದ್ಯಮವು ಯಾವುದೇ ನಿರ್ದಿಷ್ಟ ಸ್ಥಳಕ್ಕೆ ಹೆಚ್ಚಿನ ಪ್ರಮಾಣದ ಕರೆನ್ಸಿಯನ್ನು ಉತ್ಪಾದಿಸುತ್ತದೆ. ಆದಾಗ್ಯೂ, ಬ್ಯಾಂಕುಗಳು ಮತ್ತು ಹೋಟೆಲ್‌ಗಳಂತಹ ವಿನಿಮಯ ಕೇಂದ್ರಗಳು ಸ್ಥಳೀಯ ಕರೆನ್ಸಿಯನ್ನು ಖರೀದಿಸಲು ಹೆಚ್ಚಿನ ಶುಲ್ಕ ವಿಧಿಸಿದಾಗ, ಕಪ್ಪು ಮಾರುಕಟ್ಟೆಗೆ ಹೋಗುವ ಪ್ರವೃತ್ತಿ ಕಂಡುಬರುತ್ತದೆ, ಸ್ಥಳೀಯ ಕಾನೂನುಗಳನ್ನು ಗೌರವಿಸಬಾರದು ಅಥವಾ ತಮ್ಮನ್ನು ತಾವು ಅಪಾಯಕ್ಕೆ ಸಿಲುಕಿಸಿಕೊಳ್ಳಬಹುದು.

ವಿನಿಮಯದ ನಂತರದ ದರಗಳು ಮತ್ತು ಕರೆನ್ಸಿಯನ್ನು ಕಾನೂನು ಬದ್ಧವಾಗಿ ಮತ್ತು ಯಾವ ಸಮಯದಲ್ಲಿ ವಿನಿಮಯ ಮಾಡಿಕೊಳ್ಳಬಹುದು. ಸ್ಥಳೀಯ ಕರೆನ್ಸಿ ಮತ್ತು ಡಾಲರ್‌ಗಳು ಅಥವಾ ಯುರೋಗಳು ಮತ್ತು ಚೀನೀಯುವಾನ್ ನಂತಹ ಅಂತರರಾಷ್ಟ್ರೀಯ ಕರೆನ್ಸಿಯಲ್ಲಿ ಸಾಧ್ಯವಾದಾಗಲೆಲ್ಲಾ ಬೆಲೆಗಳನ್ನು ಪೋಸ್ಟ್‌ಮಾಡಿ. ಪೆಟ್ಟಿಗೆಯ ಹೊರಗೆ ಪರಿಹಾರಗಳನ್ನು ಹುಡುಕುವುದು. ಬಾಟಮ್ ಲೈನ್ ಏನೆಂದರೆ ಸಮಸ್ಯೆ ಏನೇ ಇರಲಿ ಅದನ್ನು ಬಿಟ್ಟುಕೊಡಬೇಡಿ. ಸೃಜನಶೀಲರಾಗಿರಿ, ಕಿರುನಗೆ ಮತ್ತು ಪ್ರವಾಸೋದ್ಯಮವು ಸವಾಲುಗಳನ್ನು ಹೊಸ ಮತ್ತು ಉತ್ತೇಜಕ ಅವಕಾಶಗಳಾಗಿ ಪರಿವರ್ತಿಸುವ ಬಗ್ಗೆ ನೆನಪಿಡಿ. ಹೊಸ ಪಾಲುದಾರರನ್ನು ಹುಡುಕಿ, ಉದಾಹರಣೆಗೆ ಹಳೆಯ ಸಮಸ್ಯೆಗಳಿಗೆ ಹೊಸ ಪರಿಹಾರಗಳನ್ನು ರಚಿಸಲು ಕಾನೂನು ಜಾರಿ, ಸ್ಥಳೀಯ ಶಾಲಾ ಮಂಡಳಿಗಳು ಅಥವಾ ಆಸ್ಪತ್ರೆಗಳ ಸಹಾಯವನ್ನು ಪಡೆಯಿರಿ

**ಮೂಲಸೌಕರ್ಯ**

ಸಾಮೂಹಿಕ ಪ್ರವಾಸೋದ್ಯಮವನ್ನು ಸಾಧಿಸುವ ಮೊದಲ ಸಮಸ್ಯೆ ಎಂದರೆ ಸಾಕಷ್ಟು ಮೂಲಸೌಕರ್ಯಗಳ ಕೊರತೆ. ಹೆಚ್ಚಿನ ಪ್ರವಾಸಿಗರು ದೊಡ್ಡ ನಗರಗಳಿಗೆ ಆಗಮಿಸುತ್ತಾರೆ ಆದರೆ ಸುತ್ತಲೂ ಪ್ರಯಾಣಿಸಲು ಬಯಸುತ್ತಾರೆ. ಉತ್ತಮ ಸಂಪರ್ಕ ಕಲ್ಪಿಸುವ ರಸ್ತೆಗಳು, ಬಸ್ಸುಗಳು, ರೈಲ್ವೆ ಸಾರಿಗೆಯ ವಿಷಯದಲ್ಲಿ ಹೆಚ್ಚು ಪರಿಣಾಮ ಬೀರುತ್ತವೆ.

**ಸುರಕ್ಷತೆ**

ಮತ್ತೊಂದು ಸಮಸ್ಯೆ ಪ್ರವಾಸಿಗರ ಅವಶ್ಯಕತೆಗಳಲ್ಲಿನ ದೊಡ್ಡ ಅಂತರ ಮತ್ತು ಹೋಟೆಲ್ ಕೋಣೆಗಳ ಸಮಂಜಸವಾದ ಬೆಲೆಯಲ್ಲಿ ಲಭ್ಯತೆ. ಬೇಡಿಕೆ ಸ್ಪಷ್ಟವಾಗಿ ಪೂರೈಕೆಯನ್ನು ಮೀರಿದೆ ಮತ್ತು ಖಾಸಗಿವಲಯವು ಬಜೆಟ್ ಅತಿಥಿಗೃಹಗಳು ಮತ್ತು ಬೆಡ್ ಮತ್ತು ಬ್ರೇಕ್ಫಾಸ್ಟ್ ಹೋಟೆಲ್ ಗಳಂತಹ ಹೆಚ್ಚಿನ ಸಂಖ್ಯೆಯ ಪರ್ಯಾಯಗಳನ್ನು ಹೊಂದಿದೆ. ಗೋವಾದಂತಹ ಪ್ರವಾಸಿ ತಾಣಗಳು ಅನೇಕ ವಿದೇಶಿ ಪ್ರವಾಸಿಗರನ್ನು ಆಕರ್ಷಿಸುತ್ತವೆ. ಗೋವಾ ಕಡಲ ತೀರದಲ್ಲಿ ಐರಿಶ್-ಬ್ರಿಟಿಷ್ ಮಹಿಳೆಯ ಹತ್ಯೆಯ ಪ್ರಕರಣವು ತುಂಬಾ ಕೆಟ್ಟ ಅಭಿಪ್ರಾಯವನ್ನು ಸೃಷ್ಟಿಸಿದೆ ಮತ್ತು ಇತ್ತೀಚೆಗೆ ಗೋವಾ ಪ್ರವಾಸಿಗರ ಸುರಕ್ಷತೆಗೆ ಸಂಬಂಧಿಸಿದ ಹಾನಿಕಾರಕ ಅಂಕಿ ಅಂಶಗಳನ್ನು ಉಲ್ಲೇಖಿಸಿ ಗೋವಾ ಹತ್ಯೆಯ ಕುರಿತು ದಿ ಗಾರ್ಡಿಯನ್ (ಯುಕೆ) ಲೇಖನವೊಂದನ್ನು ನಡೆಸಿತು.

ಲೇಖನದ ಪ್ರಕಾರ, ಕಳೆದ ೧೨ ವರ್ಷಗಳಲ್ಲಿ ಗೋವಾದ ನಾಲ್ಕು ಸ್ಥಳೀಯ ಜಿಲ್ಲೆಗಳಲ್ಲಿ ೨೪೫ ಪ್ರವಾಸಿಗರು ಈ ಸಂದರ್ಭಗಳಲ್ಲಿ ಸಾವನ್ನಪ್ಪಿದ್ದಾರೆ. ಭಾರತವು ಮಹಿಳೆಯರಿಗೆ ಅಸುರಕ್ಷಿತ ಸ್ಥಳವಾಗಿದೆ ಎಂಬ ಗ್ರಹಿಕೆಗೆ ಸಂಬಂಧಿಸಿದಂತೆ ಗಾಳಿಯನ್ನು ತೆರವುಗೊಳಿಸಲು ಮಹಿಳಾ ಪ್ರವಾಸಿಗರಿಗೆ ಸುರಕ್ಷತೆಯನ್ನು ಖಾತರಿ ಪಡಿಸುವುದು ಬಹಳ ಮುಖ್ಯ. ವಿದೇಶಿ ಮಹಿಳಾ ಪ್ರವಾಸಿಗರ ಕಿರುಕುಳ ಮತ್ತು ಅತ್ಯಾಚಾರಗಳು ನಿಜಕ್ಕೂ ದೊಡ್ಡ ಕಳಂಕವಾಗಿದೆ ಇದನ್ನು ಭಾರತವು, ಗ್ರಹಿಸಬೇಕಾಗಿದೆ

**ಪರಿಸರ ಪ್ರವಾಸೋದ್ಯಮದ ಕೊರತೆ**

ಭಾರತದ ಐತಿಹಾಸಿಕ ಪರಂಪರೆ ಮತ್ತು ಸ್ಮಾರಕಗಳನ್ನು ಮಾತ್ರ ಪ್ರದರ್ಶಿಸುವ ಹಳೆಯ ಶೈಲಿಯ ಪರಿಕಲ್ಪನೆಯು ಬದಲಾಗುತ್ತಿದೆ ಮತ್ತು ಸ್ಥಳೀಯ ಸಸ್ಯ ಮತ್ತು ಪ್ರಾಣಿಗಳನ್ನು ನೋಡಲು

ಬಯಸುವ ಪರಿಸರ ಪ್ರವಾಸೋದ್ಯಮದಲ್ಲಿ ವಿಶ್ವದಾದ್ಯಂತ ಜನರು ಹೆಚ್ಚು ಆಸಕ್ತಿ ಹೊಂದಿದ್ದಾರೆ. ಉದಾಹರಣೆಗೆ, ಪಶ್ಚಿಮ ಬಂಗಾಳದ ಸುಂದರ್ ಬನ್ಸ್ ಪ್ರದೇಶದಲ್ಲಿ ಪ್ರವಾಸೋದ್ಯಮವನ್ನು ಹೆಚ್ಚಿಸುವುದು ಆಕರ್ಷಕ ಪ್ರತಿಪಾದನೆಯಾಗಿದೆ. ಈ ಪ್ರದೇಶವು ವಿಶ್ವದ ಅತಿದೊಡ್ಡ ಮ್ಯಾಂಗ್ರೋವ್ ಅರಣ್ಯ ಮತ್ತು ವಿಲಕ್ಷಣ ಸಸ್ಯ ಮತ್ತು ಪ್ರಾಣಿ ಮತ್ತು ರಾಯಲ್ ಬಂಗಾಳ ಹುಲಿಯನ್ನು ಒಳಗೊಂಡಿದೆ. ಆದರೆ ಪರಿಸರ ಪ್ರವಾಸೋದ್ಯಮ ಉದ್ದೇಶಗಳಿಗಾಗಿ, ಈ ಪ್ರದೇಶಕ್ಕೆ ಮತ್ತಷ್ಟು ಪರಿಸರ ಹಾನಿಯನ್ನು ತಡೆಗಟ್ಟಲು ಉನ್ನತ ಮಟ್ಟದ ಪ್ರವಾಸೋದ್ಯಮ ಮತ್ತು ಸಾಮೂಹಿಕ ಪ್ರವಾಸೋದ್ಯಮವನ್ನು ಮಾತ್ರ ಪ್ರೋತ್ಸಾಹಿಸಬಾರದು.

**ಪರಿಸರ ಹಾನಿ**

ಪರಿಸರದ ಹಾನಿಯ ಬಗ್ಗೆ ತಿಳಿಸುವುದಾದರೆ ಉದಾಹರಣೆಗೆ ಹಿಮಾಲಯ ಪ್ರದೇಶದ ಅನೇಕ ಏಕಾಂತ ಪ್ರದೇಶಗಳಿಗೆ ಸಾಮೂಹಿಕ ಪ್ರವಾಸೋದ್ಯಮವೂ ಒಳ್ಳೆಯದಲ್ಲ ಏಕೆಂದರೆ ಈ ದೂರದ ಸ್ಥಳಗಳು ಪರಿಸರ ಸಮತೋಲನವನ್ನು ಕಾಪಾಡುವ ಸಮಸ್ಯೆಗಳನ್ನು ಎದುರಿಸುತ್ತಿವೆ. ಪ್ರವಾಸಿಗರಿಂದ ಟನ್‌ಗಟ್ಟಲೆ ತ್ಯಾಜ್ಯವನ್ನು ಪರ್ವತಗಳಲ್ಲಿ ಕಾಣಬಹುದು, ಇದು ಹಿಮಾಲಯದ ಪ್ರಾಚೀನ ಸೌಂದರ್ಯವನ್ನು ಹಾಳು ಮಾಡುತ್ತದೆ. ಶಿಮ್ಲಾದಂತಹ ಅನೇಕ ಪ್ರವಾಸಿ ತಾಣಗಳಿಗೆ ಹೋಗುವ ಮಾರ್ಗದಲ್ಲಿ ಪ್ಲಾಸ್ಟಿಕ್ ಚೀಲಗಳು ಸುಂದರವಾದ ತೊರೆಗಳು ಮತ್ತು ಕೊಳೆಯ ರಾಶಿಯನ್ನು ಕಾಣಬಹುದು.

ಸಾಂಸ್ಕೃತಿಕ ಪ್ರವಾಸೋದ್ಯಮ ಸಹ ಮುಖ್ಯವಾಗಿದೆ ಏಕೆಂದರೆ ಅನೇಕ ವಿದೇಶಿಯರು ಭಾರತೀಯ ಹಳ್ಳಿಗಳಲ್ಲಿ ಜೀವನವನ್ನು ಅನುಭವಿಸಲು ಬಯಸುತ್ತಾರೆ, ಆದರೆ ಭಾರತದ ಹಳ್ಳಿಗಳು ಪ್ರವಾಸೋದ್ಯಮಕ್ಕೆ ಮುಕ್ತವಾಗಿಲ್ಲ.

**ವೈದ್ಯಕೀಯ ವ್ಯವಸ್ಥೆಯಲ್ಲಿನ ಸಮಸ್ಯೆಗಳು**

ವೈದ್ಯಕೀಯ ಪ್ರವಾಸೋದ್ಯಮವು ಹೊಸ ಮತ್ತು ಲಾಭದಾಯಕ ಪ್ರದೇಶವಾಗಿದೆ ಮತ್ತು ನೆರೆಯ ರಾಷ್ಟ್ರಗಳಿಂದ ಹೆಚ್ಚಿನ ಸಂಖ್ಯೆಯಲ್ಲಿ ವೈದ್ಯಕೀಯ ಚಿಕಿತ್ಸೆಗಾಗಿ ಭಾರತಕ್ಕೆ ವಿಶೇಷವಾಗಿ ಬಾಂಗ್ಲಾದೇಶ ಮತ್ತು ಅಫ್ಘಾನಿಸ್ತಾನದಿಂದ ಬರುತ್ತಿದೆ. ಆದ್ದರಿಂದ ಖಾಸಗಿ ಆಸ್ಪತ್ರೆಗಳಲ್ಲಿ ಯಾವುದೇ ದುಷ್ಕೃತ್ಯದ ಪ್ರಕರಣಗಳಿಲ್ಲ ಮತ್ತು ಭಾರತೀಯ ಆರೋಗ್ಯ ಸೇವೆ ಅಗ್ಗದ ಮತ್ತು ವಿಶ್ವಾಸಾರ್ಹವಾಗಿ ಉಳಿದಿದೆ ಎಂದು ಕಾಳಜಿ ವಹಿಸಬೇಕು.

**ನೆರೆಹೊರೆಯ ಸಂದರ್ಶಕರ ಕೊರತೆ**

ಈ ಸಮಯದಲ್ಲಿ, ಭಾರತವು ಯುಎಸ್ ನಿಂದ ಗರಿಷ್ಠ ಸಂಖ್ಯೆಯ ಪ್ರವಾಸಿಗರನ್ನು ಪಡೆಯುತ್ತದೆ, ನಂತರದ ಸ್ಥಾನದಲ್ಲಿ ಬಾಂಗ್ಲಾದೇಶವಿದೆ, ಆದರೆ ಪ್ರಾದೇಶಿಕವಾಗಿ, ಪಶ್ಚಿಮ ಯುರೋಪ್ ಮತ್ತು ಉತ್ತರ ಅಮೆರಿಕವು ದೇಶದ ವಿದೇಶಿ ಪ್ರವಾಸಿಗರಲ್ಲಿ ಹೆಚ್ಚಿನ ಭಾಗವನ್ನು ಹೊಂದಿದೆ ೨೩.೪೨% ಮತ್ತು ೧೮.೬೨% ೨೦೧೫ ರಲ್ಲಿ ಕ್ರಮವಾಗಿ. ದಕ್ಷಿಣ ಏಷ್ಯಾ ೨೪.೨೫% ರೊಂದಿಗೆ ಅಗ್ರಸ್ಥಾನದಲ್ಲಿದೆ.

ಆದರೂ ಆತಂಕಕಾರಿ ಸಂಗತಿಯೆಂದರೆ, ನಾಳೆಯ ಪ್ರವಾಸಿಗರನ್ನು ಕಳುಹಿಸುವ ನಿರೀಕ್ಷೆಯಿರುವ ಇತರ ಪ್ರದೇಶಗಳು ಭಾರತವನ್ನು ತಮ್ಮ ರೇಡಾರ್‌ನಲ್ಲಿ ಹೊಂದಿಲ್ಲ. ೨೦೧೫ ರಲ್ಲಿ, ಭಾರತದ ವಿದೇಶಿ ಪ್ರವಾಸಿಗರಲ್ಲಿ ಕೇವಲ ೮.೭೨% ಮಾತ್ರ ಆಗ್ನೇಯ ಏಷ್ಯಾದವರಾಗಿದ್ದರೆ, ಪೂರ್ವ ಏಷ್ಯಾ ೬.೯೨%, ಪಶ್ಚಿಮ ಏಷ್ಯಾ ೫.೨೦%, ಪೂರ್ವ ಯುರೋಪ್ ೪.೧೨%, ಆಸ್ಟ್ರೇಲಿಯಾ ೩.೮೯%, ಆಫ್ರಿಕಾ ೩.೬೬% ಮತ್ತು ಮಧ್ಯ ಮತ್ತು ದಕ್ಷಿಣ ಅಮೆರಿಕಾ ೦.೮೮%ರಷ್ಟಿದೆ.

**ಭದ್ರತೆ**

ಭಾರತ ತನ್ನ ಸಹ ಪರಮಾಣು ನೆರೆಯ ಪಾಕಿಸ್ತಾನದೊಂದಿಗೆ ನಿರಂತರ ಉದ್ವಿಗ್ನ ಸ್ಥಿತಿಯಲ್ಲಿದೆ ಮತ್ತು ಯು.ಎಸ್. ಸರ್ಕಾರವು ಪ್ರಯಾಣಿಕರಿಗೆ ದೀರ್ಘಕಾಲದ ಗಡಿ ಪ್ರದೇಶಗಳನ್ನು ತಪ್ಪಿಸಲು ಎಚ್ಚರಿಕೆ ನೀಡಿದೆ, ವಿಶೇಷವಾಗಿ ಕಾಶ್ಮೀರದಲ್ಲಿ. ೨೦೦೮ ರ ಮುಂಬೈ ದಾಳಿಯಲ್ಲಿ ಪ್ರವಾಸಿಗರಿಗೆ ಭಯೋತ್ಪಾದನೆಯ ಬೆದರಿಕೆ, ರೈಲು ನಿಲ್ದಾಣದ ವೇದಿಕೆ, ಕೆಫೆಗಳು ಮತ್ತು ಐಷಾರಾಮಿ ಹೋಟೆಲ್‌ಗಳಲ್ಲಿ ಬಂದೂಕು ಧಾರಿಗಳು ಗುಂಡು ಹಾರಿಸಿದಾಗ; ಬಲಿಪಶುಗಳಲ್ಲಿ ೧೦ ದೇಶಗಳ ೨೮ ವಿದೇಶಿಯರು ಸೇರಿದ್ದಾರೆ. ಅಂದಿನಿಂದ, ಇಸ್ಲಾಮಿಕ್ ಉಗ್ರಗಾಮಿ ಮತ್ತು ದಂಗೆಕೋರ ಗುಂಪುಗಳು ನಡೆಸಿದ ಸಣ್ಣ–ಪ್ರಮಾಣದ ಬಾಂಬ್ ಸ್ಫೋಟಗಳು ಪಾಶ್ಚಿಮಾತ್ಯರು ಆಗಾಗ್ಗೆ ಬರುವ ಕೆಲವು ಸಾರ್ವಜನಿಕ ಸ್ಥಳಗಳ ವಿರುದ್ಧ ಮುಂದುವರೆದಿದೆ.

**ಸಾಗರೋತ್ತರ ಮಾರುಕಟ್ಟೆಯ ಕೊರತೆ**

ಭಾರತವು ವಿದೇಶದಲ್ಲಿ ಕೇವಲ ೧೪ ಪ್ರವಾಸೋದ್ಯಮ ಪ್ರಚಾರ ಕಚೇರಿಗಳನ್ನು ಹೊಂದಿದೆ, ಇದು ದೇಶಗಳಲ್ಲಿ ನೆಲೆಗೊಂಡಿದೆ, ಅದು ಅದರ ಪ್ರಮುಖ ಆದಾಯದ

ಮೂಲವಾಗಿದೆ. ಪ್ರಪಂಚದಾದ್ಯಂತ, ಇದು ದೇಶದ ರಾಯಭಾರ ಕಚೇರಿಗಳು ಮತ್ತು ದೂತಾವಾಸಗಳ ಜಾಲವಾಗಿದ್ದು ಅದು ಬಾಹ್ಯ ಹಿತಾಸಕ್ತಿಗಳ ಶಾಶ್ವತ ಪ್ರವರ್ತಕರಾಗಿ ಕಾರ್ಯನಿರ್ವಹಿಸುತ್ತದೆ. ಅಂತಹ ರಾಜತಾಂತ್ರಿಕ ಜಾಲದ ಮೂಲಕ ಜಾಗತಿಕ ಮಟ್ಟದಲ್ಲಿ, ಭಾರತವು ೧೮೦ ರಾಯಭಾರ ಕಚೇರಿಗಳು ಮತ್ತು ಉನ್ನತ ಆಯೋಗಗಳು, ಶಾಶ್ವತ ಕಾರ್ಯಗಳು ಮತ್ತು ದೂತಾವಾಸಗಳೊಂದಿಗೆ ೧೨ ನೇ ಸ್ಥಾನದಲ್ಲಿದೆ. ಭಾರತವನ್ನು ಪ್ರವಾಸೋದ್ಯಮ ತಾಣವಾಗಿ ಮಾರುಕಟ್ಟೆಗೆ ತರಲು ಅವರು ಹೆಚ್ಚಿನದನ್ನು ಮಾಡಬಹುದು.

ಉತ್ತಮವಾಗಿ ನಿರ್ವಹಿಸಲ್ಪಟ್ಟ ಪ್ರವಾಸೋದ್ಯಮವು ನಿಜವಾಗಿಯೂ ಮ್ಯಾಜಿಕ್‌ಬುಲೆಟ್ ಆಗಿದೆ. ಆದರಗಳಿಕೆ ಮತ್ತು ಉದ್ಯೋಗಗಳಲ್ಲದೆ, ಇದು ದೇಶಕ್ಕೆ ಸಕಾರಾತ್ಮಕ ಚಿತ್ರಣವನ್ನು ನಿರ್ಮಿಸುತ್ತದೆ. ಕಳೆದ ಎರಡು-ಮೂರು ದಶಕಗಳಲ್ಲಿ ಉದ್ಯಮವು ದೇಶದಲ್ಲಿ ಸರ್ವಾಂಗೀಣ ಗಣನೀಯ ಅಭಿವೃದ್ಧಿಯನ್ನು ದಾಖಲಿಸಿದ್ದರೂ, ಹೆಚ್ಚಿನ ಸಾಮರ್ಥ್ಯವು ಅದರ ಬೆಳವಣಿಗೆಯನ್ನು ಇನ್ನೂ ಬಳಸಿಕೊಂಡಿಲ್ಲ ಮತ್ತು ಇನ್ನೂ ಹೆಚ್ಚಿನದಾಗಿದೆ ಎಂದು ಭಾರತದಲ್ಲಿ ಪ್ರವಾಸೋದ್ಯಮದ ಬೆಳವಣಿಗೆಯ ಮೇಲಿನ ವಿಶ್ಲೇಷಣೆಯು ತೋರಿಸುತ್ತದೆ. ಅಪೇಕ್ಷಿತವಾಗಿ ಉಳಿದಿದೆ. ನಮ್ಮ ದೇಶದಲ್ಲಿ ಈ ಉದ್ಯಮದ ಸೀಮಿತ ಮತ್ತು ತೃಪ್ತಿಕರವಲ್ಲದ ಬೆಳವಣಿಗೆಯು ಹಲವಾರು ಸಮಸ್ಯೆಗಳಿಂದಾಗಿ ಮತ್ತು ಅದು ಎದುರಿಸುತ್ತಿರುವ ಹಲವಾರು ತೊಂದರೆಗಳಿಂದಾಗಿ. ಭಾರತದಲ್ಲಿ ಪ್ರವಾಸೋದ್ಯಮದ ಬೆಳವಣಿಗೆಯನ್ನು ಸೀಮಿತಗೊಳಿಸಿದೆ.

ಪ್ರವಾಸಿಗರಿಗೆ ಆರೋಗ್ಯಕರ ಮತ್ತು ಆರಾಮದಾಯಕ ವಸತಿ ಸೌಕರ್ಯಗಳ ಕೊರತೆ, ಆದರೆ ಕಡಿಮೆ ಖರ್ಚು ಮಾಡುವ ಮಧ್ಯಮ ವರ್ಗದ ಪ್ರವಾಸಿಗರಿಗೆ ಸಮಂಜಸವಾಗಿದೆ. ಬಳ್ಳಾರಿ ಜಿಲ್ಲೆಯ ಸಂಡೂರು ಗಣಿಗಾರಿಕೆಯಿಂದ ಪರಿಸರ ನಾಶವಾಗುತ್ತಿದೆ. ನವಿಲುಸ್ವಾಮಿ ದೇವಸ್ಥಾನಕ್ಕೆ ಹೋಗಿ ಬರಲು ಸರಿಯಾದ ರಸ್ತೆಯೂ ಇಲ್ಲ. ರಸ್ತೆ ಇಲ್ಲದ ಕಾರಣಕ್ಕಾಗಿ ಬಸ್ಸಿನ ಸಂಚಾರವೂ ಇಲ್ಲವಾಗಿದೆ. ಸುಬ್ಬರಾಯನ ಹಳ್ಳಿಯಿಂದ ದೇವಸ್ಥಾನಕ್ಕೆ ಕಚ್ಚಾ ರಸ್ತೆ ಇದ್ದು ಜೀಪ್‌ನಲ್ಲಿ ಬರಬಹುದು. ನವಿಲುಸ್ವಾಮಿ ದೇವಸ್ಥಾನಕ್ಕೆ ಮೂಲಸೌಕರ್ಯ ಒದಗಿಸಿದರೆ ಪ್ರಮುಖ ಪ್ರೇಕ್ಷಣೀಯ ಸ್ಥಳವಾಗಲಿದೆ.

**ಕೊನೆ ಟಿಪ್ಪಣಿಗಳು**

೧. ಎಸ್.ಎಸ್.ಶಿವರುದ್ರಸ್ವಾಮಿ, ಭಾರತೀಯ ಪ್ರವಾಸೋದ್ಯಮ, ೨೦೦೭, ಪು.ಸಂ. ೧-೧೮೬

೨. ದೇವರಾಜ.ಎಸ್, ಕರ್ನಾಟಕದ ಪ್ರವಾಸಿ ತಾಣಗಳು, ೨೦೧೨, ಪು.ಸಂ.೧೮೧

೩. ಅದೇ ಪು.ಸಂ. ೧೮೯

೪. ಐ.ಸೇಸುನಾಥನ್, ಕರ್ನಾಟಕದ ಪ್ರವಾಸಿ ತಾಣಗಳು, ೨೦೧೦, ಪು.ಸಂ. ೧೬೦

೫. ಅದೇ ಪು.ಸಂ. ೧೭೬

೬. ಶ್ರೀಧರ ಅಡಿಗ, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು, ೨೦೦೬, ಪು.ಸಂ. ೧೧೮

೭. ಶಂಕರ.ಕೆ.ಸೀರಿ, ಕ್ಷೇತ್ರ ದರ್ಶನ ಪ್ರವಾಸ ಕಥನ, ೨೦೦೬,

೮. ಕವೀಶ್ವರ, ಭಾರತದ ಪ್ರೇಕ್ಷಣೀಯ ಸ್ಥಳಗಳು, ೨೦೦೭,

೯. ರಘೋತ್ತಮ ತೀರ್ಥ, ಪ್ರೇಕ್ಷಣೀಯ ಭಾರತ, ೨೦೦೯, ಪು.ಸಂ. ೩೫-೫೭

೧೦. ಅದೇ ಪು.ಸಂ. ೬೭-೭೩

## ಅಧ್ಯಾಯ-೬

## ಉಪಸಂಹಾರ

೬.೧ ಗ್ರಂಥಋಣ

೬.೨ ಆಧಾರ ಗ್ರಂಥಗಳು

೬.೩ ಛಾಯಾಚಿತ್ರಗಳು

೬.೪ ನಕ್ಷೆಗಳು

# ಅಧ್ಯಾಯ – ೬

## ಉಪಸಂಹಾರ

ಕರ್ನಾಟಕವನ್ನು ಪ್ರಾಚೀನ ಕಾಲದಿಂದಲೂ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು ಹಾಗೂ ವಿಜಯನಗರದ ಅರಸರು ಹೀಗೆ ಇತರ ಪ್ರಮುಖ ರಾಜಮನೆತನಗಳ ಜೊತೆಯಲ್ಲಿ ಹಲವಾರು ಸಣ್ಣಪುಟ್ಟ ಮನೆತನಗಳು ರಾಜ್ಯಭಾರ ನಡೆಸಿವೆ. ಇವರೆಲ್ಲರೂ ಕರ್ನಾಟಕ ಸಂಸ್ಕೃತಿಯನ್ನು ಸಮೃದ್ಧಗೊಳಿಸುವಲ್ಲಿ ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿದ್ದಾರೆ. ಬಳ್ಳಾರಿ ಜಿಲ್ಲೆಯು ಕರ್ನಾಟಕದ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ.

ಈ ಜಿಲ್ಲೆಯ ಭೌಗೋಳಿಕ ಪರಿಸರದಲ್ಲಿ ಶಿಲಾಯುಗದ ಕಾಲದಿಂದ ಪ್ರಸ್ತುತದವರೆಗೂ ಮಾನವ ಬದುಕಿದ ಕುರುಹುಗಳು ಮತ್ತು ಆಳ್ವಿಕೆ ನಡೆಸಿದ ವಿವಿಧ ಕಾಲಘಟ್ಟಗಳ ರಾಜಮನೆತನಗಳ ಪುರಾತತ್ವೀಯ ಅವಶೇಷಗಳು ಕಂಡುಬರುತ್ತವೆ. ಇತಿಹಾಸ ರಚನೆಯಲ್ಲಿ ಸ್ಥಳೀಯ ಚರಿತ್ರೆಯು ಬಹಳ ಮುಖ್ಯ ಪಾತ್ರವಹಿಸುತ್ತದೆ. ಈ ನಿಟ್ಟಿನಲ್ಲಿ ಸಂಡೂರು ತಾಲ್ಲೂಕಿನ ಇತಿಹಾಸವನ್ನು ಕ್ಷೇತ್ರಕಾರ್ಯದ ಮೂಲಕ ಮುಖ್ಯವಾದ ಸ್ಥಳಗಳ ಪರಿಶೀಲನೆ ಕೈಗೊಂಡು ವಿವಿಧ ಮಾಹಿತಿಗಳನ್ನು ಸಂಗ್ರಹಿಸಿ ಒಂದೆಡೆ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

ಸಂಡೂರು ತಾಲ್ಲೂಕಿನ ಪ್ರವಾಸಿ ತಾಣಗಳು ಎಂಬ ಪ್ರಬಂಧದ ಈ ಅಧ್ಯಯನದಲ್ಲಿ ಈ ತಾಲ್ಲೂಕಿನ ವಿವಿಧ ಮುಖಗಳ ಪರಿಚಯವನ್ನು ಹಲವು ಅಧ್ಯಾಯಗಳಲ್ಲಿ ಮಾಡಿಕೊಡಲಾಗಿದೆ. ಅವುಗಳಲ್ಲಿ ಈ ತಾಲ್ಲೂಕಿನ ಭೌಗೋಳಿಕ ಹಿನ್ನಲೆಯ ಭಾಗದಲ್ಲಿ ಇಲ್ಲಿಯ ಪರಿಸರದಲ್ಲಿ ದೊರೆಯುವ ಲೋಹಸಂಪತ್ತು, ಅರಣ್ಯಸಂಪತ್ತು, ಜಲಸಂಪತ್ತು, ಮತ್ತು ಇಲ್ಲಿನ ಬೆಳೆಗಳು, ಪಶು-ಪಕ್ಷಿ ಮೊದಲಾದವುಗಳ ಮಹತ್ವವನ್ನು ಕಂಡುಕೊಳ್ಳಲಾಗಿದೆ. ಪೂರ್ವ ಇತಿಹಾಸ ಭಾಗದಲ್ಲಿ ಈ ತಾಲ್ಲೂಕಿನ ದರೋಜಿ, ಜೋಗ, ಕುರೆಕುಪ್ಪೆ, ಅಯ್ಯನಹಳ್ಳಿ, ಅಪ್ಪಲಾಪುರ, ಕೊಡಾಲು, ರಾಜಾಪುರ, ತೋರಣಗಲ್ಲು, ಮಲ್ಲಾಪುರ, ಇಂಗಳಗಿ, ಲಿಂಗದಹಳ್ಳಿ, ಲಕ್ಷ್ಮೀಪುರ, ಕಾರ್ತಿಕೇಯ ಕ್ಷೇತ್ರ, ಬೈರನಾಯಕನ ಹಳ್ಳಿಗಳು ಪೂರ್ವ ಇತಿಹಾಸ ಕಾಲದ ತಾಣಗಳಾಗಿದ್ದವು ಎಂಬ ಬಗ್ಗೆ ಗಮನಿಸಲಾಗಿದೆ.

ಕರ್ನಾಟಕದ ಚರಿತ್ರೆಯಲ್ಲಿ ಸಂಡೂರು ತಾಲ್ಲೂಕಿಗೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಬಹಳ ಮುಖ್ಯವಾಗಿ ಪ್ರವಾಸಕ್ಕೆ ಹೆಸರುವಾಸಿಯಾಗಿದೆ. ಹಾಗೆಯೇ ಸಂಡೂರು ಶೀತಲ ಹವೆಗೆ ಪ್ರಸಿದ್ಧವಾಗಿದೆ. ಈ ತಾಲ್ಲೂಕಿನಲ್ಲಿ ಕಂಡುಬರುವ ಪ್ರಾಕೃತಿಕ ತಾಣಗಳ ಬಗ್ಗೆ ಹೆಚ್ಚು ಗಮನಿಸಲಾಗಿದೆ. ದಿನನಿತ್ಯ ನೋಡುವಂತ ಸ್ಥಳಗಳೇ ಪ್ರಕೃತಿಯಿಂದ ಹುಟ್ಟಿಕೊಂಡಿವೆ ಎಂಬುದನ್ನು ತಿಳಿಯದೆ ಇರುವ ಜನರಿಗೆ ತಿಳಿಸಲು ಈ ಅಧ್ಯಯನವನ್ನು ಕೈಗೊಂಡಿದ್ದೇನೆ. ದೇವಸ್ಥಾನಗಳ ಅತ್ತಿರ ಇರುವಂತ ಜಲವಿಹಾರಗಳ ಬಗ್ಗೆ ತಿಳಿಸಲು ಪ್ರಮುಖವಾದ ಧಾರ್ಮಿಕ ತೀರ್ಥಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಒಟ್ಟಾರೆಯಾಗಿ ಸಂಡೂರು ಕೇವಲ ಗಣಿಗಾರಿಕೆಗೆ ಸೀಮಿತವಾಗಿರದೆ ಚಾರಿತ್ರಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ, ಐತಿಹಾಸಿಕ ಮಹತ್ವವನ್ನು ಹೊಂದಿರುವ ಪ್ರದೇಶವಾಗಿದೆ ಎಂಬುದು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

**ಅಧ್ಯಯನದ ಫಲಿತಗಳು**

ಸಂಡೂರು ಬಳ್ಳಾರಿ ಜಿಲ್ಲೆಯ ಒಂದು ತಾಲ್ಲೂಕು. ಇತಿಹಾಸ ಪೂರ್ವಕಾಲ ಹಾಗೂ ಪುರಾಣಗಳ ಕಾಲದಿಂದ ಸಂಡೂರು ತನ್ನದೇ ಆದ ಸಾಂಸ್ಕೃತಿಕ ಇತಿಹಾಸ ಪರಂಪರೆಯನ್ನು ಹೊಂದಿದೆ. ಅಲ್ಲದೇ ವಿಶೇಷ ಭೌಗೋಳಿಕ ಖನಿಜಸಂಪತ್ತು, ಪ್ರಾಕೃತಿಕ ಸೌಂದರ್ಯ ಸಂಪತ್ತು ಮತ್ತು ಹಿತಕರ ಹವಾಗುಣವನ್ನು ಹೊಂದಿ ಭವ್ಯ ಸಾಂಸ್ಕೃತಿಕ ಪರಂಪರೆ ಹಾಗೂ ವೈಶಿಷ್ಟ್ಯತೆಯ ಬಗ್ಗೆ ವಿವರಿಸಲಾಗಿದೆ. ಸಂಡೂರು ತಾಲ್ಲೂಕಿನ ಪ್ರವಾಸಿ ತಾಣಗಳ ವಿಷಯವನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡುವುದು ಈ ಪ್ರಬಂಧದ ಉದ್ದೇಶವಾಗಿದೆ. ಈಗಾಗಲೇ ಸಂಡೂರಿನ ಬಗ್ಗೆ ಕೆಲವು ಪುಸ್ತಕಗಳು ಬಂದಿರುವುದನ್ನು ಕಾಣುತ್ತೇವೆ. ಆದರೆ ಸಂಡೂರಿನ ಪರಿಸರದ ಬಗ್ಗೆ ಕ್ಷೇತ್ರಕಾರ್ಯವನ್ನು ಮಾಡಿ ಮಾಹಿತಿ ಸಂಗ್ರಹಿಸಿ ಒಂದೆಡೆ ಕಟ್ಟಿಕೊಡುವಂತ ಕೆಲಸವನ್ನು ಮಾಡಲಾಗಿದೆ.

ಈ ಪ್ರದೇಶವನ್ನು ನೋಡಲು ಬಹಳ ಮುಖ್ಯವಾಗಿ ಬೇಕಾಗಿರುವುದು ಸ್ಥಳಗಳ ವಿವರ ಏಕೆಂದರೆ ನಾವು ಪ್ರವಾಸಕ್ಕೆ ಹೋದಾಗ ಹಲವಾರು ತೊಂದರೆಗಳನ್ನು ಎದುರಿಸುತ್ತೇವೆ. ಹಾಗೆಯೇ ಮಾಹಿತಿ ನೀಡುವವರು ತಪ್ಪಾಗಿ ನೀಡುವಂತ ಸನ್ನಿವೇಶಗಳನ್ನು ನೋಡಿದ್ದೇವೆ . ಇಂತಹ ತೊಂದರೆಗಳು ಆಗಬಾರದು ಎಂದು ಈ ಅಧ್ಯಯನವನ್ನು ಕೈಗೊಂಡಿದ್ದೇನೆ. ಸಂಡೂರಿನಲ್ಲಿ ನೈಸರ್ಗಿಕವಾಗಿ ಹುಟ್ಟಿಕೊಂಡಂತ ಅನೇಕ ಸ್ಥಳಗಳು, ಧಾರ್ಮಿಕ ತೀರ್ಥಗಳು,

ದೇವಾಲಯಗಳು ಪ್ರವಾಸಿ ತಾಣಗಳಾಗಿವೆ. ಜೊತೆಗೆ ಇಲ್ಲಿ ಆಳಿದ ಮನೆತನಗಳ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳನ್ನು ಮುಂದೆ ಬರುವಂತ ಮನೆತನಗಳ ಕಾಲದಲ್ಲಿ ಜೀರ್ಣೋದ್ಧಾರ ಮಾಡಲಾಗಿದೆ. ಅವುಗಳ ಶೈಲಿ ಮತ್ತು ಜಾತ್ರೆಗಳ ಬಗ್ಗೆ ಮಾಹಿತಿ ನೀಡಲಾಗಿದೆ.

ಗಣಿಗಾರಿಕೆಗೆ ಹೆಸರುವಾಸಿಯಾದಂತ ಈ ತಾಲ್ಲೂಕಿನಲ್ಲಿ ಕೆಲವು ಔದ್ಯೋಗಿಕ ಸ್ಥಳಗಳು ಇರುವುದನ್ನು ಕಾಣಬಹುದು. ಅದರಲ್ಲಿ ಬಹಳ ಮುಖ್ಯವಾಗಿ ದೋಣಿಮಲೆ, ಜಿಂದಾಲ್, ದೇವಗಿರಿ, ಸುಬ್ಬರಾಯನಹಳ್ಳಿಯ ಬಗ್ಗೆ ವಿವರಣೆ ನೀಡಲಾಗಿದೆ. ಜೊತೆಗೆ ಈ ತಾಲ್ಲೂಕಿನಲ್ಲಿ ಕೋಟೆಗಳಿಗೆ ಒಂದು ಸ್ಥಾನ ಇರುವುದನ್ನು ಕಾಣುತ್ತೇವೆ. ರಕ್ಷಣೆಗಾಗಿ ಕೋಟೆಯನ್ನು ಕಟ್ಟಿದ್ದರೆ, ನೀರಿಗಾಗಿ ಬಾವಿ ಮತ್ತು ಕೆರೆಗಳನ್ನು ಕಟ್ಟಿದ್ದರು. ಈಗ ಸಂಡೂರಿನಲ್ಲಿ ಕೃಷ್ಣಾನಗರದ ಕೋಟೆ ಇರುವುದನ್ನು ಕಾಣುತ್ತೇವೆ. ಜೊತೆಗೆ ಕರಡಿಗಳ ಸಂರಕ್ಷಣೆಗಾಗಿ ವಿಶೇಷವಾಗಿ ನಿರ್ಮಿಸಲ್ಪಟ್ಟ ಮತ್ತು ಸಂರಕ್ಷಿಸಲ್ಪಟ್ಟ ಪ್ರಸಿದ್ಧ ವನ್ಯಜೀವಿಧಾಮ ದರೋಜಿ ಕರಡಿಧಾಮ ಇದು ಸಂಡೂರು ತಾಲ್ಲೂಕಿನಲ್ಲಿ ಇರುವುದರ ಬಗ್ಗೆ ವಿವರಿಸಲಾಗಿದೆ.

ಪ್ರವಾಸೋದ್ಯಮ ಇಲಾಖೆ ಗೈಡ್‌ಗಳನ್ನು ನೇಮಿಸಿ, ಅಗತ್ಯವಿರುವಲ್ಲಿ ವಸತಿ, ಸಾರಿಗೆ ಸೇರಿ ಮೂಲಸೌಕರ್ಯ ಒದಗಿಸಿದಲ್ಲಿ ಇದೊಂದು ವಿಶಿಷ್ಟ ಪ್ರವಾಸಿ ತಾಣವಾಗುವ ಎಲ್ಲಾ ಅರ್ಹತೆಗಳನ್ನು ಹೊಂದಿದೆ.

ಸಂಡೂರಿಗೆ ಒಮ್ಮೆ ಬಂದಿದ್ದ ಗಾಂಧೀಜಿಯವರು "ಬಳ್ಳಾರಿ ಜಿಲ್ಲೆಯ ಓಯಸಿಸ್" ಮತ್ತು ಸೀ ಸಂಡೂರು ಇನ್ ಸೆಪ್ಟೆಂಬರ್ ಎಂದು ಕರೆದಿರುವುದನ್ನು ಕಾಣುತ್ತೇವೆ. ಹಾಗೆಯೇ ರಾಮಘಡವನ್ನು "ಬಳ್ಳಾರಿ ಜಿಲ್ಲೆಯ ಊಟಿ" ಎಂದು ಕರೆಯುತ್ತಾರೆ. ಹೊರಜಗತ್ತಿಗೆ "ಮಾನಸ ಸರೋವರ" ಎಂದು ಪ್ರಸಿದ್ಧವಾದ ಸಂಡೂರಿನ ಮುಖ್ಯ ಆಕರ್ಷಕ ಸ್ಥಳ ನಾರಿಹಳ್ಳ ಈ ತಾಲ್ಲೂಕು ಗಣಿಗಾರಿಕೆಗೆ ಮಾತ್ರ ಸೀಮಿತವಾಗಿರದೆ ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಐತಿಹಾಸಿಕ ಮಹತ್ವವನ್ನು ಹೊಂದಿರುವ ಪ್ರದೇಶ ಇದಾಗಿದೆ ಎಂದು ಇದರ ಬಗ್ಗೆ ಮಾಹಿತಿಯನ್ನು ವಿವರಿಸಲಾಗಿದೆ

## ಗ್ರಂಥಋಣ

ಅರುಣ ಜೋಳದ ಕೂಡ್ಲಿಗಿ, ೨೦೦೭, ಸೊಂಡೂರು ಭೂ ಹೋರಾಟ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಆಂಜಿನಪ್ಪ.ವಿ, ೨೦೧೨, ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ ದರ್ಶನ, ಚಂದ್ರ ಪ್ರಿಂಟರ್, ಬೆಂಗಳೂರು.

ಕೊಟ್ರೇಶ್ಎಂ, ೨೦೧೧, ಬಳ್ಳಾರಿ ಜಿಲ್ಲೆಯ ಕೋಟೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೌಂಡಿನ್ಯ,೨೦೧೧, ಕರ್ನಾಟಕದ ಪುಣ್ಯಕ್ಷೇತ್ರಗಳು, ಕೆ.ಕೆ.ಪ್ರಿಂಟರ್, ಬೆಂಗಳೂರು.

ಕರಿಬಸಪ್ಪ.ಎ, ೨೦೦೯, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಮಣಿ ಪ್ರಕಾಶನ, ಹೊಸಪೇಟೆ.

ಕಲಬುರ್ಗಿಎಂ.ಎಂ, ೧೯೯೯, ಪ್ರಾಚೀನ ಕರ್ನಾಟಕ ಆಡಳಿತ ವಿಭಾಗಗಳು ಭಾಗ-೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿಎಂ.ಎಂ, ೧೯೯೪, ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧ ಬಳ್ಳಾರಿ ಜಿಲ್ಲೆ , ೧೯೯೮, ದೇವರ ಕೊಂಡಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕವೀಶ್ವರ, ೨೦೦೭, ಭಾರತದ ಪ್ರೇಕ್ಷಣೀಯ ಸ್ಥಳಗಳು, ಚಂದನ ಪ್ರಕಾಶನ, ಬೆಂಗಳೂರು.

ಗಿರಿಜಾ, ೨೦೦೭, ಸಂಡೂರು ಪರಿಸರದ ಶಾಸನಗಳು ಮತ್ತು ಉಲ್ಲೇಖಿತ ದೇವಾಲಯಗಳು, ಅಪ್ರಕಟಿತ ಪ್ರಬಂಧ

ಗಿರಿಜಾ, ೨೦೧೧, ಸಂಡೂರು ತಾಲ್ಲೂಕು : ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಚನ್ನ ಬಸವಯ್ಯ ಹಿರೇಮಠ, ೧೯೯೫, ಕುರುಗೋಡು ಸಿಂಧರು ಒಂದು ಅಧ್ಯಯನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಚಂದ್ರಶೇಖರಪ್ಪ ಟಿ.ಜಿ, ೨೦೦೩, ಭಾರತದ ಇತಿಹಾಸ, ಪೂರ್ಣ ಪ್ರಕಾಶನ, ಶಿವಮೊಗ್ಗ.

ದೇವರಾಜ ಎಸ್, ೨೦೧೨, ಕರ್ನಾಟಕದ ಪ್ರವಾಸಿ ತಾಣಗಳು, ದೇವರಾಜ ಎಸ್ ಪ್ರಕಾಶನ, ಬೆಂಗಳೂರು.

ನಾಗಯ್ಯ ಜೆ.ಎಂ, ೨೦೦೨, ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ.

ನಾರಾಯಣ ಆರ್.ಪಿ, ೨೦೧೧, ಕರ್ನಾಟಕದ ಜಿಲ್ಲೆಗಳು, ಸಚ್ಚಿನ್ ಪಬ್ಲಿಷರ್, ಬೆಂಗಳೂರು.

ಪ್ರದೀಪ್ ಕುಮಾರ್ ಹೆಬ್ರಿ, ೧೯೯೮, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು, ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು.

ಪುರುಷೋತ್ತಮ ರೆಡ್ಡಿ, ೧೯೯೦, ಖನಿಜಗಳು, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯದ, ಗುಲಬರ್ಗಾ.

ಮಹದೇವ ಸಿ, ೨೦೦೨, ಹೊಸಪೇಟೆ ತಾಲ್ಲೂಕು ದರ್ಶನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಹದೇವ ಸಿ. ೨೦೦೦, ವಿಜಯನಗರದ ಗಾರೆಶಿಲ್ಪ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಘೋತ್ತಮ ಎಂ.ಎಚ್, ೨೦೦೯, ಪ್ರೇಕ್ಷಣೀಯ ಭಾರತ, ಶ್ರೀಮತಿ ಭಾರತೀಬಾಯಿ ಪ್ರಕಾಶನ, ಮೈಸೂರು.

ರಾಜಶೇಖರಪ್ಪ ಬಿ, ೨೦೦೮, ವಿಜಯನಗರ ಅಧ್ಯಯನ, ಪ್ರಕಾಶನ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು.

ಲಕ್ಷ್ಮಣ್ ತೆಲಗಾವಿ, ೨೦೦೬, ಚರಿತ್ರೆ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಾಸುದೇವ ಬಡಿಗೇರ, ೨೦೧೫, ಬಳ್ಳಾರಿ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಾಸುದೇವ ಬಡಿಗೇರ, ೧೯೯೭, ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ, ಮಯಪ್ರಕಾಶನ, ಕಮಲಾಪುರ.

ವಾಸುದೇವನ್ ಸಿ.ಎಸ್, ೨೦೦೧, ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿರೂಪಾಕ್ಷ ಪೂಜಾರಹಳ್ಳಿ, ೨೦೦೪, ಬಳ್ಳಾರಿ ಜಿಲ್ಲೆಯ ಪಾಳೆಗಾರರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾಶಂಕರ, ೧೯೯೧, ಪ್ರವಾಸೋದ್ಯಮ ಹಾಗೂ ಕನ್ನಡದಲ್ಲಿ ಪ್ರವಾಸ ಸಾಹಿತ್ಯ, ಸ್ನೇಹ ಪ್ರಕಾಶನ, ಬೆಂಗಳೂರು.

**ಕನ್ನಡ ಲೇಖನಗಳು**

ಗೋಪಾಲ ಸಿ. ಆರ್, ೨೦೧೭, ಬೊಮ್ಮಘಟ್ಟ ಹುಲಿಕುಂಟೇರಾಯ, ಸ್ಕಂದ-ಮಂದಾರ ಸ್ಮರಣ ಸಂಚಿಕೆ, ಸಂಡೂರು.

ತಿಪ್ಪೇರುದ್ರ ಸಂಡೂರು, ೨೦೧೭, ಪ್ರವಾಸಿ ತಾಣಗಳ ಆಗರ-ಸಂಡೂರು, ಸ್ಕಂದ-ಮಂದಾರ ಸ್ಮರಣ ಸಂಚಿಕೆ, ಸಂಡೂರು

ನಾಗಭೂಷಣ ಎನ್.ಎಂ, ೧೯೯೫, ಸೊಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ, ಕರ್ನಾಟಕ ಇತಿಹಾಸ ದರ್ಶನ ಸಂಪುಟ-೧೦

ನಾಗಯ್ಯ ಜೆ.ಎಂ, ೧೯೯೫, ವಡ್ಡಾರಾಧನೆ ಸೂಚಿಸುವ ಬಸದಿ ಮತ್ತು ಸಂಡೂರು, ಕರ್ನಾಟಕ ಇತಿಹಾಸ ದರ್ಶನ ಸಂಪುಟ-೧೦

ಪುರುಷೋತ್ತಮ ರೆಡ್ಡಿ, ೨೦೦೨, ಸಂಡೂರು ಪ್ರದೇಶದ ಕಬ್ಬಿಣ ತಯಾರಿಕೆ ಒಂದು ಐತಿಹಾಸಿಕ ನೋಟ, ಕರ್ನಾಟಕ ಇತಿಹಾಸ ದರ್ಶನ ಸಂಪುಟ-೧೭.

ವೃಷಬೇಂದ್ರಾಚಾರ್ ಎ, ೨೦೦೪, ಸಂಡೂರು ತಾಲ್ಲೂಕಿನ ಐತಿಹಾಸಿಕ ಹಿನ್ನೆಲೆ-ಘೋರ್ಪಡೆಯವರ ಕಾಲ, ಲೋಹಾದ್ರಿಯ ಮಡಿಲು, ಸ್ಮರಣ ಸಂಚಿಕೆ.

## ಸಂಡೂರು ತಾಲ್ಲೂಕಿನ ಸ್ಥಳನಾಮಗಳು

| | | | | | |
|---|---|---|---|---|---|
| ೧ | ಅಗ್ರಹಾರ | ೩೧ | ತಾಳೂರು | ೬೧ | ಎರಬನಹಳ್ಳಿ |
| ೨ | ಅನಂತಪುರ | ೩೨ | ತಿಪ್ಪನಮರಡಿ | ೬೨ | ಎರ್ರಯ್ಯನಹಳ್ಳಿ |
| ೩ | ಅಪ್ಪಲಪುರ | ೩೩ | ತಿಮ್ಮಪ್ಪನಹಳ್ಳಿ | ೬೩ | ಯಶವಂತಪುರ |
| ೪ | ಅಯ್ಯನಳ್ಳಿ | ೩೪ | ತಿಮಮ್ಲಾಪುರ | ೬೪ | ರಣಜಿತಪುರ |
| ೫ | ಅಂಕಮನಳ್ಳಿ | ೩೫ | ತುಮತಿ | ೬೫ | ರಾಜಾಪುರ |
| ೬ | ಹಾವಿನಮಡುಗು | ೩೬ | ತುಣಸೀಗೆರೆ | ೬೬ | ರಾಧಾನಗರ |
| ೭ | ಹುಬ್ಬಳಗುಂಡಿ | ೩೭ | ತೋರಣಗಲ್ಲು | ೬೭ | ರಾಮಗಢ |
| ೮ | ಓಬಳಾಪುರ,ಎಸ್ | ೩೮ | ತೈದಿಗೆಹಾಳ | ೬೮ | ರಾಮನಮಲೆ |
| ೯ | ಎಮ್ಮಿಹಟ್ಟಿ | ೩೯ | ದರೋಜಿ | ೬೯ | ರಾಮಾಪುರ |
| ೧೦ | ಕನಕಪುರ | ೪೦ | ದೇವಗಿರಿ | ೭೦ | ರಾಮಸಾಗರ |
| ೧೧ | ಕಲ್ಲಹಳ್ಳಿ | ೪೧ | ದೇವರಬೂದೇನಹಳ್ಳಿ | ೭೧ | ಲಕ್ಕಲಹಳ್ಳಿ |
| ೧೨ | ಕಲಿಂಗೇರಿ | ೪೨ | ದೇವರ ಮಲ್ಲಾಪುರ | ೭೨ | ಲಕ್ಷ್ಮೀಪುರ |
| ೧೩ | ಕೃಷ್ಣಾನಗರ | ೪೩ | ದೋಣಿಮಲೆ | ೭೩ | ಲಿಂಗದಹಳ್ಳಿ |
| ೧೪ | ಕಾರ್ತಿಕೇಶ್ವರ | ೪೪ | ದೌಲತಾಪುರ | ೭೪ | ವಡ್ಡು |
| ೧೫ | ಕುರಿಕುಪ್ಪೆ | ೪೫ | ಧರ್ಮಪುರ | ೭೫ | ವಿಠಲಾಪುರ |
| ೧೬ | ಕೋಡಾಳ | ೪೬ | ನರಸಿಂಗಪುರ | ೭೬ | ಶಂಕರಪುರ |
| ೧೭ | ಗಂಗಲಾಪುರ,ಎಸ್ | ೪೭ | ನಾಗಲಾಪುರ | ೭೭ | ಸಾಲಿಯಪ್ಪನಹಳ್ಳಿ |

| | | | | | |
|---|---|---|---|---|---|
| ೧೮ | ಗುಂಡ್ಲಹಳ್ಳಿ | ೪೮ | ನಿಡುಗುರ್ತಿ | ೭೮ | ಸ್ವಾಮಿಮಲೆ |
| ೧೯ | ಗೊಲ್ಲರಹಳ್ಳಿ | ೪೯ | ಬನ್ನಿಹಟ್ಟಿ | ೭೯ | ಸಿದ್ದಾಪುರ |
| ೨೦ | ಗೊಲ್ಲಲಿಂಗಮ್ಮನಹಳ್ಳಿ | ೫೦ | ಬಸಾಪುರ | ೮೦ | ಜಯಸಿಂಗಪುರ |
| ೨೧ | ಗೌರೀಪುರ (ತೋರಣಗಲ್ಲು ಹೋಬಳಿ) | ೫೧ | ಬಸಾಪುರ,ಎಸ್ | ೮೧ | ಸುಶೀಲನಗರ |
| ೨೨ | ಗೌರೀಪುರ (ಸೊಂಡೂರು ಹೋಬಳಿ) | ೫೨ | ಬಂಡ್ರಿ | ೮೨ | ಸೊಂಡೂರು |
| ೨೩ | ಚಿಕ್ಕನಂತಪುರ | ೫೩ | ಭುಜಂಗನಗರ | ೮೩ | ಸೋಮಲಾಪುರ |
| ೨೪ | ಚಿಕ್ಕಕೆರಿಯಾಗಿನಹಳ್ಳಿ | ೫೪ | ಬೊಮ್ಮಗಟ್ಟ | ೮೪ | ಸೋವೇನಹಳ್ಳಿ |
| ೨೫ | ಚೋರನೂರು | ೫೫ | ಮರುತಲ | ೮೫ | ಹನುಮನಳ್ಳಿ |
| ೨೬ | ಜಿನಗಳ್ಳಿ | ೫೬ | ಮಲ್ಲಾಪುರ | ೮೬ | ಹಿರೇಕೆರೆಮಾಗಿನಹಳ್ಳಿ |
| ೨೭ | ಜೋಗ | ೫೭ | ಮಾಲಾಪುರ | ೮೭ | ಹುಲಿಕುಂಟೆ (ಚೋರನೂರು ಹೋಬಳಿ) |
| ೨೮ | ಜೋಡಿಕರಿನಾಯಕನಹಳ್ಳಿ | ೫೮ | ಮುರಾರಿಪುರ | ೮೮ | ಹುಲಿಕುಂಟೆ (ಸೊಂಡೂರು ಹೋಬಳಿ) |
| ೨೯ | ಜೋಡಿಬೊಮ್ಮನಹಳ್ಳಿ | ೫೯ | ಮುಸನಾಯಕನಹಳ್ಳಿ | | |
| ೩೦ | ತಾರಾನಗರ | ೬೦ | ಮೆಟ್ರಿಕಿ | | |

ನಕ್ಷೆಗಳು

ಕರ್ನಾಟಕ ರಾಜ್ಯ



## ಬಳ್ಳಾರಿ ಜಿಲ್ಲೆ




## ಸಂಡೂರು ತಾಲೂಕು



ಛಾಯಾಚಿತ್ರಗಳು

ಪ್ರಾಕೃತಿಕ ತಾಣಗಳು



ಸಂಡೂರಿನ ಪ್ರಾಕೃತಿಕ ರಮ್ಯ ನೋಟ




ಮಹಾತ್ಮ ಗಾಂಧೀಜಿಯವರು ಉದ್ಗಾರವೆತ್ತಿರುವ 'ಸೀ ಸೆಪ್ಟಂಬರ್ ಇನ್ ಸಂಡೂರು' ಎಂಬ ಮಾತಿನ ಉಲ್ಲೇಖ



ನೀಲಕುರಂಜಿ



ನಾರಿಹಳ್ಳ ಜಲಾಶಯ







ಗಣಿಗಾರಿಕೆ ಪ್ರದೇಶದ ನೋಟ






ಕುಮಾರಸ್ವಾಮಿ ದೇವಸ್ಥಾನ



ಸಂಡೂರಿನ ಕುಮಾರಸ್ವಾಮಿ ಬೆಟ್ಟದ ಪಾರ್ವತಿ ದೇವಸ್ಥಾನ



ಶ್ರೀ ಲಕ್ಷ್ಮೀ ಗಂಡಿನರಸಿಂಹಸ್ವಾಮಿ ದೇವಸ್ಥಾನ , ಧರ್ಮಪುರ



ನವಿಲುಸ್ವಾಮಿ ದೇವಸ್ಥಾನದ ಹೊರ ನೋಟ



ನವಿಲುಸ್ವಾಮಿ ದೇವಾಲಯದ ಗರ್ಭಗೃಹ



ನವಿಲುಸ್ವಾಮಿ ದೇವಸ್ಥಾನದಲ್ಲಿನ ಶಾಸನ



ನವಿಲುಸ್ವಾಮಿ ದೇವಸ್ಥಾನದ ಶಾಸನ



ಹರಿಶಂಕರ ತೀರ್ಥ



ಅಗಸ್ತ್ಯ ತೀರ್ಥ



ಭೀಮ ತೀರ್ಥ



ನವಿಲುಸ್ವಾಮಿ ತೀರ್ಥ



ಸಂಡೂರಿನ ಅರಮನೆ ಪ್ರವೇಶ ದ್ವಾರ




ಸಂಡೂರು ಮಹಾರಾಜರ ಅರಮನೆಯ ಶಿಲಾನ್ಯಾಸ



ಸಂಡೂರು ಮಹಾರಾಜರ ಗ್ರಂಥಾಲಯದ ನೋಟ



ಕೃಷ್ಣಾನಗರ ಕೋಟೆ

